# ಶ್ರೀ ಕೃಷ್ಣನು

## ದೇವರಾ! ಭಗವಂತನಾ!!

## ದೇವರೇ ಭಗವಂತನೇ



ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org





# ಶ್ರೀ ಕೃಷ್ಣನು
# ದೇವರಾ! ಭಗವಂತನಾ!!


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಡಿಸೆಂಬರ್ –2016

ಪ್ರತಿಗಳು : 1000 **ಬೆಲೆ. 190/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣೆ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ– ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ– ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ– ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು– ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ – ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

DVD's

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
     ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : ಲಕ್ಷ್ಮಿನಾರಾಯಣಾಚಾರಿ–09440556968. ವೆಂಕಟೇಶ್–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಶ್ರೀ ಕೃಷ್ಣನು ದೇವರಾ! ಭಗವಂತನಾ!! 09

ಇಂದಿನ ಪ್ರಜೆಗಳಿಗೆಲ್ಲಾ ತಿಳಿದ ಪ್ರಕಾರ ದೇವರೆಂದರೂ, ಭಗವಂತನೆಂದರೂ ಎರಡೂ ಒಂದೇ ಎನ್ನುವ ಭಾವನೆಯಿಂದ ಇದ್ದಾರೆ. ಬಹಳ ಜನ ಸ್ವಾಮೀಜಿಗಳು ಸಹ ತಮ್ಮ ತಮ್ಮ ಉಪನ್ಯಾಸಗಳಲ್ಲಿ ಸೃಷ್ಟಿಕರ್ತನಾದ ಪರಮಾತ್ಮನನ್ನು ಕುರಿತು ತಿಳಿಸುವಾಗ ಒಂದುಸಲ ದೇವರೆಂದು, ಮತ್ತೊಂದುಸಲ ಭಗವಂತನೆಂದು ಬೋಧಿಸುವುದು ಅಭ್ಯಾಸವಾಗಿದೆ. ಇದನ್ನನುಸರಿಸಿ ಇತ್ತ ಪ್ರಜೆಗಳ ದೃಷ್ಟಿಯಲ್ಲಿಯೂ, ಅತ್ತ ಬೋಧಕರಾದ ಸ್ವಾಮೀಜಿಗಳ ದೃಷ್ಟಿಯಲ್ಲಿಯೂ ದೇವರಿಗೂ, ಭಗವಂತನಿಗೂ ಏನು ವ್ಯತ್ಯಾಸ ಇಲ್ಲವೆಂದೂ, ಆದ್ದರಿಂದ ಅವರು ಆ ಪದಗಳನ್ನು ಬಳಸುತ್ತಿದ್ದಾರೆಂದು ತಿಳಿಯುತ್ತಿದೆ. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಇದು ಬಹಳ ಮುಖ್ಯವಾದ ವಿಷಯ, ಎಲ್ಲರಿಗೂ ಅಗತ್ಯವಾದ ವಿಷಯ. ಆದ್ದರಿಂದ ದೇವರು ಮತ್ತು ಭಗವಂತನು ಎನ್ನುವ ಪದಗಳಿಗೆ ಶಾಸ್ತ್ರೀಯತೆ ಇದೆಯಾ? ಇಲ್ಲವಾ? ಎಂದು ಯೋಚಿಸಬೇಕಾದ ಅವಶ್ಯಕತೆ ಇದೆ. ಅಷ್ಟೇ ಅಲ್ಲದೆ ಒಂದು ಕೆಲಸವನ್ನು ಮಾಡುವುದಕ್ಕೆ ಒಂದು ಕಾರಣವಿರುತ್ತದೆ. ಹಾಗೆಯೇ ಒಂದು ಪದವನ್ನು ಹೇಳುವುದಕ್ಕೂ ಸಹ ಕಾರಣವಿರುತ್ತದೆ. ಅಂತಹ ಕಾರಣವನ್ನೇ ಹೇತು ಎನ್ನುತ್ತೇವೆ. ಇಲ್ಲಿ ದೇವರು ಎನ್ನುವುದಕ್ಕೂ, ಭಗವಂತನು ಎನ್ನುವುದಕ್ಕೂ ಹೇತುವನ್ನು ತೋರಿಸದಿದ್ದರೆ ಅದು ಹೇತುಬದ್ಧವಲ್ಲ. ಹೇತುವಾದಿಗಳು ಒಪ್ಪಿಕೊಳ್ಳುವುದಿಲ್ಲ. ನಾಸ್ತಿಕವಾದಿಗಳು ಒಪ್ಪಿಕೊಳ್ಳದೆಹೋದರು ಪರವಾಗಿಲ್ಲ. ಆದರೆ ಹೇತುವಾದಿಗಳು ತಪ್ಪದೆ ಒಪ್ಪಿಕೊಳ್ಳಬೇಕಾಗಿದೆ. ಎಲ್ಲಿಯಾದರೆ ಶಾಸ್ತ್ರೀಯತೆ ಇರುತ್ತದೋ ಅಲ್ಲಿ ಹೇತುವಾದಕ್ಕೆ ಉತ್ತರ ಇದ್ದಂತೆ. ಎಲ್ಲಿಯಾದರೆ ಶಾಸ್ತ್ರೀಯತೆ ಇಲ್ಲವೋ ಅಲ್ಲಿ ಹೇತುವಾದಕ್ಕೆ ಉತ್ತರ ಇಲ್ಲದಂತೆ. ಹೇತುವಾದಕ್ಕೆ ಶಾಸ್ತ್ರಪದ್ಧತಿಯೇ ನಿಜವಾದ ಉತ್ತರ. ಆದ್ದರಿಂದ ನಾವು ದೇವರು, ಭಗವಂತನು ಎನ್ನುವ ಪದಗಳಿಗೆ ಶಾಸ್ತ್ರೀಯತೆಯನ್ನು ಹುಡುಕಬೇಕು.

ಒಂದುಸಲ ನನ್ನ ಚಿಕ್ಕವಯಸ್ಸಿನಲ್ಲಿ ಒಬ್ಬ ಸ್ವಾಮೀಜಿಯನ್ನು ತಿರುಪತಿ ಕಪಿಲ ತೀರ್ಥದಹತ್ತಿರ ಬೇಟಿಯಾಗಿ ದೇವರು ಎಂದರೆ ಅರ್ಥ ಏನು? ಭಗವಂತನು ಎಂದರೆ ಅರ್ಥ ಏನು? ಎಂದು ನಾನು ಕೇಳಿರುವುದು ನಡೆದಿದೆ. ಅದಕ್ಕೆ ಆ ಸ್ವಾಮೀಜಿ ಈ ವಿಧವಾಗಿ ಸಮಾಧಾನ ಹೇಳಿದ್ದಾರೆ.

**ಸ್ವಾಮೀಜಿ :–** ದೇವರಿಗೆ ಎಷ್ಟೋ ಹೆಸರುಗಳು ಇವೆ. ಅದರಲ್ಲಿ ಎಲ್ಲರಿಗೂ ತಿಳಿದಿರುವವು ದೇವರು, ಭಗವಂತನು.

**ನಾನು :–** ಇನ್ನೂ ಎಷ್ಟು ಹೆಸರುಗಳಿವೆಯೋ ಹೇಳಿರಿ ಸ್ವಾಮಿ?

**ಸ್ವಾಮೀಜಿ :–** ವಿಷ್ಣು, ನಾರಾಯಣ, ಕೇಶವ, ಮಾಧವ, ಲಕ್ಷ್ಮೀಪತಿ, ವೈಕುಂಠಪತಿ, ಬ್ರಹ್ಮಪಿತಾ ಹೀಗೆ ಅನೇಕ ಹೆಸರುಗಳು ಇವೆ. ಒಂದುಸಲ ವಿಷ್ಣು ಸಹಸ್ರನಾಮಾವಳಿ ನೋಡು ತಿಳಿಯುತ್ತದೆ. ಅದರಲ್ಲಿ ಸಾವಿರ ಹೆಸರುಗಳಿವೆ.

**ನಾನು :–** ಆದರೆ ವಿಷ್ಣುವೇ ದೇವರು, ಭಗವಂತನು ಎಂದು ಕರೆಯುತ್ತಿದ್ದೇವಾ?

**ಸ್ವಾಮೀಜಿ :–** ವಿಷ್ಣುವೇ ಸಮಸ್ತ ದೇವತೆಗಳಿಗೂ ದೊಡ್ಡವರು. ಆದ್ದರಿಂದ ಆತನನ್ನೇ ನಾವೆಲ್ಲರೂ ದೇವರೆಂದು, ಭಗವಂತನೆಂದು, ವೈಕುಂಠಪತಿ ಎಂದು ಕರೆಯುತ್ತಿದ್ದೇವೆ. ವೆಂಕಟೇಶ್ವರನು ಸಹ ಆತನೇ ಅಲ್ಲವೆ!

ಈ ವಿಧವಾಗಿ ಒಬ್ಬ ಸ್ವಾಮೀಜಿಯೇ ಹೇಳಿದಾಗ ಸಾಧಾರಣ ಮಾನವನು ಕೇಳದೆ ಇರುತ್ತಾನೆಯೇ, ಆದರೆ ನಾನು ಅಲ್ಲಿಗೆ ತೃಪ್ತಿಹೊಂದದೆ ಹೇತುಬದ್ಧವಾಗಿ ಪರಿಶೋಧಿಸಬೇಕೆಂದುಕೊಂಡೆನು. ಆ ಪ್ರಯತ್ನದಲ್ಲಿ ನನ್ನ ಮೊದಲ ಪ್ರಶ್ನೆ ಈ ವಿಧವಾಗಿ ಇದೆ. ವಿಷ್ಣು ದೇವರಾ? ದೇವರು ಭಗವಂತನಾ? ಭಗವಂತನು ಯಾರು? ದೇವರು ಯಾರು? ಎನ್ನುವ ಈ ಪ್ರಶ್ನೆಗಳಿಗೆ ಉತ್ತರ ಬೇಕೆಂದರೆ ಎಲ್ಲಿ ಹುಡುಕಬೇಕು? ನಾಲ್ಕು ವೇದಗಳಲ್ಲಿಯಾ? ಆರು ಶಾಸ್ತ್ರಗಳಲ್ಲಿಯಾ? ಹದಿನೆಂಟು ಪುರಾಣಗಳಲ್ಲಿಯಾ? ನಾವು ನೋಡಬೇಕಾಗಿರುವವು, ನಮಗೆ ಹಿರಿಯರು ತಿಳಿಸಿರುವವು, ವೇದಗಳು, ಪುರಾಣಗಳು. ಶಾಸ್ತ್ರಗಳು. ಆದರೆ ಭೂಮಿಮೇಲೆ ಆಧ್ಯಾತ್ಮಿಕ ವಿಷಯಗಳಿಗೋಸ್ಕರ ನೂರಕ್ಕೆ 95 ಜನರು ವೇದಗಳ ಮೇಲೆ ಆಧಾರಪಡುತ್ತಿದ್ದಾರೆ. ಉಳಿದವರಲ್ಲಿ ನಾಲ್ಕುಜನರು ಪುರಾಣಗಳ ಮೇಲೆ ಆಧಾರಪಡುತ್ತಿದ್ದಾರೆ. ಒಬ್ಬನು ಮಾತ್ರ ವೇದಗಳನ್ನು ಸ್ವಲ್ಪ, ಪುರಾಣಗಳನ್ನು ಸ್ವಲ್ಪ, ಶಾಸ್ತ್ರಗಳನ್ನು ಸ್ವಲ್ಪ ಬೆರೆಸಿಕೊಂಡು ನೋಡುತ್ತಿದ್ದಾನೆ. ಉಳಿದ 99 ಜನರು ಸಹ ಅವಶ್ಯಕತೆಯನ್ನನುಸರಿಸಿ ಶಾಸ್ತ್ರದ ಹೆಸರು ಹೇಳುತ್ತಿದ್ದರು ಅವರು ಹೇಳುವುದು

ಶಾಸ್ತ್ರಕ್ಕೆ ಸಂಬಂಧಿಸಿ ಯಾವಮಾತ್ರವು ಇರುವುದಿಲ್ಲ. ಉದಾಹರಣೆಗೆ ಒಬ್ಬ ಸ್ವಾಮೀಜಿ ಒಂದು ದೇವತೆಯೊಂದರ ಆರಾಧನೆಯನ್ನು ಕುರಿತು ಹೇಳುವಾಗ, ಮಾವಿನ ಎಲೆಯಿಂದ ನೀರು ಹೀಗೆ ದೇವತೆ ಮೇಲೆ ಚೆಲ್ಲಬೇಕು, ಶಾಸ್ತ್ರ ಈ ವಿಧವಾಗಿ ಹೇಳಿದೆ. ಆದ್ದರಿಂದ ಹೀಗೆ ತಪ್ಪದೆ ಮಾಡಬೇಕೆಂದು ಹೇಳುತ್ತಿರುವುದನ್ನು ನಾನು ಕೇಳಿದ್ದೇನೆ. ದೇವರಿಗೆ ಸಂಬಂಧಿಸಿದ ಆರನೇ ಶಾಸ್ತ್ರದಲ್ಲಿ ಹಾಗೆ ಎಲ್ಲಿಯೂ ಹೇಳಲಿಲ್ಲ. ಆದರೂ ಆ ಸ್ವಾಮೀಜಿ ಹಾಗೆ ವೇದಗಳಲ್ಲಿನ ವಿಷಯವನ್ನೋ, ಪುರಾಣಗಳಲ್ಲಿನ ವಿಷಯವನ್ನೋ ತೆಗೆದು ಕೊಂಡು ಬಂದು ಶಾಸ್ತ್ರದ ಹೆಸರು ಹೇಳುತ್ತಿದ್ದಾನೆಂದು ಅರ್ಥವಾಗುತ್ತಿದೆ. ಈ ವಿಧವಾಗಿ ಬಹಳಜನ ಬೋಧಕರು ತಾವು ಹೇಳುತ್ತಿರುವ ಮಾತುಗಳು ನಿಜವಾಗಲು ಯಾವ ಶಾಸ್ತ್ರಕ್ಕೂ ಸಂಬಂಧವಿಲ್ಲದಿದ್ದರೂ, ಶಾಸ್ತ್ರ ಹೀಗೆ ಹೇಳಿದೆ ಎನ್ನುವುದು ಅಭ್ಯಾಸವಾಗಿದೆ. ಇನ್ನೊಂದು ವಿಚಿತ್ರವೇನೆಂದರೆ ಹೇಳುವ ಮಾತು ಪುರಾಣಗಳಲ್ಲಿನದಾಗಲಿ, ಶಾಸ್ತ್ರದಲ್ಲಿನದಾಗಲಿ, ವೇದಗಳಲ್ಲಿನದಾಗಲಿ ಯಾವುದು ಅಲ್ಲದಿದ್ದರೂ ಅದನ್ನು ಕೂಡ ಶಾಸ್ತ್ರ ಹೀಗೆ ಹೇಳಿದೆ ಎಂದು ಬೋಧಿಸುತ್ತಿದ್ದಾರೆ. ಇದು ಬಹಳಕಡೆ ಕಾಣಿಸುವ ದೊಡ್ಡತಪ್ಪು, ಆದರೂ ಯಾರೂ ಅದನ್ನು ತಪ್ಪಾಗಿ ಗುರುತಿಸುತ್ತಿಲ್ಲ.

ಹೇಳುವ ವಿಷಯಕ್ಕೆ ಶಾಸ್ತ್ರವನ್ನು ಆಧಾರ ಪದವಾಗಿ ಜೋಡಿಸಿ ಹೇಳುವುದಲ್ಲದೆ, ಬರೆಯುವ ವಿಷಯಕ್ಕೆ ಕೂಡ ಶಾಸ್ತ್ರ ಎನ್ನುವ ಪದವನ್ನು ಜೋಡಿಸುವುದು ನಡೆಯುತ್ತಿದೆ. ಒಂದು ಪುಸ್ತಕವನ್ನು ತೆರೆದು ನೋಡಿದರೆ ಅದರಲ್ಲಿ ಇತ್ತ ಪುರಾಣ ವಿಷಯಗಳಾಗಲಿ, ಅತ್ತ ವೇದಗಳ ವಿಷಯಗಳಾಗಲಿ, ಶಾಸ್ತ್ರಗಳಿಗೆ ಸಂಬಂಧಿಸಿದ ವಿಷಯಗಳಾಗಲಿ ಯಾವಮಾತ್ರವೂ ಇರುವುದಿಲ್ಲ. ಅದರೂ ಆ ಪುಸ್ತಕದ ಹೆಸರು ಕೊನೆಯಲ್ಲಿ ಶಾಸ್ತ್ರ ಎಂದು ಇರುತ್ತದೆ. ಉದಾಹರಣೆಗೆ ಒಬ್ಬ ರಚನಕಾರ ಪ್ರೀತಿಯನ್ನು ಕುರಿತು ಪುಸ್ತಕವನ್ನು ಬರೆದಿದ್ದಾನೆ. ಅದರಲ್ಲಿ ಹೆಂಡತಿಯನ್ನು ಹೀಗೆ ಪ್ರೀತಿಸಬೇಕೆಂದು, ತಾಯಿಯನ್ನು ಹೀಗೆ ಪ್ರೀತಿಸಬೇಕೆಂದು, ಸೋದರರನ್ನು ಹೀಗೆ ಪ್ರೀತಿಸಬೇಕೆಂದು, ಪ್ರಾಣಿಗಳನ್ನು

ಹೀಗೆ ಪ್ರೀತಿಸಬೇಕೆಂದು ಬರೆದು ಆ ಪುಸ್ತಕಕ್ಕೆ ಪ್ರೇಮಶಾಸ್ತ್ರ ಎಂದು ಹೆಸರು ಇಟ್ಟಿದ್ದಾನೆ. ಮತ್ತೊಬ್ಬರೇನೊ ಕೆಲವು ಕಾಮಸೂತ್ರಗಳನ್ನು ಬರೆದು ಅದಕ್ಕೆ ಕಾಮಶಾಸ್ತ್ರ ಎಂದು ಹೆಸರು ಇಟ್ಟಿದ್ದಾನೆ. ಇನ್ನೊಬ್ಬನು ಎಂಟು ದಿಕ್ಕುಗಳ ಹೆಸರುಗಳನ್ನು ಬರೆದು, ಆ ದಿಕ್ಕುಗಳಲ್ಲಿ ಹೀಗೆ ಗೃಹವನ್ನು ನಿರ್ಮಿಸಿಕೊಳ್ಳಬೇಕೆಂದು ಕೆಲವು ಪದ್ಧತಿಗಳನ್ನು ಹೇಳಿ ಅದಕ್ಕೆ ವಾಸ್ತುಶಾಸ್ತ್ರ ಎಂದು ಹೆಸರು ಇಟ್ಟಿದ್ದಾನೆ. ಮತ್ತೊಬ್ಬ ಸ್ವಾಮಿ ಸುಳ್ಳನ್ನು ಹೇಳಬಾರದು, ಸತ್ಯವನ್ನೇ ಹೇಳಬೇಕು, ನೀತಿರಹಿತವಾದ ಕೆಲಸಗಳನ್ನು ಮಾಡಬಾರದು, ಚಾಡಿಮಾತುಗಳನ್ನಾಡಬಾರದು, ಜೂಜವಾಡಬಾರದು ಎಂದು ಕೆಲವು ಒಳ್ಳೆಯ ವಾಕ್ಯಗಳನ್ನು ಬರೆದು ಅದಕ್ಕೆ ನೀತಿಶಾಸ್ತ್ರ ಎಂದು ಹೆಸರು ಇಟ್ಟಿದ್ದಾನೆ. ಹೀಗೆ ಪ್ರೇಮಶಾಸ್ತ್ರ, ಕಾಮಶಾಸ್ತ್ರ, ವಾಸ್ತುಶಾಸ್ತ್ರ, ನೀತಿಶಾಸ್ತ್ರ, ನಾಡಿಶಾಸ್ತ್ರ, ಭಕ್ತಿಶಾಸ್ತ್ರ, ಮುಕ್ತಿಶಾಸ್ತ್ರ, ರಕ್ತಿಶಾಸ್ತ್ರ, ವೃಕ್ಷಶಾಸ್ತ್ರ, ಅಷ್ಟದಿಕ್ಕುಗಳ ಆರೂಢ ಶಾಸ್ತ್ರ, ಶರೀರಧಾರುಡ್ಯಶಾಸ್ತ್ರ, ಮೂಲಿಕೆಯ ಔಷಧಶಾಸ್ತ್ರ ಹೀಗೆ ಎಷ್ಟೋ ವಿಷಯಗಳು ಶಾಸ್ತ್ರಗಳ ಹೆಸರಿನಿಂದ ಬರೆಯಲ್ಪಟ್ಟಿವೆ. ನಿಜವಾಗಲು ಇವೆಲ್ಲಾ ಶಾಸ್ತ್ರಗಳೇನಾ ಎಂದು ಪ್ರಶ್ನಿಸಿಕೊಂಡು ನೋಡಿದರೆ ಶಾಸ್ತ್ರಗಳು ಯಾವಮಾತ್ರವು ಅಲ್ಲ. ಇವೆಲ್ಲಾ ಶಾಸ್ತ್ರಗಳು ಅಲ್ಲ ಎನ್ನುವ ವಿಷಯ ಹೊಸ ಪೀಳಿಗೆಯವರಿಗೆ ತಿಳಿದಿಲ್ಲ.

ಶಾಸ್ತ್ರಗಳು ಎಷ್ಟು? ಎನ್ನುವ ಸತ್ಯ ತಿಳಿದಾಗ, ಅವು ಯಾವುವು? ಎನ್ನುವ ವಿಷಯ ತಿಳಿದಾಗ ಮಾತ್ರವೇ ಉಳಿದವು ಎಷ್ಟು ಇದ್ದರೂ, ಅವು ಶಾಸ್ತ್ರಗಳು ಅಲ್ಲ ಎನ್ನುವ ವಿಷಯ ತಿಳಿಯುತ್ತದೆ. ತಿನ್ನುವ ಅಡಿಗೆಗಳು ಮಾಡುವ ವಿಷಯಗಳನ್ನು ಪುಸ್ತಕರೂಪದಲ್ಲಿ ಬರೆದು ಅದಕ್ಕೆ ಪಾಕಶಾಸ್ತ್ರ ಎಂದು ಹೆಸರಿಟ್ಟು ಈ ಕಾಲದಲ್ಲಿ, ವಾಸ್ತವವಾದ ಷಟ್ (ಆರು) ಶಾಸ್ತ್ರಗಳನ್ನು ಗುರುತಿಸಲಾರದೆ ಹೋಗುತ್ತಿದ್ದೇವೆ. ದೇವರು ಹಾಗೂ ಭಗವಂತನು ಎನ್ನುವ ವಿಷಯಕ್ಕಾಗಲಿ, ವಿವರಕ್ಕಾಗಲಿ ಶಾಸ್ತ್ರ ಪ್ರಮಾಣ ಅಗತ್ಯವಾದಾಗ, ಯಾವ ಶಾಸ್ತ್ರವನ್ನು ಅನುಸರಿಸಬೇಕೊ ತಿಳಿಯದ ಸ್ಥಿತಿಯಲ್ಲಿ ಇಂದಿನ ಮಾನವನಿದ್ದಾನೆ. ಈ ಅಯೋಮಯ ಸ್ಥಿತಿ ಇಲ್ಲದಂತಾಗಿ ನೈಜವಾದ ಶಾಸ್ತ್ರ ಭಾವವನ್ನು ತಿಳಿಯುವುದಕ್ಕೆ

ಶಾಸ್ತ್ರಗಳನ್ನು, ಪುರಾಣಗಳನ್ನು, ವೇದಗಳನ್ನು ಕುರಿತು ಮೊದಲು ತಿಳಿದಿರಬೇಕು. ಆದ್ದರಿಂದ ನಾಲ್ಕು ವೇದಗಳನ್ನು, ಹದಿನೆಂಟು ಪುರಾಣಗಳನ್ನು, ಆರು ಶಾಸ್ತ್ರಗಳನ್ನು ಕುರಿತು ತಿಳಿದುಕೊಳ್ಳೋಣ.

**ವೇದಗಳು ನಾಲ್ಕು :–** 1) ಯಜುರ್ವೇದ 2) ಋಗ್ವೇದ 3) ಅಥರ್ವಣವೇದ 4) ಸಾಮವೇದ.

**ಪುರಾಣಗಳು ಹದಿನೆಂಟು :–** 1) ಬ್ರಹ್ಮ ಪುರಾಣ 2) ಪದ್ಮ ಪುರಾಣ 3) ವಿಷ್ಣು ಪುರಾಣ 4) ಶಿವ ಪುರಾಣ 5) ಭಾಗವತ 6) ನಾರದ ಪುರಾಣ 7) ಮಾರ್ಕಂಡೇಯ ಪುರಾಣ 8) ಅಗ್ನಿ ಪುರಾಣ 9) ಭವಿಷ್ಯತ್ ಪುರಾಣ 10) ಬ್ರಹ್ಮಕೈವರ್ತನ ಪುರಾಣ. 11) ಲಿಂಗ ಪುರಾಣ 12) ವರಾಹ ಪುರಾಣ 13) ಸ್ಕಂಧ ಪುರಾಣ 14) ವಾಮನ ಪುರಾಣ 15) ಕೂರ್ಮ ಪುರಾಣ 16) ಮತ್ಸ್ಯ ಪುರಾಣ 17) ಗರುಡ ಪುರಾಣ 18) ಬ್ರಹ್ಮಾಂಡ ಪುರಾಣ.

**ಶಾಸ್ತ್ರಗಳು ಆರು :–** 1) ಗಣಿತ ಶಾಸ್ತ್ರ 2) ಖಗೋಳ ಶಾಸ್ತ್ರ 3) ರಸಾಯನ ಶಾಸ್ತ್ರ 4) ಭೌತ ಶಾಸ್ತ್ರ 5) ಜ್ಯೋತಿಷ್ಯ ಶಾಸ್ತ್ರ 6) ಬ್ರಹ್ಮವಿದ್ಯಾಶಾಸ್ತ್ರ.

ವೇದಗಳಲ್ಲಿಯೂ, ಪುರಾಣಗಳಲ್ಲಿಯೂ ಯಾವುವು ಸೇರಲಿಲ್ಲ, ಯಾವ ಬದಲಾವಣೆಗಳು ಬರಲಿಲ್ಲ. ಆದರೆ ಶಾಸ್ತ್ರಗಳಲ್ಲಿಯೇ ಎಷ್ಟೋ ಬೆರೆತು ಹೋಗಿ, ಎಲ್ಲಾ ಶಾಸ್ತ್ರಗಳು ಎನ್ನುವ ಹೆಸರಿನಿಂದ ಚಲಾವಣೆಯಾಗುವುದರಿಂದ ಯಾವುದು ಶಾಸ್ತ್ರವೊ, ಯಾವುದು ಶಾಸ್ತ್ರವಲ್ಲವೊ ತಿಳಿಯದಂತಾಗಿದೆ. ಈಗ ಮೇಲೆ ಹೇಳಿದ ಶಾಸ್ತ್ರಗಳು ಬಿಟ್ಟು ಬೇರೆ ಯಾವ ಶಾಸ್ತ್ರವಾದರೂ ಅದು ಶಾಸ್ತ್ರ ಅಲ್ಲವೆಂದು ಗುರುತಿಸಿಕೊಳ್ಳಬೇಕು. ಉದಾಹರಣೆಗೆ ವಾಸ್ತುಶಾಸ್ತ್ರ ಇದೆ ಎಂದುಕೊಳ್ಳಿ ಅದು ಶಾಸ್ತ್ರ ಅಲ್ಲವೆಂದು, ಅದರಲ್ಲಿ ಹೇಳಿದ ಪ್ರಕಾರ ಗೃಹಗಳ ಫಲಿತಗಳು ಇರುವುದಿಲ್ಲವೆಂದು ತಿಳಿಯಬೇಕು. **ಶಾಸ್ತ್ರ ಎಂಬ ಪದ ನಿಬಂಧನೆಯಿಂದ ಕೂಡಿಕೊಂಡ ಶಬ್ದ.** 'ಶಾಸ್ತ್ರ' ಎನ್ನುವ ಪದ 'ಶಾಪ' ಎಂಬ ಪದದಿಂದ ಹುಟ್ಟಿದೆ. ಶಾಪ ಎಂದರೆ ನಡೆದೇನಡೆಯುವುದೆಂದು ಅರ್ಥ. ಶಾಪದಿಂದ 'ಶಾಸನ'

ಎನ್ನುವ ಪದ ಹುಟ್ಟಿದೆ. ಶಾಸನ ಎಂದರೆ ತಪ್ಪದೆ ಜಾರಿಗೊಳ್ಳುವುದೆಂದು ಅರ್ಥ. ಹಾಗೆಯೇ ಶಾಸನಗಳಿಂದ ಕೂಡಿಕೊಂಡಿರುವುದೇ ಶಾಸ್ತ್ರ. ಶಾಸ್ತ್ರಗಳಲ್ಲಿ ಹೇಳಿರುವವೆಲ್ಲ ಶಾಸನಗಳಾಗಿರುತ್ತವೆ. ಸೂತ್ರದ ಪ್ರಕಾರ ವಾಸ್ತುಶಾಸ್ತ್ರದಲ್ಲಿ ಬರೆದಿರುವವು ಜಾರಿಯಾಗದ ವಾಕ್ಯಗಳು. ಆದ್ದರಿಂದ ಅದು ಹೆಸರಿಗೆ ಶಾಸ್ತ್ರವಾದರೂ, ಕೆಲಸಕ್ಕೆ ಶಾಸ್ತ್ರವಲ್ಲ. ಇಂತಹ ಶಾಸನಗಳಿಲ್ಲದ ಎಷ್ಟೋ ಪುಸ್ತಕಗಳಿಗೆ ಶಾಸ್ತ್ರಗಳು ಎಂದು ಹೆಸರಿಟ್ಟರೂ, ಅವು ಶಾಸ್ತ್ರಗಳಾಗಿ ಗುರುತಿಸಲ್ಪಡುವುದಿಲ್ಲ ಮತ್ತು ಶಾಸ್ತ್ರಗಳಾಗಿ ಲೆಕ್ಕಿಸಲ್ಪಡುವುದಿಲ್ಲ. ಆದ್ದರಿಂದ ವಾಸ್ತವವಾದ ಶಾಸ್ತ್ರಗಳು ಭೂಮಿಮೇಲೆ ಆರೇ ಇವೆಯೆಂದು ಗಟ್ಟಿಯಾಗಿ ಹೇಳುತ್ತಿದ್ದೇವೆ.

ಈಗ ನೈಜ ವಿಷಯಕ್ಕೆ ಬರೋಣ. ಯಾವ ವಿಷಯವಾದರೂ ಅದು ಸರಿಯಾದುದಾ, ಅಲ್ಲವಾ? ವಾಸ್ತವವಾ, ಅವಾಸ್ತವವಾ? ಭಾವವು ಸರಿಯಾದುದಾ, ಅಲ್ಲವಾ? ಜಾರಿಯಾಗುತ್ತದಾ? ಆಗುವುದಿಲ್ಲವಾ? ಎಂದು ಪರಿಶೀಲಿಸುವುದಕ್ಕೆ ವೇದಗಳು ಪ್ರಮಾಣಗಳು ಅಲ್ಲ, ಪುರಾಣಗಳು ಪ್ರಮಾಣಗಳು ಅಲ್ಲ. ಶಾಸ್ತ್ರಗಳು ಮಾತ್ರವೇ ಪ್ರಮಾಣಗಳು. ಆದ್ದರಿಂದ ದೇವರು, ಭಗವಂತನು ಎನ್ನುವ ವಿಷಯವನ್ನು ಶಾಸ್ತ್ರಪ್ರಮಾಣದಿಂದಲೇ ಪರಿಶೀಲಿಸಿ ನೋಡಬೇಕು. ಮೊದಲು ದೇವರು, ಭಗವಂತನು ಎನ್ನುವ ಪದಗಳು ಎರಡು, ಆರುಶಾಸ್ತ್ರಗಳಲ್ಲಿ ಯಾವ ಶಾಸ್ತ್ರಗಳಿಗೆ ಸಂಬಂಧಿಸಿರುವವೊ ತಿಳಿದುಕೊಳ್ಳಬೇಕು. ಈ ಎರಡು ಪದಗಳು ದೈವತ್ವಕ್ಕೂ, ಆಧ್ಯಾತ್ಮಿಕತೆಗೂ ಸಂಬಂಧಿಸಿರುವವು. ಆದ್ದರಿಂದ ದೈವಕ್ಕೆ ಸಂಬಂಧಿಸಿದ ವಿಷಯಗಳು, ವಿವರಗಳು ಎಲ್ಲಿವೆಯೋ ಆ ಶಾಸ್ತ್ರವನ್ನೇ ನಾವು ಪ್ರಮಾಣವಾಗಿ ತೆಗೆದುಕೊಂಡು ನೋಡಬೇಕು. ಇಲ್ಲಿ ಒಂದು ಚಿಕ್ಕ ಸಮಸ್ಯೆ ಇದೆ. ಅದೇನೆಂದರೆ ಎಲ್ಲರಿಗೂ ಶಾಸ್ತ್ರಗಳು ಆರು ಎಂದು ತಿಳಿದಿರುವುದಿಲ್ಲ ಮತ್ತು ಅವು ಇಂಥಹ ಹೆಸರಿರುವವೆಂದು ಸಹ ತಿಳಿದಿಲ್ಲ. ನಮಗೆ ತಿಳಿದಿದೆಯಾದ್ದರಿಂದ ಸುಲಭವಾಗಿ ಬ್ರಹ್ಮವಿದ್ಯಾ ಶಾಸ್ತ್ರದಿಂದಲೇ ನೋಡಬೇಕೆಂದು ಹೇಳುತ್ತೇವೆ, ನೋಡುತ್ತೇವೆ. ಉಳಿದವರು ಕೂಡ ಸುಲಭವಾಗಿ ಆರು ಶಾಸ್ತ್ರಗಳನ್ನು ಜ್ಞಾಪಕವಿಟ್ಟುಕೊಳ್ಳುವುದಕ್ಕೂ ಮತ್ತು ಯಾವ ಶಾಸ್ತ್ರ ಯಾವುದಕ್ಕೆ

ಸಂಬಂಧಿಸಿದೆಯೋ ಸುಲಭವಾಗಿ ತಿಳಿಯುವುದಕ್ಕೆ ಎಲ್ಲರಿಗೂ ಉಪಯೋಗ ವಾಗುವಂತೆ ಸಣ್ಣ ಉಪಾಯವನ್ನು ತಿಳಿಸುತ್ತಿದ್ದೇವೆ.

ಆರುಶಾಸ್ತ್ರಗಳಲ್ಲಿ ಮೊದಲನೆಯದು ಗಣಿತಶಾಸ್ತ್ರ, ಎರಡನೆಯದು ಖಗೋಳಶಾಸ್ತ್ರ. ಈ ಎರಡು ಒಂದಕ್ಕೊಂದು ಅನುಸಂಧಾನವಾಗಿವೆ. ಆದ್ದರಿಂದ ಎರಡನ್ನು ಒಂದುಜೊತೆಯಾಗಿ ಹೇಳಿಕೊಳ್ಳಬಹುದು. ಹಾಗೆಯೇ ಮೂರನೆಯದು ರಸಾಯನಶಾಸ್ತ್ರ, ನಾಲ್ಕನೆಯದು ಭೌತಿಕಶಾಸ್ತ್ರ. ಈ ಎರಡು ಶಾಸ್ತ್ರಗಳು ಕೂಡ ಒಂದಕ್ಕೊಂದು ಅನುಸಂಧಾನವಾಗಿವೆ. ಆದಕಾರಣ ಈ ಎರಡು ಶಾಸ್ತ್ರಗಳನ್ನು ಒಂದು ಜೊತೆಯಾಗಿ ಹೇಳಿಕೊಳ್ಳಬಹುದು. ಇನ್ನೂ ಉಳಿದ ಐದನೇ ಜ್ಯೋತಿಷ್ಯಶಾಸ್ತ್ರ, ಆರನೇ ಬ್ರಹ್ಮವಿದ್ಯಾಶಾಸ್ತ್ರವು ಇದೆ. ಈ ಎರಡು ಕೂಡ ಕರ್ಮ ವಿಧಾನದಲ್ಲಿ ಒಂದಕ್ಕೊಂದು ಅನುಸಂಧಾನವಾಗಿದ್ದು ಇವೆರಡು ಒಂದು ಜೊತೆಯಾಗಿವೆ. ಒಟ್ಟು ಮೂರು ಜೊತೆಗಳ ಶಾಸ್ತ್ರಗಳು ಆರಾಗಿ ಇವೆ. ಈ ಆರು ಶಾಸ್ತ್ರಗಳ ಹೆಸರುಗಳಲ್ಲಿ ಕೇವಲ ಮೊದಲ ಅಕ್ಷರಗಳನ್ನು ಮಾತ್ರ ತೆಗೆದುಕೊಂಡು ಬರೆದುಕೊಂಡರೆ **"ಗಖ, ರಭೌ, ಜ್ಯೋಬ್ರ"** ಎಂದು ಬಿಡಿಬಿಡಿಯಾಗಿ ಹೇಳಬಹುದು. ಗಖ ರಭೌ ಜ್ಯೋಬ್ರ ಎನ್ನುವ ಅಕ್ಷರಗಳು ಒಂದು ಮಂತ್ರದಂತೆ ಇವೆ. ಆರು ಶಾಸ್ತ್ರಗಳಿಗೂ ಪ್ರತಿನಿಧಿಗಳಾಗಿರುವ ಆರು ಅಕ್ಷರಗಳನ್ನು ಆರು ಬೀಜಾಕ್ಷರಗಳಾಗಿ ಲೆಕ್ಕಿಸಿಕೊಳ್ಳಬಹುದು. ಈ ಆರು ಅಕ್ಷರಗಳನ್ನು ಕಂಠಪಾಠ ಮಾಡಿಕೊಂಡರೆ, ಯಾವಾಗಾದರೂ ಆರುಶಾಸ್ತ್ರಗಳು ಜ್ಞಾಪಕಬರುತ್ತವೆ. ದೈವಜ್ಞಾನದಲ್ಲಾಗಲಿ, ಪ್ರಪಂಚ ಜ್ಞಾನದಲ್ಲಾಗಲಿ ಸಂಶಯ ಬಂದಾಗ ಬಂದ ಸಂಶಯ ಯಾವ ಶಾಸ್ತ್ರಕ್ಕೆ ಸಂಬಂಧಿಸಿರುವುದೋ ಆ ಶಾಸ್ತ್ರದ ಮೂಲಕ ಅದರ ಯಥಾರ್ಥವನ್ನು ತಿಳಿಯಬಹುದು. ಗಖ ರಭೌ ಜ್ಯೋಬ್ರ ಎಂಬ ಅಕ್ಷರಗಳು ಆಯಾ ಶಾಸ್ತ್ರಗಳಿಗೆ ಬೀಜಾಕ್ಷರಗಳೆಂದು ಹೇಳಿದ್ದೇವೆ! ಹಾಗೆ ಏಕೆ ಹೇಳಿದ್ದೇನೆಂದರೆ! ಬೀಜ ಎಂದರೆ ಹುಟ್ಟುವುದಕ್ಕೆ ಕಾರಣವಾದುದೆಂದು ಅರ್ಥವಿದೆ. ಈಗ 'ಗ' ಎನ್ನುತ್ತಲೇ ಗಣಿತ, 'ಖ' ಎನ್ನುತ್ತಲೇ ಖಗೋಳವೆಂದು ನಮ್ಮ ಜ್ಞಾಪಕದಲ್ಲಿ ಹುಟ್ಟಿಬರುತ್ತಿವೆ. ಆದಕಾರಣ ಅವುಗಳನ್ನು ಬೀಜಾಕ್ಷರಗಳು ಎನ್ನುವುದರಲ್ಲಿ ತಪ್ಪಿಲ್ಲ.

ವಿಶ್ವವೊಂದರ ಆಯುಸ್ಸು 108 ಕೋಟಿ ವರ್ಷಗಳೆಂದು ದೇವರು ಶಾಸ್ತ್ರಪದ್ಧತಿಯಾಗಿ ನಿರ್ಣಯಿಸಿಟ್ಟಿದ್ದಾನೆ. ವಿಶ್ವಕ್ಕೆಲ್ಲಾ ಆರು ಶಾಸ್ತ್ರಗಳೇ ಪ್ರಮಾಣಗಳು. ಆದ್ದರಿಂದ ಶುಚಿ ಶುಭ್ರತೆಹೊಂದಿ, ಸೃಷ್ಟಿಯಲ್ಲಿ ಮೊದಲ ದಿನ ಭಾನುವಾರ, ಆದ್ದರಿಂದ ಆದಿವಾರ (ಭಾನುವಾರ) ವಾಗಲಿ ಅಥವಾ ಸಂಪೂರ್ಣ ತಿಥಿಗಳಾದ ಅಮಾವಾಸ್ಯೆ ದಿನವಾಗಲಿ, ಪೌರ್ಣಮಿ ದಿನವಾಗಲಿ ಸ್ಥಿರ ಆಸನದಲ್ಲಿ ಕದಲದಂತೆ ಕುಳಿತುಕೊಂಡು, ಗಖ, ರಭೌ, ಜ್ಯೋಬ್ರ ಎನ್ನುವ ಅಕ್ಷರಗಳ ಸಮುದಾಯವನ್ನು ಒಂದು ಮಂತ್ರವಾಗಿ ಲೆಕ್ಕಿಸಿ, ವಿಶ್ವ ಆಯುವು ಸಂಖ್ಯೆಯಾದ 108 ಸಲ ಜಪಿಸಿದವನಿಗೆ ಶಾಸ್ತ್ರಸಿದ್ಧಿ ಲಭಿಸುತ್ತದೆ. ಅಂತಹವರು ಪುರಾಣಗಳ ಕಡೆಗಾಗಲಿ, ವೇದಗಳ ಕಡೆಗಾಗಲಿ ಹೋಗುವುದಿಲ್ಲ. ಕೇವಲ ಶಾಸ್ತ್ರಗಳನ್ನು ಕುರಿತೆ ಮಾತನಾಡುತ್ತಾರೆ. ವಿಶ್ವವು ಶಾಸ್ತ್ರಬದ್ಧವಾದುದು, ಪ್ರತ್ಯಕ್ಷವಾದುದು ಆದ್ದರಿಂದ ಶಾಸ್ತ್ರವೊಂದರ ಬೀಜಾಕ್ಷರಗಳನ್ನು ವಿಶ್ವವೊಂದರ ಆಯಸ್ಸು ಸಂಖ್ಯೆಯಿಂದ ಜೋಡಿಸಿ ಏಕಧಾಟಿಯಾಗಿ ಜಪಿಸುವುದರಿಂದ ಸ್ವಲ್ಪ ಶಕ್ತಿ ಏರ್ಪಟ್ಟು, ಆ ಶಕ್ತಿಯಿಂದ ಶಾಸ್ತ್ರಗಳೊಂದರ ಅವಗಾಹನೆ ಸುಲಭವಾಗಿ ಬರುತ್ತದೆ. ಅಂತಹವನನ್ನು ಶಾಸ್ತ್ರಜ್ಞನನ್ನಾಗಿ ಲೆಕ್ಕಿಸಬಹುದು.

ಗಖ ರಭೌ ಜ್ಯೋಬ್ರದ ಬಗ್ಗೆ ತಿಳಿದವನಿಗೆ ದೇವರು, ಭಗವಂತನೊಂದರ ವಿಷಯ ಕೊನೆಯದು ಮತ್ತು ಆರನೆಯದಾದ ಬ್ರಹ್ಮವಿದ್ಯಾಶಾಸ್ತ್ರಕ್ಕೆ ಸಂಬಂಧಿಸಿರುವುದೆಂದು ಸುಲಭವಾಗಿ ತಿಳಿಯಬಲ್ಲರು. ಆರುಶಾಸ್ತ್ರಗಳಲ್ಲಿ ಈಗ ನಮಗೆ ಅಗತ್ಯವಾದುದು ಬ್ರಹ್ಮವಿದ್ಯಾ ಶಾಸ್ತ್ರವೆ. ಈ ಬ್ರಹ್ಮವಿದ್ಯಾ ಶಾಸ್ತ್ರ ಉಳಿದ ಐದು ಶಾಸ್ತ್ರಗಳಿಗಿಂತ ಅತ್ಯುನ್ನತವಾದದ್ದೆಂದು ಸ್ಥೂಲವಾಗಿ ಮತ್ತು ಸೂಕ್ಷ್ಮವಾಗಿ ತಿಳಿಯುತ್ತಿದೆ. ಸೂಕ್ಷ್ಮವಾಗಿ ಹೊರಗೆ ಕಾಣಿಸದಿದ್ದರೂ ಈ ಶಾಸ್ತ್ರವನ್ನು ತಿಳಿದುಕೊಂಡಂತೆಲ್ಲ ಇದರ ಹಿರಿಮೆಯು ಸೂಕ್ಷ್ಮವಾಗಿ ತಿಳಿಯುತ್ತದೆ. ಸ್ಥೂಲವಾಗಿ ಎಂದರೆ ಹೊರಗೆ ಕಾಣಿಸುವಂತೆ ಉಳಿದ ಐದುಶಾಸ್ತ್ರಗಳಿಗಿಂತ ಉನ್ನತವಾಗಿ ತಿಳಿಯುತ್ತದೆ. ಅದು ಹೇಗೆ ಎಂದರೆ! ಮೊದಲ ಐದು ಶಾಸ್ತ್ರಗಳ ಬೀಜಾಕ್ಷರಗಳಾಗಿರುವ ಗ, ಖ, ರ, ಭೌ, ಜ್ಯೋ ಎನ್ನುವ ಐದು ಅಕ್ಷರಗಳು

ಏಕಾಕ್ಷರಗಳೆ. ಕೊನೆಯದು ಆರನೆಯದಾದ ಬ್ರಹ್ಮವಿದ್ಯಾಶಾಸ್ತ್ರವೊಂದರ ಮೊದಲ ಅಕ್ಷರವಾದ "ಬ್ರ" ಮಾತ್ರ ದ್ವಂದ್ವಾಕ್ಷರಗಳು ಹೊಂದಿವೆ. ದ್ವಂದ್ವಾಕ್ಷರಗಳು ಎಂದರೆ ಎರಡು ಅಕ್ಷರಗಳು ಸೇರಿ ಒಂದು ಅಕ್ಷರವಾಗಿ ಇದೆ. "ಬ್ರ" ಎಂಬ ಶಬ್ದದಲ್ಲಿ "ಬ" ಮತ್ತು "ರ" ಎನ್ನುವ ಎರಡು ಅಕ್ಷರಗಳು ಸೇರಿ ಉಳಿದ ಐದು ಶಾಸ್ತ್ರಗಳ ಏಕಾಕ್ಷರಗಳಿಗಿಂತ ವಿಶೇಷವಾಗಿ ಕಾಣಿಸುತ್ತಿದೆ. ಈ ವಿಧವಾಗಿ ದ್ವಂದ್ವಾಕ್ಷರಗಳ ಶಬ್ಧವನ್ನು ಹೊಂದಿ ತಾನು ಎಲ್ಲವುಗಳಿಗಿಂತ ವಿಶೇಷವಾದದ್ದೆಂದು ಸಾರಿಕೊಂಡಿದೆ. ಅಷ್ಟೇ ಅಲ್ಲದೆ "ಬ್ರಹ್ಮವಿದ್ಯೆ" ಎನ್ನುವ ಹೆಸರಿನಲ್ಲಿನ ಅರ್ಥವನ್ನು ನೋಡಿದರೆ "ಬ್ರಹ್ಮ" ಎಂದರೆ ಯಜಮಾನ (ದೊಡ್ಡವ) ಎನ್ನುವ ಅರ್ಥ ಇದೆ. ವಿಶ್ವದಲ್ಲಿನ ಎಲ್ಲಾ ವಿದ್ಯೆಗಳಿಗಿಂತ ದೊಡ್ಡ ವಿದ್ಯೆ ಆಗಿರುವುದರಿಂದ ಇದನ್ನು ಬ್ರಹ್ಮವಿದ್ಯೆ ಎಂದು ಕರೆಯುತ್ತಿದ್ದೇವೆ. ಎಲ್ಲದಕ್ಕಿಂತ ದೊಡ್ಡವನಾದ ದೇವರು, ಭಗವಂತನು ಎನ್ನುವ ಮಾತುಗಳಿಗೆ ಅರ್ಥ ದೊಡ್ಡ ವಿದ್ಯಾ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿಯೇ ತಿಳಿಯುತ್ತದೆ. ಉಳಿದ ಐದು ಶಾಸ್ತ್ರಗಳು ಪ್ರಪಂಚಕ್ಕೆ ಸಂಬಂಧಿಸಿರುವವಾಗಿದ್ದು, ಒಂದೇಒಂದು ಬ್ರಹ್ಮವಿದ್ಯಾ ಶಾಸ್ತ್ರ ಮಾತ್ರ ಪ್ರಪಂಚಕ್ಕೆ ಅತೀತವಾದ ದೇವರಿಗೆ ಸಂಬಂಧಿಸಿರುವುದು.

ಇಲ್ಲಿ ಒಂದು ಪ್ರಶ್ನೆಯನ್ನು ಕೆಲವರು ಹೀಗೆ ಕೇಳಬಹುದು. ಗಣಿತ, ಖಗೋಳ, ರಸಾಯನ, ಭೌತಿಕ, ಜ್ಯೋತಿಷ್ಯಶಾಸ್ತ್ರಗಳೊಂದರ ವಿದ್ಯೆಗಳು ಹೊರಗಿನ ವಿದ್ಯಾಲಯಗಳಲ್ಲಿ ಇವೆ. ಅವುಗಳನ್ನು ಬೋಧಿಸುವ ಬೋದಕರು ಕೂಡ ಇದ್ದಾರೆ. ಆದರೆ ಇಂಥದ್ದು ಬ್ರಹ್ಮವಿದ್ಯೆಯೆಂದಾಗಲಿ, ಇಂತಹ ಗ್ರಂಥವು ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿದೆಯೆಂದಾಗಲಿ, ಇಂಥಹವನು ಬ್ರಹ್ಮವಿದ್ಯೆಯನ್ನು ಬೋಧಿಸುವ ಬೋಧಕನೆಂದಾಗಲಿ, ಯಾರಿಗೂ ತಿಳಿಯದಿರುವಾಗ ಹೇಗೆ ಬ್ರಹ್ಮವಿದ್ಯೆಯನ್ನು ತಿಳಿಯಬೇಕು? ಅದು ಎಲ್ಲಿದೆಯೆಂದು ಹುಡುಕಬೇಕು? ಎಂದು ಪ್ರಶ್ನಿಸಬಹುದು. ಅದಕ್ಕೆ ಉತ್ತರ ಏನೆಂದರೆ! ಎಲ್ಲದಕ್ಕಿಂತ ಮೊದಲು ಹುಟ್ಟಿರುವುದು ಬ್ರಹ್ಮವಿದ್ಯಾಶಾಸ್ತ್ರ. ಈ ಶಾಸ್ತ್ರ ಸೃಷ್ಟಿ ಆದಿಯಲ್ಲಿಯೇ ಹುಟ್ಟಿದೆ. ಇದನ್ನು ಮೊಟ್ಟಮೊದಲು ಹೇಳಿದವನು ವಿಶ್ವವನ್ನು ಸೃಷ್ಟಿಸಿದ ದೇವರೆ. ಮೊದಲು ಹುಟ್ಟಿರುವುದು, ದೇವರಿಂದ

ಹೇಳಲ್ಪಟ್ಟಿರುವುದಾದ ಬ್ರಹ್ಮವಿದ್ಯೆ ಭೂಮಿಮೇಲೆ ಯಾವಾಗಾದರೂ ತಿಳಿಯದೆ ಹೋದರೆ ಪುನಃ ದೇವರೇ ಅದನ್ನು ಹೇಳಬೇಕಾಗಿರುತ್ತದೆ. ಬ್ರಹ್ಮವಿದ್ಯೆಯನ್ನು ಮೊದಲು ಹೇಳಿದವನೂ, ನಂತರ ಅಗತ್ಯಬಂದಾಗ ಹೇಳುವವನೂ ದೇವರೆ. ಇದನ್ನನುಸರಿಸಿ ಬ್ರಹ್ಮವಿದ್ಯೆ ಎಷ್ಟು ದೊಡ್ಡದೊ ಅರ್ಥವಾಗುತ್ತದೆ. ಬ್ರಹ್ಮವಿದ್ಯೆ ತಿಳಿಯದಂತೆ ಹೋದಾಗ ಪುನಃ ದೇವರೇ ಅದನ್ನು ಪುನರುದ್ಧರಿಸುತ್ತಾನೆ. ಆದರೆ ಯಾವ ಮಾನವನಿಗೂ ಆ ಕೆಲಸ ಸಾಧ್ಯವಾಗುವುದಿಲ್ಲ. ಮಾನವನು, ದೇವರು ಹೇಳಿದ ವಿದ್ಯೆಯನ್ನು ತಾನು ತಿಳಿದುಕೊಂಡು ಇತರರಿಗೆ ಬೋಧಿಸಬಹುದು. ಆದರೆ ಇಲ್ಲದ ವಿದ್ಯೆಯನ್ನು ಹೇಳಲಾರನು. ಮೊದಲು ಹೇಳುವವನು ಗುರು (ದೇವರು), ನಂತರ ಹೇಳುವವನು ಬೋಧಕನು ಎನ್ನುವ ಸೂತ್ರದ ಪ್ರಕಾರ **ಮನುಷ್ಯರು ಬೋಧಕರು ಆಗಬಹುದು. ಆದರೆ ಯಾವ ಮನುಷ್ಯನು ಗುರುವು ಆಗಲಾರನು**.

ಸೃಷ್ಟಿ ಆದಿಯಲ್ಲಿ ದೇವರಿಂದ ಮೊದಲು ಸೂರ್ಯನಿಗೆ ಹೇಳಲಾದ ಬ್ರಹ್ಮವಿದ್ಯೆ ಸೂರ್ಯನ ಮೂಲಕ ಇತರರಿಗೆ ಹೇಳಲಾಗಿದೆ. ಇದನ್ನನುಸರಿಸಿ ಆದಿಯಲ್ಲಿ ದೇವರೇ ಗುರುವಾಗಿದ್ದು ನಂತರ ಅದನ್ನು ಬೋಧಿಸಿದ ಸೂರ್ಯನನ್ನು ಬೋಧಕನನ್ನಾಗಿ ಹೇಳಬಹುದು. ಸೃಷ್ಟಿಯಿಂದ ಕಾಲ ನಡೆಯುತ್ತಾಬಂದು, ಬ್ರಹ್ಮವಿದ್ಯೆ ತಳ ಹಿಡಿದುಹೋಗಿ ಅಧರ್ಮಗಳು ಅಭಿವೃದ್ಧಿ ಅದಾಗ, ದೇವರು ಅದನ್ನು ಪುನಃ ಬೋಧಿಸಿದ್ದಾನೆ. ಹಾಗೆ ಬೋಧಿಸಿರುವುದೇ ಈದಿನ ನಾವು ನೋಡುತ್ತಿರುವ ಭಗವದ್ಗೀತೆ. ಭಗವದ್ಗೀತೆಯಲ್ಲಿ ಇರುವುದು ಸೃಷ್ಟಿ ಆದಿಯಲ್ಲಿ ಹೇಳಿದ ವಿದ್ಯೆಯೇ. ಆದಕಾರಣ ಭಗವದ್ಗೀತೆಯನ್ನು ಎಂದಿಗಾದರೂ ಬ್ರಹ್ಮವಿದ್ಯಾಶಾಸ್ತ್ರವೆಂದು ಹೇಳಬಹುದು. ಉಳಿದ ಐದು ಶಾಸ್ತ್ರಗಳೊಂದಿಗೆ ಹೋಲಿಸಿ ನೋಡಿದರೆ, ವಿಷಯ ವಿಸ್ತೀರ್ಣದಲ್ಲಿ ಎಲ್ಲವುಗಳಿಗಿಂತ ಬಹಳ ಚಿಕ್ಕದು ಬ್ರಹ್ಮವಿದ್ಯೆ. ಮನುಷ್ಯ ಉಳಿದ ಐದು ಶಾಸ್ತ್ರಗಳಲ್ಲಿ ಒಂದನ್ನು ಓದುವುದಕ್ಕೆ ಪ್ರಾಥಮಿಕ ಪಾಠಶಾಲೆ (ಎಲಿಮೆಂಟರಿ ಸ್ಕೂಲ್), ಉನ್ನತ ಪಾಠಶಾಲೆ (ಹೈಸ್ಕೂಲ್), ಪದವಿ ಪೂರ್ವ (ಕಾಲೇಜ್), ವಿಶ್ವ

ವಿದ್ಯಾಲಯ (ಯೂನಿವರ್ಸಿಟಿ) ಎನ್ನುವ ನಾಲ್ಕು ವಿಧಗಳ ವಿದ್ಯಾಲಯಗಳಲ್ಲಿ ಸುಮಾರು ಇಪ್ಪತ್ತೈದು (25) ವರ್ಷಗಳು ಓದಬೇಕಾಗಿರುತ್ತದೆ. (ಅಷ್ಟು ಓದಿದರೂ ಇಲ್ಲಿಯವರೆಗೂ ತಿಳಿಯಲ್ಪಟ್ಟಿರುವುದು ಶೇಕಡ 10% ರಷ್ಟು ಮಾತ್ರವೇ. ಶೇ. 90% ರಷ್ಟು ಇನ್ನು ಕಂಡುಹಿಡಿಯಬೇಕಾಗಿದೆ.) ಹೇಳುವ ಬೋಧಕರು ಟೀಚರ್ಸ್, ಲೆಕ್ಚರರ್ಸ್, ಪ್ರೋಫೆಸರ್ಸ್ ಮೊದಲಾದವರು ಅಗತ್ಯ. ಬ್ರಹ್ಮವಿದ್ಯೆಯನ್ನು ಕಲಿಯಬೇಕೆಂದರೆ ಒಂದು ವರ್ಷದಲ್ಲಿ ಒಬ್ಬ ಬೋಧಕನಿಂದ ಕಲಿಯಬಹುದು. **ಎಲ್ಲದಕ್ಕಿಂತ ದೊಡ್ಡ ವಿದ್ಯೆಯಾಗಿ ಹೆಸರುವಾಸಿಯಾದ ಬ್ರಹ್ಮವಿದ್ಯೆ, ಶ್ರದ್ಧೆ ಇರುವ ಮನುಷ್ಯನಿಗೆ ಬಹಳ ಚಿಕ್ಕದಾಗಿ ಕಾಣಿಸುತ್ತದೆ.** ಆದಕಾರಣ ಶ್ರದ್ಧೆ ಇರುವವನು ಒಂದು ವರ್ಷದಲ್ಲಿಯೇ ಸಂಪೂರ್ಣವಾಗಿ ತಿಳಿಯಬಹುದು. ಶ್ರದ್ಧೆ ಇಲ್ಲದವನಿಗೆ ಒಂದುವೇಳೆ ತಿಳಿದುಕೊಳ್ಳಬೇಕೆಂದರೂ ನೂರುವರ್ಷಗಳಿಗೂ ಕೂಡ ಸ್ವಲ್ಪವಾದರೂ ತಿಳಿಯಲಾರನು ಆದ್ದರಿಂದ ಬ್ರಹ್ಮವಿದ್ಯೆ ವಿಚಿತ್ರವಾದ ವಿದ್ಯೆ.

ಬ್ರಹ್ಮವಿದ್ಯೆಯನ್ನು ಸೃಷ್ಟಿ ಆದಿಯಲ್ಲಿ ದೇವರೆ ಸ್ವತಃವಾಗಿ ಹೇಳಿದ್ದಾನೆ. ದೇವರು ಬ್ರಹ್ಮವಿದ್ಯೆಯನ್ನು ನಿಬಂಧನೆಯ ಪ್ರಕಾರ ಹೇಳಿದ್ದಾನೆ. ನಿಬಂಧನೆ ಪ್ರಕಾರ ಎಂದರೆ ಧರ್ಮಬದ್ಧವಾಗಿ ಎಂದೂ, ಸಿದ್ಧಾಂತಬದ್ಧವಾಗಿ ಎಂದೂ, ಶಾಸ್ತ್ರಬದ್ಧವಾಗಿ ಎಂದೂ ಹೇಳಬಹುದು. ಆದ್ದರಿಂದ ಬ್ರಹ್ಮವಿದ್ಯೆ ಶಾಸ್ತ್ರವಾಗಿದೆ. ಇದನ್ನನುಸರಿಸಿ ಬ್ರಹ್ಮವಿದ್ಯೆಯನ್ನು ಪುರಾಣ ಎಂದಾಗಲಿ, ವೇದ ಎಂದಾಗಲಿ ಹೇಳಬಾರದು. ಪೂರ್ವಕಾಲದಲ್ಲಿ ಹೇಳಲ್ಪಟ್ಟಿದೆಯೆಂದು ಇತಿಹಾಸ ಎಂದು ಕೂಡ ಎನ್ನಬಾರದು. ಇತಿಹಾಸ ಎಂದರೆ ನಡೆದ ಚರಿತ್ರೆ. ತ್ರೇತಾಯುಗದಲ್ಲಿ ನಡೆದ ರಾಮಾಯಣ ಚರಿತ್ರೆ, ಹಾಗೆಯೇ ದ್ವಾಪರಯುಗದಲ್ಲಿ ನಡೆದ ಮಹಾಭಾರತ ಚರಿತ್ರೆ. ಆದ್ದರಿಂದ ರಾಮಾಯಣ, ಮಹಾಭಾರತಗಳನ್ನು ಇತಿಹಾಸಗಳೆಂದು ಕರೆಯಬಹುದು. ಆದರೆ ಭಾರತದಲ್ಲಿ ಹೇಳಿದ ವಿದ್ಯೆಯನ್ನು ಚರಿತ್ರೆ ಎನ್ನಬಾರದು. ಚರಿತ್ರೆ ಒಂದೇ ಸಲ ನಡೆಯುತ್ತದೆ. ಚರಿತ್ರೆಗೆ ಧರ್ಮವೆನ್ನುವುದು ಇರುವುದಿಲ್ಲ. ಆದ್ದರಿಂದ ರಾಮಾಯಣ ರಂಕು, ಭಾರತ ಬೊಂಕು ಎಂದು ಕೆಲವರಂದಿದ್ದಾರೆ. ಸೃಷ್ಟಿ ಪ್ರಾರಂಭದಲ್ಲಿ ಹುಟ್ಟಿದ ಬ್ರಹ್ಮವಿದ್ಯೆ

ಮಾಯಾ ಪ್ರಭಾವದಿಂದ ಮನುಷ್ಯರಲ್ಲಿ ಇಲ್ಲದಂತೆ ಹೋಗುವುದು, ಪುನಃ ಅದನ್ನು ದೇವರು ಮಾನವರಿಗೆ ಜ್ಞಾಪಕ ಮಾಡಿ ಹೇಳುತ್ತಿರುವುದು ನಡೆಯುತ್ತಿದೆ. ಇದು ಬ್ರಹ್ಮವಿದ್ಯೆವೊಂದರ ವಿಷಯವಾಗಿದ್ದು, ಉಳಿದ ಐದು ಶಾಸ್ತ್ರಗಳ ವಿಷಯಕ್ಕೆ ಬಂದರೆ ಇವುಗಳನ್ನು ದೇವರು ಸ್ವತಃವಾಗಿ ಹೇಳಲಿಲ್ಲ. ಮನುಷ್ಯರಿಂದ ಹೇಳಿಸಿದ್ದಾನೆ. ಉಳಿದ ಶಾಸ್ತ್ರಗಳಿಗೂ ಸಹ ದೇವರೆ ಕರ್ತನಾದರೂ, ಆ ವಿಷಯ ಯಾರಿಗೂ ತಿಳಿಯದಂತಿರುವುದಕ್ಕೆ ಮನುಷ್ಯರಿಂದ ಹೇಳಿಸಿ ಮೇಲಕ್ಕೆ ಮನುಷ್ಯರನ್ನೆ ಕರ್ತರೆನ್ನುವಂತೆ ಎಲ್ಲರನ್ನು ನಂಬಿಸಿದ್ದಾನೆ.

ಬ್ರಹ್ಮವಿದ್ಯಾ ಶಾಸ್ತ್ರ ಸೃಷ್ಟಿ ಆದಿಯಲ್ಲಿಯೇ ದೇವರಿಂದ ಸಂಪೂರ್ಣವಾಗಿ ಹೇಳಿರುವುದು. ಅದರಲ್ಲಿ ಅಸಂಪೂರ್ಣತೆ ಆದಿನವಾಗಲಿ, ಈದಿನವಾಗಲಿ ಎಂದಿಗೂ ಇಲ್ಲ. ಬ್ರಹ್ಮವಿದ್ಯೆ ಮಧ್ಯಕಾಲದಲ್ಲಿ ತಿಳಿಯದಂತೆ ಹೋಗಬಹುದು, ಅಂತಹದರಲ್ಲಿ ದೇವರಿಂದಲೇ ಪುನಃ ಹೇಳಲ್ಪಡುತ್ತದೆ. ಅಷ್ಟೇ ಹೊರತು ಆ ದಿನ ಸ್ವಲ್ಪ ಹೇಳಲ್ಪಟ್ಟು, ನಂತರ ಕಾಲಗಳಲ್ಲಿ ಮತ್ತೆಸ್ವಲ್ಪ ಹೇಳುವುದಿಲ್ಲ. ಬ್ರಹ್ಮವಿದ್ಯೆಯಲ್ಲಿನ ಸೂತ್ರಗಳು (ಧರ್ಮಗಳು) ಎಲ್ಲವೂ ಮೊದಲೆ ಹೇಳಲ್ಪಟ್ಟಿವೆ. ಆದ್ದರಿಂದ ಅದು ಆದಿಯಿಂದ ಸಂಪೂರ್ಣ ಶಾಸ್ತ್ರವೇ, ಒಂದುವೇಳೆ ಮನುಷ್ಯನಿಗೆ ತಿಳಿಯದಂತೆ ಹೋದಾಗ ಹೇಳಿದ ಸೂತ್ರಗಳನ್ನೇ ವಿವರಿಸಿ ವಿಶದವಾಗಿ ಹೇಳುವುದು ನಡೆಯುತ್ತಿದೆ. ಆದ್ದರಿಂದ ಸೃಷ್ಟಿ ಆದಿಯಲ್ಲಿ ಹೇಳಲಾದ ವಿದ್ಯೆಯೇ ಪುನಃ ದ್ವಾಪರ ಯುಗದಲ್ಲಿ ಸ್ವಲ್ಪ ವಿಶಧೀಕರಿಸಿ ಹೇಳಲಾಗಿದೆ. ಹಾಗೆ ನಂತರ ಯುಗಗಳಲ್ಲಿ ಕೂಡ ಇರುವ ಧರ್ಮವನ್ನು ವಿವರಿಸಿ ಹೇಳುವುದು ನಡೆಯುತ್ತಿದೆ. ಆದರೆ ಇಲ್ಲದ ಹೊಸ ಧರ್ಮವನ್ನು ಹೇಳುವುದು ನಡೆಯುವುದಿಲ್ಲ. ಏಕೆಂದರೆ ಬ್ರಹ್ಮವಿದ್ಯೆ ಆದಿಯಿಂದಲೇ ಸಂಪೂರ್ಣ ಶಾಸ್ತ್ರ. ಬ್ರಹ್ಮವಿದ್ಯೆ ಎಂದಿಗೂ ಸಂಪೂರ್ಣವೇ. ಹೊಸದಾಗಿ ಸೇರಿಸುವುದು ಏನೂ ಇಲ್ಲ. ಆದಕಾರಣ ಒಂದು ಮತದಲ್ಲಿನ ಗುರುವು ಹೀಗೆ ಹೇಳಿದ್ದಾನೆ. "ನಾನು ಹೇಳಿರುವುದು ಈಗ ನಿಮಗೆ ಸರಿಯಾಗಿ ಅರ್ಥವಾಗಲಿಲ್ಲ. ನಂತರ ಕಾಲದಲ್ಲಿ ನಾನು ಹೇಳಿದ ವಿಷಯಗಳೆ ನನ್ನ ನಂತರ ಬರುವ ಗುರು ನಿಮಗೆ ವಿವರಿಸಿ ಹೇಳುತ್ತಾನೆ" ಎಂದಿದ್ದಾನೆ.

ಇಲ್ಲಿ ನಾನು ಹೇಳಿದ ವಿಷಯಗಳನ್ನೇ ವಿವರಿಸಿ ಹೇಳುತ್ತಾನೆ ಎಂದಿದ್ದಾನೆ. ಆದರೆ ಮತ್ತಷ್ಟು ಹೊಸ ವಿಷಯಗಳೆಂದು ಹೇಳಲಿಲ್ಲ. ಆದ್ದರಿಂದ ಬ್ರಹ್ಮವಿದ್ಯೆ ಮೊದಲೇ ಸಂಪೂರ್ಣವಾಗಿ ಹೇಳಲ್ಪಟ್ಟಿದೆಯೆಂದು, ಅದರೊಳಗೆ ಸೇರಿಸುವುದು ಏನು ಇಲ್ಲವೆಂದು ತಿಳಿಯುತ್ತಿದೆ.

ಉಳಿದ ಐದು ಶಾಸ್ತ್ರಗಳಾದ ಗಣಿತ, ಖಗೋಳ, ರಸಾಯನ, ಭೌತಿಕ, ಜ್ಯೋತಿಷ್ಯ ಶಾಸ್ತ್ರಗಳು ಮನುಷ್ಯರಿಂದ ಹೇಳಲ್ಪಟ್ಟಿವೆ. ಈ ಐದು ಶಾಸ್ತ್ರಗಳು ಬ್ರಹ್ಮವಿದ್ಯಾ ಶಾಸ್ತ್ರ ಹುಟ್ಟಿದ ನಂತರ ಸ್ವಲ್ಪ ಕಾಲದಿಂದ ಹುಟ್ಟುವುದು ಪ್ರಾರಂಭವಾಗಿವೆ. ವಿವರವಾಗಿ ಹೇಳಿಕೊಂಡರೆ ಐದು ಶಾಸ್ತ್ರಗಳು ಒಂದೇಸಲ ಹುಟ್ಟಲಿಲ್ಲ. ಕಾಲ ಕಳೆದಂತೆಲ್ಲ ಮಾನವರ ಅವ್ಯಕತೆಗಳನ್ನನುಸರಿಸಿ ಆಗೊಂದು, ಆಗೊಂದು ಹುಟ್ಟುವುದಕ್ಕೆ ಪ್ರಾರಂಭಿಸಿವೆ. ಆಗಿನಿಂದ ಇಂದಿನವರೆಗು ಐದು ಶಾಸ್ತ್ರಗಳಲ್ಲಿ ಯಾವ ಶಾಸ್ತ್ರವೂ ಸಂಪೂರ್ಣವಾಗಿ ಹುಟ್ಟಲಿಲ್ಲ. ಈ ಐದು ಶಾಸ್ತ್ರಗಳನ್ನು ಕುರಿತು ಹೇಳಿಕೊಳ್ಳುವುದು ನಮಗೆ ಈಗ ಅಸಂದರ್ಭವೇ ಆಗುತ್ತದೆ. ಆದ್ದರಿಂದ ಅವುಗಳನ್ನು ಬಿಟ್ಟು ಮೂಲ ವಿಷಯಕ್ಕೆ ಬರೋಣ.

ಬ್ರಹ್ಮವಿದ್ಯಾ ಶಾಸ್ತ್ರವನ್ನು ಹೇಳಿರುವುದು ದೇವರೇ. ಅದರ ಧರ್ಮಗಳಿಗೆ ಹಾನಿ ಏರ್ಪಟ್ಟು ತಿಳಿಯದಂತೆ ಹೋದಾಗ ಪುನಃ ಹೇಳುವವನೂ ದೇವರೇ. ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಇರುವವೆಲ್ಲಾ ದೇವರ ಧರ್ಮಗಳೇ. ದೇವರ ಧರ್ಮಗಳು ದೇವರಿಗೆ ಗೊತ್ತು, ಮಾನವರಲ್ಲಿ ಯಾರಿಗೂ ತಿಳಿದಿಲ್ಲ. ಆದ್ದರಿಂದ ಮೊದಲು ಹೇಳಿರುವುದು ದೇವರೆ! ನಂತರ ಹೇಳುವುದು ದೇವರೆ! ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ದೇವರು ಎಂದರೆ ರೂಪ, ನಾಮ, ಕ್ರಿಯೆಗಳು ಇಲ್ಲದವನೆಂದು ಅರ್ಥ. ಇದನ್ನನುಸರಿಸಿ ದೇವರಿಗೆ ಯಾವ ಆಕಾರವು ಇಲ್ಲ, ಹೆಸರು ಇಲ್ಲ, ಹಾಗೆಯೇ ಆತನು ಮಾಡುವ ಕೆಲಸವು ಯಾವ ಮಾತ್ರವೂ ಇಲ್ಲ. ಶಾಸ್ತ್ರದ ಪ್ರಕಾರ ದೇವರು ಇಂಥಹವನು ಎಂದು ನಾವು ಅಂದರೆ ಈ ಮಾತನ್ನು ಕೇಳುವವರಿಗೆ ಅನೇಕ ಪ್ರಶ್ನೆಗಳು ಬರುತ್ತವೆ. ದೇವರಿಗೆ ಹೆಸರು ಇಲ್ಲದಿರುವಾಗ ದೇವರು, ಭಗವಂತನೆಂದು ಏಕೆ ಅನ್ನುತ್ತಿದ್ದಾರೆ? ದೇವರಿಗೆ ಆಕಾರ ಇಲ್ಲದಿರುವಾಗ

ಅರ್ಜುನನಿಗೆ ವಿಶ್ವರೂಪ ತೋರಿಸಿದಂತೆ ಬ್ರಹ್ಮವಿದ್ಯೆ ಎನ್ನುವ ಗೀತೆಯಲ್ಲಿ ಹೇಳಿದ್ದಾರೆ ಅಲ್ಲವೆ! ಅದು ಒಂದು ಆಕಾರವೆ ಅಲ್ಲವೇ! ಗೀತೆಯಲ್ಲಿ ಹೇಳಿರುವುದನ್ನು ನೀವು ಸುಳ್ಳೆನ್ನುತ್ತೀರಾ? ಸೃಷ್ಟಿ, ಸ್ಥಿತಿ, ಲಯಕರ್ತ ದೇವರೆ ಎಂದು ನೀವೇ ಹೇಳುತ್ತಿದ್ದೀರ. ಅಂತಹದರಲ್ಲಿ ಹುಟ್ಟಿಸುವುದು, ಸಲಹುವುದು (ಪೋಷಿಸುವುದು) ಸಾಯಿಸುವುದು ಕೆಲಸಗಳು ಅಲ್ಲವಾ! ಆ ಕೆಲಸಗಳು ದೇವರು ಮಾಡುತ್ತಿರುವಾಗ ಆತನಿಗೆ ಕೆಲಸವೇ ಇಲ್ಲವೆನ್ನುವುದು ಶಾಸ್ತ್ರವಿರುದ್ಧ? ಎಂದು ಎಷ್ಟೋ ವಿಧಗಳಾಗಿ ಎಷ್ಟೋ ಪ್ರಶ್ನೆಗಳನ್ನು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಶಾಸ್ತ್ರ ಶಾಸನಗಳಿಂದ ಕೂಡಿಕೊಂಡಿರುತ್ತದೆ. ಆದ್ದರಿಂದ ಶಾಸ್ತ್ರ ಎಂದಿಗೂ ಸುಳ್ಳು ಆಗುವುದಿಲ್ಲ, ಯಾರಿಂದಲೂ ಖಂಡಿಸಲಾಗುವುದಿಲ್ಲ.

ದೇವರಿಗೆ ನಿಜವಾಗಲು ಹೆಸರು ಇಲ್ಲ. ದೇವರು ಎಂದು ಹೇಳುವ ಶಬ್ದ ಹೆಸರು ಅಲ್ಲವೇ ಅಲ್ಲ. ದೇವರು ಎನ್ನುವ ಶಬ್ದ ಕೇವಲ ಅರ್ಥವನ್ನು ತಿಳಿಸುವ ಪದ ಮಾತ್ರವೇ. ದೇವರು ಎನ್ನುವ ಪದದಲ್ಲಿ 'ದೇವು' ಎಂಬ ಎರಡಕ್ಷರಗಳಲ್ಲಿ ನಿಜವಾದ ಭಾವ ಒಳಗೊಂಡಿದೆ. ದೇವು ಎಂಬ ಶಬ್ದಕ್ಕೆ "ರು"ನ್ನು ಸೇರಿಸಿದರೆ ದೇವರು ಆಗುತ್ತದೆ. ದೇವು ಎನ್ನುವ ಶಬ್ದಕ್ಕೆ "ಆಡು" ಎಂಬ ಪದ ಜೋಡಿಸಿದರೆ ದೇವುಲಾಡು (ಹುಡುಕಾಡು) ಎಂದು ಆಗುತ್ತದೆ. ದೇವರು ಎನ್ನುವ ಪದದಲ್ಲಿ **ದೇವು** ಎನ್ನುವ ಶಬ್ದ ಮುಖ್ಯವಾದುದೆಂದು ತಿಳಿಯುತ್ತಿದೆ. ದೇವು (ಹುಡುಕು) ಎನ್ನುವ ಪದದಲ್ಲಿನ ಭಾವವನ್ನು ಗಮನಿಸಿದರೆ ಹುಡುಕುವುದು ಎಂದು ಅರ್ಥವಾಗುತ್ತಿದೆ. ದೇವುಲಾಡುವುದು ಎಂದರೆ ಹುಡುಕಾಡುವುದು ಎಂದು ಅರ್ಥ. ಹಾಗೆಯೇ ದೇವರು ಎಂದರೆ ಹುಡುಕಲ್ಪಡುವವನು ಎಂದು ಅರ್ಥ. ಇರುವ ವಾಸ್ತವವನ್ನು ತಿಳಿಸುವುದು ಹೆಸರಾಗಲಿ, ದೇವುಲಾಡುವುದು, ದೇವುದರಲ್ಲಿ ಇರುವ ಅರ್ಥ ಹುಡುಕುವುದು ಎಂಬ ಕೆಲಸವನ್ನು ಸೂಚಿಸುತ್ತದೆ. ಯೋಗಿ ಎಂಬ ಶಬ್ದದಲ್ಲಿ ಒಬ್ಬ ವ್ಯಕ್ತಿ ಮಾಡಿದ ಯೋಗವೆನ್ನುವ ಕಾರ್ಯವನ್ನು ಸೂಚಿಸುತ್ತಿದೆ. ಹಾಗೆಯೇ ತ್ಯಾಗಿ ಎಂಬ ಪದವೊಂದರ ಅರ್ಥ ಆತನು ಮಾಡಿದ ತ್ಯಾಗವನ್ನು ಸೂಚಿಸುತ್ತಿದೆ.

ಯೋಗಿಗಾಗಲಿ, ತ್ಯಾಗಿಗಾಗಲಿ ಪ್ರತ್ಯೇಕವಾದ ನಾಮಧೇಯ ಅಥವಾ ಹೆಸರು ಒಂದು ಇರುತ್ತದೆ. ಯೋಗಿ ಎನ್ನುವುದು ಹೆಸರು ಅಲ್ಲ ಆತನ ದೊಡ್ಡತನ. ನನ್ನ ಹೆಸರು ಪ್ರಬೋಧಾನಂದ, ನನ್ನ ಸ್ಥಾನ (ಹುದ್ದೆ) ಯೋಗಿ. ಆದ್ದರಿಂದ ನನ್ನನ್ನು ಪ್ರಬೋಧಾನಂದ ಯೋಗಿ ಎನ್ನಬಹುದು. ಹಾಗೆ ನಾರಾಯಣ ತ್ಯಾಗಿ ಎಂದು ಒಬ್ಬರನ್ನು ಕರೆದಾಗ, ಅವನ ಹೆಸರು ನಾರಾಯಣ, ಅವನು ಮಾಡಿರುವುದು ತ್ಯಾಗ ಎಂದು ಅರ್ಥವಾಗುತ್ತಿದೆ. ತ್ಯಾಗಿ, ಯೋಗಿ ಎಂಬ ಪದಗಳು ಮನುಷ್ಯ ಸಾಧಿಸಿದ ಸ್ಥಾನವನ್ನು ತಿಳಿಸುವವೇ, ಆದರೆ ಅವು ಹೆಸರುಗಳು ಅಲ್ಲ.

ಮನನ ಇರುವವನು ಮನುಷ್ಯ. ಮನನ ಎಂದರೆ ಜ್ಞಾಪಕ ಎಂದು ಅರ್ಥ. ಮನುಷ್ಯ ಎಂದರೆ ಎಲ್ಲಾ ಜೀವರಾಶಿಗಳಿಗಿಂತ ಹೆಚ್ಚಾಗಿ ಜ್ಞಾಪಕ (ಮನನ) ಇರುವವನೆಂದು ಅರ್ಥ. ಅಷ್ಟೇ ಹೊರತು ಮನುಷ್ಯ ಎನ್ನುವುದು ಹೆಸರಲ್ಲ. ಮನುಷ್ಯರು ಅನೇಕ ಜನರು ಇದ್ದಾರೆ, ಆದಕಾರಣ ಒಬ್ಬೊಬ್ಬ ಮನುಷ್ಯನನ್ನು ಬೇರೆಬೇರೆಯಾಗಿ ಗುರುತಿಸುವುದಕ್ಕೆ ಬೇರಬೇರೆ ಹೆಸರುಗಳು ಇವೆ. ಹುಡುಕುವ ದೇವರು ಒಬ್ಬನೇ ಆದ್ದರಿಂದ ದೇವರಿಗೆ ಹೆಸರು ಅಗತ್ಯವಿಲ್ಲ. ದೇವರನ್ನು ಅನೇಕ ಶಬ್ದಗಳಿಂದ ಕರೆದರೂ ಅವು ಆತನ ಹೆಸರುಗಳಲ್ಲ ಅವು ಎಲ್ಲವೂ ಆತನ ಸ್ಥಾನವನ್ನು ತಿಳಿಸುವ ಗುರುತುಗಳೆ. ಮನುಷ್ಯನ ವಿದ್ಯಾರ್ಹತೆಯನ್ನು ಅನುಸರಿಸಿ ಅವನಿಗೆ MA, B.A., I.P. S., I.R. S., I.A. S., ಎಂದು ಅವನ ಯೋಗ್ಯತೆಯನ್ನು ಸೂಚಿಸುವ ಶಬ್ದಗಳಿರುವಂತೆ ದೇವರಿಗೂ ಸಹ ಆತನ ಕೀರ್ತಿ (ಘನತೆ) ಯನ್ನು ಸೂಚಿಸುವ ಪದಗಳು ಇವೆ. ಉದಾಹರಣೆಗೆ ಪರಮಾತ್ಮ, ಪುರುಷೋತ್ತಮ ಮೊದಲಾದವು ಇವೆ. ಆತ್ಮಗಿಂತ ಪರವಾಗಿ (ಬೇರೆಯಾಗಿ) ಇರುವವನು, ಆದ್ದರಿಂದ ದೇವರನ್ನು ಪರಮಾತ್ಮ ಎಂದು ಕರೆಯುತ್ತಿದ್ದೇವೆ. ಹಾಗೆಯೇ ಕ್ಷರ ಪುರುಷನಿಗಿಂತ, ಅಕ್ಷರ ಪುರುಷನಿಗಿಂತ ಉತ್ತಮವಾಗಿ ದೇವರಿದ್ದಾನೆ. ಆದ್ದರಿಂದ ಆತನನ್ನು ಪುರುಷೋತ್ತಮ ಎಂದಿದ್ದಾರೆ. ಇಂತಹ ಪದಗಳೆಲ್ಲ ಮನುಷ್ಯರಿಗಿರುವ

ಡಿಗ್ರಿಗಳಂತಹವೆ. ಒಬ್ಬ ಮನುಷ್ಯನಿಗೆ ಅವನು ಓದಿದನ್ನನುಸರಿಸಿ ಎಷ್ಟು ಡಿಗ್ರಿಗಳಾದರೂ ಇರಬಹುದು. ಹಾಗೆಯೇ ದೇವರು ಇರುವುದನ್ನನುಸರಿಸಿ ಆತನಿಗೆ ಎಷ್ಟು ಗೌರವಾರ್ಥ ಪದಗಳಾದರೂ ಇರಬಹುದು. ಈಗ ನಮಗೆ ಅಗತ್ಯವಾದ ಪದ ದೇವರು. ದೇವರು ಎಂದರೆ ಹುಡುಕಲ್ಪಡುವವನೇ ಹೊರತು ಸಿಗುವವನಲ್ಲ. ಆದ್ದರಿಂದ ನಾವು ಅನೇಕ ಸಂದರ್ಭಗಳಲ್ಲಿ ಯಾವ ಮನುಷ್ಯನೂ ದೇವರನ್ನು ನೋಡಲಿಲ್ಲ ಎಂದು ಹೇಳುತ್ತಾಬಂದಿದ್ದೇನೆ. ಯಾರಾದರೂ ನಾನು ದೇವರನ್ನು ನೋಡಿದ್ದೇನೆ ಎಂದರೆ ಅದು ಪೂರ್ತಿ ಅಸತ್ಯ.

ದೇವರು ಯಾರಿಂದ ದೇವುಲಾಡ (ಹುಡುಕ) ಲ್ಪಡುತ್ತಾನೆ? ಎಂದು ಪ್ರಶ್ನಿಸಿಕೊಂಡು ನೋಡಿದರೆ, ಅಂತಹ ಅಗತ್ಯ ಮನುಷ್ಯನಿಗೇ ಇದೆ. ಆದಕಾರಣ ಮನುಷ್ಯ ಹುಡುಕುವವನು, ದೇವರು ಹುಡುಕಲ್ಪಡುವವನೆಂದು ಹೇಳಬಹುದು. ಸೃಷ್ಟಿ ಆದಿಯಿಂದ ಎಲ್ಲರೂ ದೇವರನ್ನು ಹುಡುಕುತ್ತಿದ್ದಾರೆ, ದೇವರು ಹುಡುಕಲ್ಪಡುತ್ತಲೆ ಇದ್ದಾನೆ. ಈ ವಿಷಯವನ್ನೇ ಭಗವದ್ಗೀತೆ ವಿಶ್ವರೂಪ ಸಂದರ್ಶನ ಯೋಗದಲ್ಲಿ **"ನನ್ನನ್ನು ಇಲ್ಲಿಯವರೆಗೂ ಯಾರೂ ನೋಡಲಿಲ್ಲ"** ಎಂದು ಕೃಷ್ಣನು ಅರ್ಜುನನೊಂದಿಗೆ ಹೇಳಿದ್ದಾನೆ. ಈಗ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದು ಏನೆಂದರೆ! ಇಲ್ಲಿಯವರೆಗೂ ದೇವರಿಗೆ ಮನುಷ್ಯರಂತೆ, ಹೆಸರು ಇಲ್ಲ, ಆತನನ್ನು ಉಚ್ಛರಿಸುವ ಪದಗಳೆಲ್ಲವೂ ಆತನ ಹಿರಿಮೆಯನ್ನು (ದೊಡ್ಡತನ) ಸೂಚಿಸುವ ಶಬ್ದಗಳೇ ಎಂದಿದ್ದೀರ! ಹಾಗಿರುವಾಗ ಆಕಾರವಿರುವ ಒಬ್ಬ ಮನುಷ್ಯನಾದ ಕೃಷ್ಣನ ಹೆಸರು ಹೇಳಿ ಕೃಷ್ಣನು ಹೇಳಿದ ಮಾತನ್ನು ದೇವರು ಹೇಳಿದಂತೆಂದು ನೀವು ಹೇಳಿದ್ದೀರಾ! ಅಂತಹದರಲ್ಲಿ ಆಕಾರವಿರುವ ಒಬ್ಬ ಮನುಷ್ಯನಾದ ಕೃಷ್ಣನ ಹೆಸರು ಹೇಳಿ ಕೃಷ್ಣನು ಹೇಳಿದ ಮಾತನ್ನು ದೇವರು ಹೇಳಿದಂತೆಂದು ನೀವು ಹೇಳಿದ್ದೀರಾ! ಹೆಸರಿರುವವನು ದೇವರಲ್ಲವೆಂದು, ದೇವರು ಮನುಷ್ಯನಲ್ಲವೆಂದು ಹೇಳಿದ ನೀವು ದೇವರಿಗೆ ಕೃಷ್ಣನು ಎಂಬ ಹೆಸರು ಇಡುವುದು ಸಮಂಜಸವಾ? ಎಂದು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಕೃಷ್ಣನನ್ನು ದೇವರೆಂದು ನಾನು ಇಲ್ಲಿಯವರೆಗೂ

ಹೇಳಲಿಲ್ಲ! ಆದ್ದರಿಂದ ಈಗ ಈ ಪ್ರಶ್ನೆ ಅಗತ್ಯವಿಲ್ಲ. ಭೂಮಿಮೇಲೆ ಯಾವ ಮನುಷ್ಯನಾದರೂ ದೇವರಾಗುವುದಿಲ್ಲ. ದೇವರನ್ನು ಅನ್ವೇಷಿಸುವವನು ಮನುಷ್ಯ ಎನ್ನುವ ವಾಕ್ಯವನ್ನು ಮುಖ್ಯವಾಗಿ ಗುರುತಿಸಿಕೊಳ್ಳಬೇಕು. ಆಗ ನೀವು ತಕ್ಷಣ ಮತ್ತೊಂದು ಪ್ರಶ್ನೆ ಕೇಳಬಹುದು. ಇದಕ್ಕು ಮುಂಚೆ "ದೇವರ ಧರ್ಮಗಳು ದೇವರೇ ಹೇಳಬೇಕು, ಯಾವ ಮನುಷ್ಯರು ದೇವರ ಧರ್ಮಗಳನ್ನು ಹೇಳಲಾರರು" ಎಂದು ನೀವೇ ಬರೆದಿದ್ದೀರಾ. ಈಗಲೇನೊ ಒಬ್ಬ ಮನುಷ್ಯನಾದ ಕೃಷ್ಣನು ಅಂತರಿಸಿಹೋದ ಧರ್ಮಗಳನ್ನು ಪುನಃ ಗೀತೆಯಲ್ಲಿ ತಿಳಿಸಿದ್ದಾನೆ ಎಂದಿದ್ದೀರಾ. ಇದನ್ನನುಸರಿಸಿ ದೇವರು ಮನುಷ್ಯನಾ? ಎಂದು ಪ್ರಶ್ನೆ ಬರುತ್ತಿದೆ. ಕೃಷ್ಣನನ್ನು ದೇವರೆಂದು ಹೇಳಲಿಲ್ಲ? ಎಂದು  ನೀವು ಒಂದು ಕಡೆ ಎನ್ನುತ್ತಿದ್ದೀರಾ ಮತ್ತೊಂದು ಕಡೆ ದೇವರು ಮನುಷ್ಯನಾದ ಕೃಷ್ಣನಾಗಿ ಹೇಳುತ್ತಿದ್ದೀರ. ನಿಮ್ಮದು ದ್ವಂದ್ವವೈಖರಿ ಅಲ್ಲವೇ ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನಾನು ಇಲ್ಲಿಯವರೆಗೂ ಕೃಷ್ಣನನ್ನು ಮನುಷ್ಯ ಎಂದು ಹೇಳಲಿಲ್ಲ! ಎಂದು ಕೇಳುತ್ತಿದ್ದೇನೆ. ಈ ನನ್ನ ಉತ್ತರವನ್ನು ನೋಡಿ ಕೃಷ್ಣನನ್ನು ದೇವರು ಅಲ್ಲ ಎನ್ನುತ್ತಾರೆ, ಹಾಗೆಯೇ ಕೃಷ್ಣನನ್ನು ಮನುಷ್ಯ ಅಲ್ಲವೆನ್ನುತ್ತಾರಾ ನೀವು ಹೇಳುವ ಮಾತುಗಳು ನಮಗೆ ಏನು ಅರ್ಥವಾಗಲಿಲ್ಲ ಎಂದು ಕೆಲವರನ್ನಬಹುದು. ಆದರೆ ನಾನು ಹೇಳುವುದು ಪೂರ್ತಿ ಸತ್ಯ. ಈ ಗ್ರಂಥ ಬರೆಯುವ ಉದ್ದೇಶ ಗ್ರಂಥದ ಹೆಸರಿನಲ್ಲಿಯೇ ಇದೆ. "ಕೃಷ್ಣನು ದೇವರಾ? ಭಗವಂತನಾ?" ಎಂದು ಇರುವಾಗ ದೇವರಾ,  ಭಗವಂತನಾ, ಮನುಷ್ಯನಾ ಎಂದು ನಿರ್ಣಯಿಸಿ ಹೇಳಿಕೊಳ್ಳಬೇಕಾಗಿದೆ. ನಾನು ಬರೆಯಬೇಕಾಗಿರುವುದು ಎಷ್ಟೋ ಇದ್ದರೂ, ನಾನು ಸಂಪೂರ್ಣವಾಗಿ ಏನು ಹೇಳದೆಯೇ ನನ್ನದು ದ್ವಂದ್ವವೈಖರಿ ಎಂದು ಅರ್ಥ ಮಾಡಿಕೊಳ್ಳಬಾರದು.

ಇಲ್ಲಿಯವರೆಗೂ ದೇವರಿಗೆ ಹೆಸರು ಇಲ್ಲ ಎಂದು ತಿಳಿದುಕೊಂಡಿದ್ದೇವೆ. ಇನ್ನು ರೂಪ ಇದೆಯೋ ಇಲ್ಲವೋ ತಿಳಿದುಕೊಳ್ಳೋಣ. ರೂಪ, ನಾಮ, ಕ್ರಿಯೆಗಳು ಇಲ್ಲದವನು ಎಂದು ನಾವು ಹೇಳಿಕೊಂಡಾಗ, ಆತನಿಗೆ ಆಕಾರ

ಇಲ್ಲವೆಂದಲ್ಲವೇ ಅರ್ಥ. ಇದನ್ನನುಸರಿಸಿ ರೂಪ ಇರುವವನು ಯಾರೂ ದೇವರು ಅಲ್ಲ. ಈ ಲೆಕ್ಕ ಪ್ರಕಾರ ರೂಪವಿರುವ ಕೃಷ್ಣನು ಕೂಡ ದೇವರು ಅಲ್ಲವೆಂದು ಗಟ್ಟಿಯಾಗಿ ಹೇಳಬಹುದು. ಕೃಷ್ಣನೇ ಅಲ್ಲ, ಆಕಾರವಿರುವ ರಾಮನಾಗಲಿ, ವಿಷ್ಣುವಾಗಲಿ, ಶಿವನಾಗಲಿ ದೇವರು ಅಲ್ಲ. ಯಾರು ದೇವರು ಎಂದು ಕೇಳಿದರೆ ನಾವು ಮಾತ್ರ ವಿಷ್ಣುವಿನಿಂದ ಮೊದಲುಮಾಡಿ ಮೂವತ್ತು ಮೂರು ಕೋಟಿ ಮಂದಿ ದೇವತೆಗಳಲ್ಲಿ ಯಾರೂ ದೇವರು ಅಲ್ಲವೆಂದು ಹೇಳುತ್ತಿದ್ದೇವೆ. ನೀನು ಯಾರು? ಎಂದು ಗೀತೆಯಲ್ಲಿ ಅರ್ಜುನನು ವಿಶ್ವರೂಪ ಸಂದರ್ಶನ ಯೋಗದಲ್ಲಿ ದೇವರನ್ನು ಪ್ರಶ್ನಿಸಿದಾಗ, ಅದಕ್ಕೆ ದೇವರು "ನಾನು ಕಾಲವು" ಎಂದಿದ್ದಾನೆ. ಕಾಲಕ್ಕೆ ಆಕಾರವಿದೆಯೆಂದು ಯಾರಾದರೂ ಹೇಳುತ್ತಾರಾ? ಕಾಲವು ಯಾರಿಗಾದರೂ ಕಾಣಿಸುತ್ತದಾ? ಯಾರೂ ಆತನನ್ನು ನೋಡಲಿಲ್ಲ, ಯಾರಿಗೂ ಆತನು ಕಾಣಿಸಲಿಲ್ಲ. ಆದಕಾರಣ ದೇವರಿಗೆ ಆಕಾರ ಇಲ್ಲವೆಂದು ಹೇಳಬಹುದು. ರೂಪ, ನಾಮಗಳ ಅವಿನಾಭಾವ ಸಂಬಂಧ ಹೊಂದಿವೆ. ಹೆಸರು ಇದ್ದರೆ ರೂಪ ಇರುತ್ತದೆ, ಒಂದುವೇಳೆ ರೂಪವಿದ್ದರೂ ಹೆಸರಿರುತ್ತದೆ. ದೇವರಿಗೆ ಹೆಸರಿಲ್ಲ ಆದ್ದರಿಂದ ರೂಪವು ಇಲ್ಲ. ಹಾಗೆ ಆತನಿಗೆ ರೂಪವು ಇಲ್ಲವಾದ್ದರಿಂದ ಹೆಸರು ಕೂಡ ಇಲ್ಲ. ಮತ್ತೊಂದು ಮುಖ್ಯ ಸೂತ್ರ ಏನೆಂದರೆ! ಆಕಾರ, ಹೆಸರು ಇರುವವನು ಯಾರಾದರೂ ಒಂದು ಕ್ಷಣ ಕೂಡ ಸುಮ್ಮನೆ ಇರದಂತೆ ಇತ್ತ ಮಾನಸಿಕವಾಗಾಗಲಿ, ಅತ್ತ ಶಾರೀರಕವಾಗಾಗಲಿ ಕೆಲಸಮಾಡುತ್ತದೆ ಎಂದು ಗೀತೆಯಲ್ಲಿ ಕರ್ಮಯೋಗದಲ್ಲಿ 5ನೇ ಶ್ಲೋಕದಲ್ಲಿ **"ನಹಿಕಶ್ಚಿತ್ ಕ್ಷಣಮಪಿ ಜಾತುತಿಷ್ಠತ್ಯ ಕರ್ಮಕೃತ್, ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿ ಜೈರ್ಗುಣೈಃ ಯಾವ ಕರ್ಮವನ್ನು ಅನುಭವಿಸದಂತೆ ಒಂದು ಕ್ಷಣ ಕೂಡ ಯಾರೂ ಸುಮ್ಮನೆ ಇರಲಾರರು. ಪ್ರಕೃತಿ ಗುಣಗಳಿಂದ ಸಿಲಿಕಿಕೊಂಡವ (ವಶ) ರಾಗಿ ಕೆಲಸಗಳು ಮಾಡುತ್ತಿರುತ್ತಾರೆ"** ಎಂದು ಕೃಷ್ಣನು ಹೇಳಿದ್ದಾನೆ. ಆಕಾರ ಹೆಸರಿರುವ ಪ್ರತಿಯೊಬ್ಬ ಮನುಷ್ಯ ತಪ್ಪದೆ ಕೆಲಸ ಮಾಡಬೇಕಾಗಿರುತ್ತದೆ. ಆಕಾರವಿರುವ ಪ್ರತಿ ಮನುಷ್ಯನಿಗು ಗುಣಗಳಿರುತ್ತವೆ. ಗುಣಗಳಿರುವ ಮನುಷ್ಯ ಕರ್ಮ ಪ್ರಕಾರ ಗುಣಗಳಿಗೆ ವಶವಾಗಿ ಗುಣಗಳ ಪ್ರಕಾರ ಕೆಲಸಗಳು ಮಾಡುತ್ತಾನೆ.

ದೇವರು ಗುಣಾತೀತನು, ಆಕಾರರಹಿತನು ಆದ್ದರಿಂದ ದೇವರಿಗೆ ಕಾರ್ಯಗಳು ಇಲ್ಲ. **ಸೃಷ್ಟಿಯಲ್ಲಿ ದೇವರು ಎಂದಿಗೂ ಕೆಲಸ ಮಾಡುವುದಿಲ್ಲ, ಸೃಷ್ಟಿಯಲ್ಲಿ ಮನುಷ್ಯ ಯಾವಾಗಲೂ ಸುಮ್ಮನಿರುವುದಿಲ್ಲ** ಎನ್ನುವ ಸೂತ್ರವನ್ನು ಯಾವಾಗಲೂ ನಮ್ಮ ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

ಇಲ್ಲಿಯವರೆಗೂ ದೇವರು ರೂಪ, ನಾಮ, ಕ್ರಿಯಾ ರಹಿತನು ಎನ್ನುವ ವಿಷಯ ಅರ್ಥವಾಗಿದೆ. ಇನ್ನು ನಮಗೆ ಅರ್ಥ ಆಗಬೇಕಾಗಿರುವುದು ದೇವರು ಸೃಷ್ಟಿಕರ್ತ ಎಂಬ ಮಾತು ನಿಜವಾ, ಸುಳ್ಳಾ ಎನ್ನುವ ವಿಷಯ. ದೇವರು ಸೃಷ್ಟಿಕರ್ತನಾದರೆ, ಸೃಷ್ಟಿಯನ್ನು ತಯಾರು ಮಾಡಿದವನೆಂದಲ್ಲವೇ ಅರ್ಥ. ಸೃಷ್ಟಿಯನ್ನು ತಯಾರು ಮಾಡುವುದು ದೊಡ್ಡ ಕೆಲಸವಾಗುತ್ತದಲ್ಲವೆ! ಆಗ ದೇವರು ಕೂಡ ಕೆಲಸ ಮಾಡಿದಂತೆ ಆಗುತ್ತದಲ್ಲವೆ! ಎನ್ನುವ ದೊಡ್ಡ ಸಂಶಯ ಬರುತ್ತಿದೆ. ಅದಕ್ಕೆ ಉತ್ತರವನ್ನು ಹುಡುಕಿದರೆ ಈ ವಿಧವಾಗಿ ಇದೆ. ಸೃಷ್ಟಿ ತಯಾರಾದ ನಂತರ ಆದಿಯಲ್ಲಿ ಮೊಟ್ಟಮೊದಲು ಬ್ರಹ್ಮವಿದ್ಯಾ ಶಾಸ್ತ್ರ ಹುಟ್ಟಿದೆ. ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ದೇವರು ರೂಪ, ನಾಮ, ಕ್ರಿಯಾ ರಹಿತನು. ಅದಕ್ಕೆ ಶಾಸ್ತ್ರಬದ್ಧವಾಗಿ ಮೇಲೆ ವಿವರವನ್ನು ಕೂಡ ಹೇಳಿಕೊಂಡಿದ್ದೇವೆ. ಈಗ ನಮಗೆ ಬೇಕಾಗಿರುವುದು ದೇವರು ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ವಿರುದ್ಧವಾಗಿ ಸೃಷ್ಟಿಯನ್ನು ತಯಾರು ಮಾಡುವ ಕೆಲಸವನ್ನು ಮಾಡಿದ್ದಾನೆ ಎಂದು ಕೇಳಿದರೆ, ಅದಕ್ಕೆ ಸಮಾಧಾನ ದೇವರು ಬ್ರಹ್ಮವಿದ್ಯಾ ಶಾಸ್ತ್ರವನ್ನು ಹೇಳಿದ ನಂತರ, ಎಂದರೆ ಸೃಷ್ಟಿ ತಯಾರಾದ ನಂತರ, ಯಾವಾಗಾದಾರೂ ಶಾಸ್ತ್ರಪದ್ಧತಿ ಇಲ್ಲದಂತೆ ದೇವರು ಯಾವ ಕಾರ್ಯವನ್ನು ಮಾಡಲಿಲ್ಲ. ಸೃಷ್ಟಿ ನಂತರ, ಶಾಸ್ತ್ರ ತಯಾರಾದ ನಂತರ, ದೇವರು ಕ್ರಿಯಾರಹಿತನಾಗಿಯೇ ಇದ್ದಾನೆ. ಕ್ರಿಯಾರಹಿತನು ಎಂಬ ಮಾತಿಗೆ ವಿರುದ್ಧವಾಗಿ ದೇವರು ಯಾವ ಕ್ರಿಯೆಯನ್ನು ಮಾಡಲಿಲ್ಲ. ಸೃಷ್ಟಿ ತಯಾರಾಗದ ಮೊದಲು, ಬ್ರಹ್ಮವಿದ್ಯಾ ಶಾಸ್ತ್ರ ತಯಾರಾಗದ ಮೊದಲು, ವಿಶ್ವವಾಗಲಿ, ನೀವಾಗಲಿ, ಯಾರಾಗಾಲಿ, ಯಾವ ಶಾಸ್ತ್ರವಾಗಲಿ ಇಲ್ಲದಮುಂಚೆ ದೇವರು ಮಾಡಿರುವುದು ಶಾಸ್ತ್ರವಿರುದ್ಧವಲ್ಲ. ಶಾಸ್ತ್ರವೇ ಇಲ್ಲದಿರುವಾಗ

ಶಾಸ್ತ್ರವಿರುದ್ಧವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಸೃಷ್ಟಿಕರ್ತ ಎಂಬ ಮಾತು ಯಾವ ವಿಧವಾಗಿ ನೋಡಿದರೂ ಸತ್ಯವಾದುದೇ. ಸೃಷ್ಟಿ ಇಲ್ಲದಮೊದಲು ಮಾಡಿರುವುದು ಶಾಸ್ತ್ರಪರಧಿಯೊಳಗೆ ಬರುವುದಿಲ್ಲ. ಆದ್ದರಿಂದ ದೇವರು ಯಾವಾಗ ಮಾಡಿದ್ದಾನೆ? ಯಾವಾಗ ಮಾಡಲಿಲ್ಲ? ಎಂದು ನೋಡಬೇಕಾಗಿರುವುದು ಮರೆತುಹೋಗಿ, ದೇವರ ಕಾರ್ಯವನ್ನು ಶಾಸ್ತ್ರಪದ್ಧತಿಯಲ್ಲ ಎನ್ನುವುದು ತಪ್ಪಾಗುತ್ತದೆ. ಇದನ್ನೆಲ್ಲಾ ಗಮನಿಸಿದರೆ ಸೃಷ್ಟಿ ನಂತರ ದೇವರು ಯಾವ ಕೆಲಸವನ್ನೂ ಮಾಡಲಿಲ್ಲವೆಂದು, ದೇವರು ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ತಾನು ಹೇಳಿದ ಧರ್ಮಗಳನ್ನು ಅತಿಕ್ರಮಿಸಲಿಲ್ಲವೆಂದು, ಧರ್ಮಗಳ ಪ್ರಕಾರವೇ ಇದ್ದಾನೆಂದು ತಿಳಿಯುತ್ತಿದೆ.

ದೇವರು ರೂಪ, ನಾಮ, ಕ್ರಿಯಾರಹಿತನು ಎನ್ನುವ ಶಾಸ್ತ್ರ ಧರ್ಮವು ಸೃಷ್ಟಿ ನಂತರದ ವಿಷಯವೆಂದು, ದೇವರು ಸೃಷ್ಟಿಕಾರ್ಯವನ್ನು ಮಾಡಿರುವುದು ಸೃಷ್ಟಿಗಿಂತ ಹಿಂದಿನ ವಿಷಯವೆಂದು ತಿಳಿದುಹೋಗಿದೆ. ಸೃಷ್ಟಿ ನಂತರವೇ ಶಾಸ್ತ್ರವನ್ನು ನೋಡಬೇಕೆಂದು, ಸೃಷ್ಟಿಗಿಂತ ಮೊದಲು ಶಾಸ್ತ್ರವೇ ಇಲ್ಲವಾದ್ದರಿಂದ ಆಗಿನ ವಿಷಯಗಳು ಶಾಸ್ತ್ರಪರಧಿಯೊಳಗೆ ಬರುವುದಿಲ್ಲವೆಂದು ಸಹ ತಿಳಿದು ಹೋಗಿದೆ. ಇಲ್ಲಿ ಶಾಸ್ತ್ರಪರಿಧಿಯೊಳಗೆ ಬರುವ ಮತ್ತೊಂದು ಪ್ರಶ್ನೆ ಇದೆ. ಅದನ್ನು ಕೂಡ ತಿಳಿದುಕೊಂಡರೆ ದೇವರ ಜ್ಞಾನದಲ್ಲಿ ಸಂಶಯ ಇಲ್ಲದಂತೆ ಹೋಗುತ್ತದೆ. ಆ ಪ್ರಶ್ನೆ ಏನೆಂದರೆ! ದೇವರು ವಿಶ್ವವೆಲ್ಲವನ್ನು ಸೃಷ್ಟಿಸಿದ ನಂತರ ಆತನು ಯಾವ ಕಾರ್ಯವನ್ನು ಮಾಡಲಿಲ್ಲ ಎಂದು ನೀವು ಹೇಳಿದ್ದೀರಾ. ದೇವರು ಕೆಲಸ ಮಾಡಿದರೆ ಶಾಸ್ತ್ರವಿರುದ್ಧವಾಗುತ್ತದೆಂದು ತನ್ನ ಮಾತನ್ನು ತಾನೇ ಅತಿಕ್ರಮಿಸಿದಂತಾಗುತ್ತದೆಂದು ಸಹ ಹೇಳಿದ್ದಾರೆ. ಅಷ್ಟೇ ಅಲ್ಲದೆ ಸೃಷ್ಟಿ ಆದಿಯಲ್ಲಿಯೇ ಮೊಟ್ಟಮೊದಲು ದೇವರು ಸೂರ್ಯನಿಗೆ ಜ್ಞಾನವನ್ನು ಹೇಳಿದಂತೆ ಕೂಡಾ ತಿಳಿಸಿದ್ದೀರ. ಸೂರ್ಯನಿಗೆ ಇಂತಹ ಆಕಾರದಿಂದ ಹೇಳಿದಂತಾಗಾಲಿ, ಇಂತಹ ಹೆಸರಿನಿಂದ ಹೇಳಿದಂತಾಗಾಲಿ ಎಲ್ಲಿಯೂ ಆಧಾರಗಳು ಇಲ್ಲ. ರೂಪ, ಹೆಸರು ಇಲ್ಲದಿದ್ದರೂ ಸೂರ್ಯನಿಗೆ ಜ್ಞಾನವನ್ನು ಹೇಳಿದ್ದೇನೆಂದು ಗೀತೆಯಲ್ಲಿ

ಹೇಳಿರುವುದರಿಂದ, ಬೋಧಿಸಿರುವುದು ಎನ್ನುವ ಒಂದು ಕೆಲಸವನ್ನು ಸೃಷ್ಟಿ ಆದಿಯಲ್ಲಿ ದೇವರು ಮಾಡಿರುವಂತೆ ತಿಳಿಯುತ್ತಿದೆ. ಸೂರ್ಯನಿಗೆ ಬೋಧಿಸಿರುವುದು ಸೃಷ್ಟಿ ನಡೆದ ನಂತರ ನಡೆದ ಕೆಲಸ. ಆದ್ದರಿಂದ ಇಲ್ಲಿ ದೇವರ ಆಕಾರ, ಹೆಸರು ವ್ಯಕ್ತವಾಗದಿದ್ದರೂ ಮಾಡಿದ ಕೆಲಸ ವ್ಯಕ್ತವಾಗುತ್ತಿದೆ. ಇದನ್ನನುಸರಿಸಿ ಸೃಷ್ಟಿ ನಂತರ ಕೂಡ ದೇವರು ಕೆಲಸ ಮಾಡಿದಂತೆ ತಿಳಿಯುತ್ತಿದೆ. ಎಂದು ಯಾರಾದರೂ ಕೇಳುವುದಕ್ಕೆ ಅವಕಾಶ ಇದೆ. ಇದಕ್ಕೆ ಸಮಾಧಾನ ನಿಮ್ಮ ಹತ್ತಿರ ಇದೆಯಾ... ಎಂದು ನಮ್ಮನ್ನು ಯಾರಾದರೂ ಕೇಳಿದರೆ, ನಾವು ಈ ವಿಧವಾಗಿ ಸಮಾಧಾನ ಹೇಳುತ್ತೇವೆ.

ಸೃಷ್ಟಿಯಾದ ನಂತರ ಗುರು ಶಿಷ್ಯ ಎನ್ನುವ ಎರಡು ಶಬ್ದಗಳನ್ನು ನಾವು ಅಲ್ಲಲ್ಲಿ ಕೇಳುತ್ತಿದ್ದೇವೆ. ಗುರು ಶಿಷ್ಯ ಎನ್ನುವ ಪದಗಳು ಹೆಸರುಗಳು ಅಲ್ಲ. ಒಬ್ಬ ಹೆಸರಿರುವ ವ್ಯಕ್ತಿ ಬೋಧಿಸುವ ಕಾರ್ಯವನ್ನು ಮಾಡುವುದರಿಂದ ಆತನನ್ನು ಗುರು ಎನ್ನುತ್ತೇವೆ. ಹಾಗೆಯೇ ಒಬ್ಬ ಹೆಸರಿರುವ ವ್ಯಕ್ತಿ ಬೋಧನೆಯನ್ನು ತಿಳಿದುಕೊಳ್ಳುವ ಕೆಲಸವನ್ನು ಮಾಡುವುದರಿಂದ ಆತನನ್ನು ಶಿಷ್ಯ ಎನ್ನುತ್ತಿದ್ದೇವೆ, ಭೂಮಿಮೇಲೆ ಎರಡು ವಿಧಗಳ ಜ್ಞಾನಗಳು ಇವೆ. ಒಂದು ಪರಮಾತ್ಮ ಜ್ಞಾನ, ಎರಡನೆಯದು ಪ್ರಕೃತಿ ಜ್ಞಾನ. ಇಲ್ಲಿ ಪ್ರಕೃತಿ (ಪ್ರಪಂಚ) ಜ್ಞಾನವನ್ನು ಮಾತ್ರ ತೆಗೆದುಕೊಂಡು ನೋಡಿದರೆ, ಪ್ರಕೃತಿಯಲ್ಲಿನ ಅನೇಕ ವಿದ್ಯೆಗಳನ್ನು ಕಲೆತುಕೊಳ್ಳುವವನನ್ನು ಶಿಷ್ಯನು ಎಂದು ಕರೆಯುತ್ತೇವೆ. ಹಾಗೆಯೇ ಪ್ರಕೃತಿಯಲ್ಲಿನ ವಿದ್ಯೆಗಳನ್ನು ಬೋಧಿಸುವವನನ್ನು ಗುರು ಎನ್ನುತ್ತೇವೆ. ಪ್ರಕೃತಿ ವಿದ್ಯೆಯಲ್ಲಿ ಕಾಣಿಸುವ ಗುರು, ಕಾಣಿಸುವ ಶಿಷ್ಯ ಇಬ್ಬರು ಇರುತ್ತಾರೆ. ಇದರ ಪ್ರಕಾರ ಪ್ರಪಂಚದಲ್ಲಿ ಅನೇಕ ವಿದ್ಯೆಗಳನ್ನು ಬೋಧಿಸುವ ಅನೇಕಮಂದಿ ಗುರುಗಳು, ಅನೇಕ ವಿದ್ಯೆಗಳನ್ನು ಅಭ್ಯಾಸಿಸುವ ಅನೇಕ ಜನ ಶೀಷ್ಯರು ಇದ್ದಾರೆ. ಇನ್ನು ಬ್ರಹ್ಮವಿದ್ಯೆ ಎನ್ನುವ ದೈವಜ್ಞಾನ ವಿಷಯದೊಳಗೆ ಬಂದು ನೋಡಿದರೆ ಪ್ರಪಂಚ ವಿದ್ಯೆಯಂತೆ ಗುರು ಕಾಣಿಸುವುದಿಲ್ಲ, ಶಿಷ್ಯನು ಕಾಣಿಸುವುದಿಲ್ಲ. ಒಂದುವೇಳೆ ಗುರು ಭೂಮಿಮೇಲೆ ಇದ್ದರೂ ಆತನಿಗೆ ಶಿಷ್ಯರು ಇರುವುದಿಲ್ಲ. ಬ್ರಹ್ಮವಿದ್ಯೆಯನ್ನು

ಕಲೆತುಕೊಳ್ಳಬೇಕೆಂದು ಯಾರಾದರೂ ಅಂದುಕೊಂಡು ಗುರುಗೋಸ್ಕರ ಅನ್ವೇಷಿಸಿದರೂ ಆತನಿಗೆ ಗುರು ಸಿಗುವುದಿಲ್ಲ. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ಗುರು ಶಿಷ್ಯರು ಒಂದು ಕಾಲದಲ್ಲಾಗಲಿ, ಒಂದು ಕಡೆಯಾಗಲಿ ಕಾಣಿಸುವುದಿಲ್ಲ. ಪ್ರಸ್ತುತ ಕಾಲದಲ್ಲಿ ಬ್ರಹ್ಮವಿದ್ಯೆಯನ್ನು ಕಲೆತುಕೊಳ್ಳುವ ಶಿಷ್ಯರು, ಬೋಧಿಸುವ ಗುರುಗಳು ಇದ್ದರೂ ಬೋಧಿಸುವವರು ಕೇವಲ ಬೋಧಕನೆ ಹೊರತು, ಗುರು ಅಲ್ಲ. ಬೋಧಕರಿಗೆ ಶಿಷ್ಯರು ಎಷ್ಟು ಜನರಾದರೂ ಇರಬಹುದು. ಗುರು ಕೆಲವು ಸಾವಿರಾರು ವರ್ಷಗಳಿಗೊ, ಲಕ್ಷಗಳ ವರ್ಷಗಳಿಗೊ ಭೂಮಿಮೇಲಕ್ಕೆ ಬರುತ್ತಾನೆ. ಆಗ ಆತನನ್ನು ಯಾರೂ ಗುರುತಿಸಲಾರು. ಆದ್ದರಿಂದ ಗುರುವಿಗೆ ಶೀಷ್ಯರು ಏರ್ಪಡುವುದಿಲ್ಲ.

ಭೂಮಿಮೇಲೆ ಒಂದು ವಿದ್ಯೆ ವಿಸ್ತರಿಸಬೇಕು ಎಂದರೆ ಒಬ್ಬ ಗುರು, ಒಬ್ಬ ಶಿಷ್ಯನು ತಪ್ಪದೆ ಇದ್ದೇ ಇರಬೇಕು. ಒಬ್ಬರು ವಿದ್ಯಾವೇತ್ತ, ಒಬ್ಬರು ವಿದ್ಯಾರ್ಥಿ ಇದ್ದಾಗಲೇ ವಿದ್ಯೆಗು ಪ್ರಾಣಬಂದು ಸ್ವಲ್ಪ ಕಾಲವಾದರೂ ಬದುಕುತ್ತದೆ. ಮೊದಲು ವಿದ್ಯೆಯನ್ನು ತಿಳಿದ ವಿದ್ಯಾವಂತೆ (ಗುರುವಿ) ನಿಂದ ವಿದ್ಯೆಯನ್ನು ಅರ್ಥಿಸುವ ವಿದ್ಯಾರ್ಥಿ (ಶಿಷ್ಯ) ವಿದ್ಯೆಯನ್ನು ಸಂಪಾದಿಸಿಕೊಂಡು, ನಂತರ ಆ ಶಿಷ್ಯನು ಇತರರಿಗೆ ಬೋಧಕನಾಗಿ ವಿದ್ಯೆಯನ್ನು ಎಷ್ಟೋ ಜನರಿಗೆ ತಿಳಿಯುವಂತೆ ಮಾಡುತ್ತಾನೆ. ಆದ್ದರಿಂದ ಯಾವ ವಿದ್ಯೆಗಾದರೂ ಗುರು ಶಿಷ್ಯ ಸಂಬಂಧ ಇದ್ದೇ ಇರಬೇಕು. ಇದರ ಪ್ರಕಾರ ಬ್ರಹ್ಮವಿದ್ಯೆಗು ಕೂಡ ಗುರುಶಿಷ್ಯ ಸಂಬಂಧ ತಪ್ಪದೆ ಇರಬೇಕು. ಆದರೆ ಬ್ರಹ್ಮವಿದ್ಯೆಯಲ್ಲಿ ಗುರುವನ್ನು ಯಾರೂ ಗುರುತಿಸಲಾರರೆಂದು, ಆದ್ದರಿಂದ ಗುರುವಿಗೆ ಶಿಷ್ಯರಿರುವುದಿಲ್ಲವೆಂದು ಕೂಡ ಹೇಳಿಕೊಂಡಿದ್ದೇವೆ. ನಿಜಕ್ಕೆ ಬ್ರಹ್ಮವಿದ್ಯೆಯಲ್ಲಿ ಗುರುವನ್ನು ಯಾವ ಶಿಷ್ಯನೂ ಗುರುತಿಸಲಾರನು. ಇಲ್ಲಿ ಯಾವ ವಿದ್ಯೆಗಾದರೂ ಮೊದಲು ಗುರು ಶಿಷ್ಯ ಇದ್ದುತೀರಲೇಬೇಕೆಂದು ನೀವೇ ಹೇಳಿ, ಬ್ರಹ್ಮವಿದ್ಯೆಯಲ್ಲಿ ಗುರುವಿಗೆ ಶಿಷ್ಯರಿರುವು ದಿಲ್ಲ ವೆಂದು ನೀವೇ ಹೇಳುವುದರಿಂದ ನೀವು ದ್ವಂದ್ವವೈಖರಿಯನ್ನು ಪ್ರದರ್ಶಿ ಸುತ್ತಿದ್ದೀರೆಂದು ಯಾರಾದರೂ ನಮ್ಮನ್ನು ಪ್ರಶ್ನಿಸಬಹುದು. ಅಷ್ಟೇಅಲ್ಲದೆ ಸೃಷ್ಟಿ

ನಂತರ ಕೆಲಸ ಮಾಡದ ದೇವರು ತನ್ನ ಧರ್ಮಗಳಿಗೆ ಹಾನಿ ಏರ್ಪಟ್ಟು, ಅಧರ್ಮಗಳು ಪ್ರಭಲಗೊಂಡಾಗ ಮಾತ್ರವೇ ಬಂದು ತನ್ನ ಧರ್ಮಗಳನ್ನು ಪುನಃ ತಿಳಿಸಿಹೋಗುತ್ತಾನೆಂದು ಭಗವದ್ಗೀತೆಯಲ್ಲಿ ಹೇಳಿದ್ದಾನೆ. ಸೃಷ್ಟಿ ಆದಿಯಲ್ಲಿ ಪ್ರಜೆಗಳಿಗೆ ಧರ್ಮಗಳ ವಿಷಯವೇ ತಿಳಿಯದಿರುವಾಗ, ಭೂಮಿಮೇಲೆ ಧರ್ಮಗಳೆ ಇಲ್ಲದಿರುವಾಗ, ಧರ್ಮಗಳಿಗೆ ಹಾನಿ ಉಂಟಾಗುತ್ತದೆನ್ನುವ ಸಮಸ್ಯೆಯೇ ಇರುವುದಿಲ್ಲ. ಧರ್ಮಗಳು ಇದ್ದರೆ ಧರ್ಮಗಳು ಅಧರ್ಮಗಳಾಗಿ ಬದಲಾಗ ಬಹುದು. ಒಟ್ಟಾರೆ ಧರ್ಮಗಳೆ ಇಲ್ಲದಿರುವಾಗ ಧರ್ಮಗಳು ಅಧರ್ಮಗಳಾಗಿ ಬದಲಾಗುತ್ತದೆನ್ನುವ ವಿಷಯವೇ ಇರುತ್ತದೆ. ಧರ್ಮಗಳು ಅಧರ್ಮಗಳಾಗಿ ಬದಲಾದಾಗ ದೇವರು ಬರುತ್ತಾನೆಂದು ಬ್ರಹ್ಮವಿದ್ಯಾ ಶಾಸ್ತ್ರವಾದ ಭಗವದ್ಗೀತೆಯಲ್ಲಿ, ಜ್ಞಾನಯೋಗ  ಎನ್ನುವ ಅಧ್ಯಾಯದಲ್ಲಿ ಏಳನೇ ಶ್ಲೋಕದಲ್ಲಿ ಹೇಳಿದ್ದಾನೆ. ಧರ್ಮಗಳು ಸೃಷ್ಟಿ ಆದಿಯಲ್ಲಿ ಇಲ್ಲದಿರುವಾಗ ಅವು ಅಧರ್ಮಗಳಾಗಿ ಬದಲಾಗದಿರುವಾಗ ದೇವರು ಬಂದು ಹೇಳುವುದಿಲ್ಲ. ಹಾಗೆ ಬಂದು ಹೇಳಿದ್ದಾನೆ ಎಂದರೆ ಬ್ರಹ್ಮವಿದ್ಯಾಶಾಸ್ತ್ರದಲ್ಲಿನ  ಧರ್ಮಗಳಿಗೆ ಹಾನಿ ಉಂಟಾದಾಗ ಬರುತ್ತೇ ನೆಂದು ಹೇಳಿದ ಶಾಸನ ತಪ್ಪಾಗುತ್ತದೆ. ಶಾಸ್ತ್ರ ಎಂದಿಗೂ ಶಾಸನವಾಗಿಯೇ ಇರುತ್ತದೆ, ಎಂದಿಗೂ ಅಸತ್ಯವಾಗಬಾರದು.

ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಅದೇ ಜ್ಞಾನಯೋಗವೆನ್ನುವ ಅಧ್ಯಾಯದಲ್ಲಿ ಮೊಟ್ಟಮೊದಲ ಶ್ಲೋಕದಲ್ಲಿ, ಈ ರಹಸ್ಯವಾದ ಜ್ಞಾನವನ್ನು ನಾನು ಸೃಷ್ಟಿ ಆದಿಯಲ್ಲಿಯೇ ಸೂರ್ಯನಿಗೆ ಹೇಳಿದ್ದೇನೆ, ಆತನಿಂದ ಎಲ್ಲರಿಗೂ ತಿಳಿಯಲ್ಪಟ್ಟಿದೆಯೆಂದು ಹೇಳಿದ್ದಾರೆ. ಈ ವಾಕ್ಯದ ಪ್ರಕಾರ ಸೃಷ್ಟಿ ನಂತರ ದೇವರು ಸೂರ್ಯನಿಗೆ ಬೋಧಿಸುವುದು ಎನ್ನುವ ಕೆಲಸವನ್ನು ಮಾಡಿದಂತೆ ತಿಳಿಯುತ್ತಿದೆ. ಹಾಗೆ ಹೇಳಿದ್ದರೆ ದೇವರು ರೂಪ, ನಾಮ, ಕ್ರಿಯಾರಹಿತನು ಎನ್ನುವ ಮಾತಿಗೆ ಹಾನಿ ಏರ್ಪಟ್ಟು, ಆ ಮಾತು ಅಸತ್ಯವಾಗಿ ಸೃಷ್ಟಿ ನಂತರ ಕೂಡ ದೇವರು ಕೆಲಸ ಮಾಡಿದಂತಾಗುತ್ತಿದೆ. ಅಷ್ಟೇ ಅಲ್ಲದೆ ಜ್ಞಾನಯೋಗದಲ್ಲಿನ ಒಂದನೇ ಶ್ಲೋಕಕ್ಕೆ ಧರ್ಮಗಳಿಗೆ ಹಾನಿ ಉಂಟಾಗಿ ಧರ್ಮಗಳು ಅಧರ್ಮಗಳಾಗಿ

ಬದಲಾದಾಗ ಬರುತ್ತೇನೆಂಬ ಏಳನೇ ಶ್ಲೋಕವೊಂದರ ಮಾತು ಅಸತ್ಯವಾಗುತ್ತದೆ. ಏಳನೇ ಶ್ಲೋಕದ ಪ್ರಕಾರ ನೋಡಿದರೆ ಧರ್ಮಗಳೆ ಇಲ್ಲದಿರುವಾಗ, ಧರ್ಮಗಳು ಅಧರ್ಮಗಳಾಗಿ ಬದಲಾದಾಗ ಬಂದು ಸೂರ್ಯನಿಗೆ ಧರ್ಮಗಳನ್ನು ತಿಳಿಸುತ್ತೇನೆಂದು ಹೇಳಿದ ಒಂದನೇ ಶ್ಲೋಕವೊಂದರ ಮಾತು ಅಸತ್ಯವಾಗುತ್ತದೆ. ಭಗವದ್ಗೀತೆ ರೂಪದಲ್ಲಿರುವ ಬ್ರಹ್ಮವಿದ್ಯಾ ಶಾಸ್ತ್ರದಲ್ಲಿ ಎರಡು ಶ್ಲೋಕಗಳಾಗಿರುವ ಎರಡು ಶಾಸನಗಳು ಒಂದಕ್ಕೊಂದು ವಿರುದ್ಧವಾಗಿ ಇವೆಯೆಂದು ಅರ್ಥವಾಗುತ್ತಿವೆ. ಈ ಎರಡು ಮಾತುಗಳಲ್ಲಿ ಯಾವುದೊ ಒಂದುಮಾತು ಅಸತ್ಯ ಎಂದು ಅಂದುಕೊಳ್ಳುವುದಕ್ಕೆ, ಶಾಸ್ತ್ರ ಎಂದಿಗೂ ಅಸತ್ಯವಲ್ಲ ಎನ್ನುವ ಶಾಸನ ಕೂಡ ಇದೆ. ಯಾವ ಕೋನದಿಂದ ನೋಡಿದರೂ ಇದಕ್ಕೆ ಉತ್ತರ ಅಗಮ್ಯ ಗೋಚರವಾಗಿದೆ.

ಪ್ರಪಂಚಕ್ಕೆ ಸಂಬಂಧಿಸಿದ ಐದು ಶಾಸ್ತ್ರಗಳನ್ನು ನೋಡಿದರೂ, ಅವು ಯಾವಮಾತ್ರ ಖಂಡಿಸಲ್ಪಡಲಿಲ್ಲ. ಹಾಗಿರುವಾಗ ಬ್ರಹ್ಮವಿದ್ಯಾ ಶಾಸ್ತ್ರ ಖಂಡಿಸಲ್ಪಡುತ್ತದೆಂದು ಯಾರೂ ಹೇಳಲಾರರು. ಅದು ಎಂದಿಗೂ ಖಂಡಿಸಲ್ಪಡುವುದಿಲ್ಲ. ಖಂಡಿಸುವುದು ಶಾಸ್ತ್ರವೇ ಅಲ್ಲ. ಅಷ್ಟಾದಶ (18) ಪುರಾಣಗಳಲ್ಲಿ ಎಷ್ಟೋ ವಿಷಯಗಳನ್ನು ಖಂಡಿಸಬಹುದು. ಆದರೆ ಶಾಸ್ತ್ರಗಳು ಶಾಸನಗಳಾಗಿ, ಶಾಪಗಳಾಗಿರುವುದರಿಂದ ಖಂಡಿಸಲ್ಪಡುವುದಿಲ್ಲ. ಮೇಲಿನ ಸಮಸ್ಯೆ ಶಾಸ್ತ್ರಕ್ಕೆ ಸಂಬಂಧಿಸಿರುವುದು, ಆದ್ದರಿಂದ ಶಾಸ್ತ್ರದಿಂದಲೇ ಪರಿಷ್ಕಾರವಾಗುತ್ತದೆ. ಶಾಸ್ತ್ರದ ಪ್ರಕಾರ ಗುರುವಿಗೆ ಶಿಷ್ಯರು ಇರುವುದಿಲ್ಲ, ಶಿಷ್ಯರಿಗೆ ಬೋಧಕರಿರ ಬಹುದೆಂದು ಮೊದಲೆ ಹೇಳಿದ್ದೇವೆ. ಭೂಮಿಮೇಲೆ ತಿಳಿಯದ ದೈವಧರ್ಮಗಳನ್ನು ಮೊದಲು ದೇವರೆ ತಿಳಿಸುತ್ತಾನೆ. ದೇವರ ಧರ್ಮಗಳು ದೇವರಿಗೇ ತಿಳಿಯುತ್ತದೆ, ಆದ್ದರಿಂದ ಮೊದಲು ದೇವರೇ ಹೇಳಬೇಕು. ಮೊದಲು ಯಾರು ಹೇಳುತ್ತಾರೊ ಅವನೇ ಗುರು. ಗುರುವಿಗೆ ಶಿಷ್ಯರಿರುವುದಿಲ್ಲ ಎನ್ನುವ ಮಾತು ಶಾಸನ. ಅದೇ ಶಾಸನದ ಪ್ರಕಾರ ಪ್ರಶ್ನೆ ಇದ್ದಾಗಲೇ ಅದಕ್ಕೆ ಉತ್ತರ ಇರುತ್ತದೆ. ವಿದ್ಯೆಯನ್ನು ಅರ್ಥಿಸುವ ಶಿಷ್ಯರಿರುವಾಗಲೇ ವಿದ್ಯೆಯನ್ನು ತಿಳಿಸುವ ವಿದ್ಯಾವೇತ್ತನಾದ ಗುರು ಇರುತ್ತಾನೆ. ಇಲ್ಲಿ ಗಮನಿಸಿದರೆ ಗುರುವಿಗೆ ಶಿಷ್ಯರಿರುವುದಿಲ್ಲ ಎನ್ನುವ ಮಾತು ಶಾಸ್ತ್ರವೇ,

ಹಾಗೆ ಪ್ರಶ್ನೆ ಇರುವಾಗಲೇ ಉತ್ತರ ಇರುವಂತೆ, ಶಿಷ್ಯರಿರುವಾಗಲೇ ಗುರುವು ಇರುತ್ತಾನೆನ್ನುವ ಮಾತು ಕೂಡ ಶಾಸ್ತ್ರವೇ. ಈ ಎರಡು ಮಾತುಗಳು ಒಂದಕ್ಕೊಂದು ಪರಸ್ಪರ ವಿರುದ್ಧವಾಗಿರುವಂತೆ ಕಾಣಿಸಿದರೂ, ಅದು ನಮ್ಮ ದೃಷ್ಟಿ ದೋಷವೇ ಹೊರತು, ಆ ಎರಡು ಮಾತುಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲ, ಎರಡು ಮಾತುಗಳೂ ಸತ್ಯವೇ. ಇಲ್ಲಿ ಎರಡು ಮಾತುಗಳು ಹೇಗೆ ಸತ್ಯವಾಗುತ್ತವೆಂಬ ಸಂಶಯ ಬಾರದೆ ಇರುವುದಿಲ್ಲ. ಅದಕ್ಕೆ ಉತ್ತರವಾಗಿ ಮೊದಲು ಗುರುವಿಗೆ ಶಿಷ್ಯರಿರುವುದಿಲ್ಲ ಎಂಬ ಮಾತನ್ನು ವಿವರಿಸಿಕೊಳ್ಳೋಣ.

ಭೂಮಿ ಮೇಲಿರುವ ಗಾಳಿ ಯಾರಿಗೂ ಕಾಣಿಸುವುದಿಲ್ಲ. ಆದರೆ ಗಾಳಿ ಇದ್ದಂತೆ ಅದರ ಸ್ಪರ್ಶದ ಮೂಲಕ ತಿಳಿಯುತ್ತಿದೆ. ಹಾಗೆಯೇ ದೇವರು ಯಾರಿಗೂ ಕಾಣಿಸುವುದಿಲ್ಲ. ಆದರೆ ದೇವರಿದ್ದಂತೆ ದೇವರ ಶಕ್ತಿ ಮೂಲಕ ತಿಳಿಯುತ್ತಿದೆ. ಗಾಳಿ ಕಾಣಿಸದಿದ್ದರೂ ಅದರ ಚಲನಶಕ್ತಿ ಹೊರಗೆ ತಿಳಿಯುತ್ತಿದೆ. ಹಾಗೆಯೇ ದೇವರು ಕಾಣಿಸದಿದ್ದರೂ ದೇವರ ಶಕ್ತಿ ಅಯಸ್ಕಾಂತ ಶಕ್ತಿಯಾಗಿ (ಗುರುತ್ವಾಕರ್ಷಣ ಶಕ್ತಿಯಾಗಿ) ಹೊರಗೆ ತಿಳಿಯುತ್ತಿದೆ. ಪ್ರಕೃತಿಯಲ್ಲಿನ ಒಂದು ಭಾಗವಾದ ಗಾಳಿಗೆ ನಾವು ಅಳತೆ ಹಾಕಲಾರದಷ್ಟುಶಕ್ತಿ ಇದೆ. ಪ್ರಕೃತಿಗೆ ಆಧಾರವಾದ ಪರಮಾತ್ಮ ಅಯಸ್ಕಾಂತಶಕ್ತಿಯಾಗಿದ್ದು ವಿಶ್ವದಲ್ಲಿನ ಸೂರ್ಯ ನಕ್ಷತ್ರಾದಿ ಗೋಳಗಳನ್ನು, ಪಂಚಭೂತಗಳನ್ನು ತನ್ನ ಅಯಸ್ಕಾಂತಶಕ್ತಿ (gravity power) ಯಿಂದ ಖಗೋಳದಲ್ಲಿ ನಿಲ್ಲಿಸಿದೆ. ವಿಶ್ವದಲ್ಲಿನ ಅಯಸ್ಕಾಂತ ಶಕ್ತಿ ದೇವರಿದ್ದಾನೆನ್ನುವುದಕ್ಕೆ ಆಧಾರ ಮಾತ್ರವೆ. ಅದು ದೇವರೊಂದರ ಅಣುಮಾತ್ರ ಶಕ್ತಿಯೇ ಹೊರತು ದೇವರಲ್ಲ. ದೇವರು ತನ್ನಿಂದ ನಿರ್ಮಿಸಲ್ಪಟ್ಟ ವಿಶ್ವಕ್ಕೆ ಧರ್ಮಗಳನ್ನು ಏರ್ಪಡಿಸಿ, ಅವುಗಳನ್ನು ಐದು ಶಾಸ್ತ್ರಗಳಾಗಿ ವಿಭಜಿಸಿ ಇಟ್ಟಿದ್ದಾನೆ. ವಿಶ್ವವನ್ನು ಸೃಷ್ಟಿಸಿದ ತನ್ನ ಇರುವಿಕೆಯನ್ನು ತಿಳಿಸುವುದುಕ್ಕೂ ಕೂಡಾ ಧರ್ಮಗಳನ್ನು ಏರ್ಪಡಿಸಿ ಅವುಗಳನ್ನು ಒಂದು ಶಾಸ್ತ್ರವಾಗಿ ನಿರ್ಮಿಸಿದ್ದಾನೆ. ಪ್ರಪಂಚಕ್ಕೆ ಸಂಬಂಧಿಸಿರುವವು ಗಣಿತ, ಖಗೋಳ, ರಸಾಯನ, ಭೌತಿಕ, ಜ್ಯೋತಿಷ್ಯ ಶಾಸ್ತ್ರಗಳಾಗಿದ್ದು, ದೇವರಿಗೆ ಸಂಬಂಧಿಸಿರುವುದು ಬ್ರಹ್ಮವಿದ್ಯಾ ಶಾಸ್ತ್ರ.

ಪರಮಾತ್ಮ ಒಬ್ಬನು, ಆತನಿಂದ ಸೃಷ್ಟಿಸಲ್ಪಟ್ಟ ವಿಶ್ವವು ಐದು ಭಾಗಗಳು. ಆದ್ದರಿಂದ ಶಾಸ್ತ್ರಗಳು ಆರು ತಯಾರಾಗಿವೆ. ಐದು ಭಾಗಗಳ ಪ್ರಕೃತಿಗೆ ಪರಮಾತ್ಮ ಒಬ್ಬನೇ ಆಧಾರವಾದಂತೆ, ಪ್ರಕೃತಿಗೆ ಸಂಬಂಧಿಸಿದ ಐದು ಶಾಸ್ತ್ರಗಳಿಗು ಬ್ರಹ್ಮವಿದ್ಯಾ ಶಾಸ್ತ್ರ ಆಧಾರವಾಗಿದೆ. ಎಲ್ಲದಕ್ಕಿಂತ ದೊಡ್ಡದಾದ (ಉತ್ತಮವಾದ) ಬ್ರಹ್ಮವಿದ್ಯಾ ಶಾಸ್ತ್ರವನ್ನು ಸೃಷ್ಟಿ ಆದಿಯಲ್ಲಿಯೇ ದೇವರು ಸೂರ್ಯನಿಗೆ ತಿಳಿಸಿದ್ದಾನೆ. ದೇವರಿಗೆ ಸಂಬಂಧಿಸಿದ ಧರ್ಮಗಳು ದೇವರಿಗೇ ತಿಳಿಯುತ್ತದೆ, ಆದ್ದರಿಂದ ಅದನ್ನು ದೇವರೇ ಸಂಪೂರ್ಣವಾಗಿ ತಿಳಿಸಿದ್ದಾನೆ. ಇದನ್ನನುಸರಿಸಿ ಷಟ್‌ಶಾಸ್ತ್ರಗಲ್ಲಿ ಮೊಟ್ಟಮೊದಲು ತಿಳಿಯಲ್ಪಟ್ಟ ಶಾಸ್ತ್ರ ಬ್ರಹ್ಮವಿದ್ಯಾ ಶಾಸ್ತ್ರ. ಇಲ್ಲಿಯವರೆಗೂ ಸಂಪೂರ್ಣವಾಗಿ ತಿಳಿಯಲ್ಪಟ್ಟ ಶಾಸ್ತ್ರವೂ ಕೂಡ ಬ್ರಹ್ಮವಿದ್ಯಾಶಾಸ್ತ್ರವೆ. ಉಳಿದ ಐದು ಶಾಸ್ತ್ರಗಳು ಮಾನವನಿಗೆ ಸಂಪೂರ್ಣವಾಗಿ ಇಲ್ಲಿಯವರೆಗು ತಿಳಿಯಲ್ಪಡಲಿಲ್ಲ ವೆಂದು ಹೇಳಬಹುದು.

ಪ್ರಪಂಚಕ್ಕೆ ಸಂಬಂಧಿಸಿದ ಐದುಶಾಸ್ತ್ರಗಳು ಇಲ್ಲಿಯವರೆಗೂ ಶೇ. ಹದಿನೈದರಷ್ಟು ಮಾತ್ರವೆ ತಿಳಿಯಲ್ಪಟ್ಟಿವೆ. ಐದು ಶಾಸ್ತ್ರಗಳಲ್ಲಿ ತಿಳಿಯಬೇಕಾದ ಸೂತ್ರಗಳು (ಸಿದ್ಧಾಂತಗಳು) 85 ರಷ್ಟು ಇವೆ. ಆದ್ದರಿಂದ ಪ್ರಪಂಚ ವಿಷಯಗಳಲ್ಲಿ ಅನೇಕ ಪ್ರಶ್ನೆಗಳಿಗೆ ಉತ್ತರಗಳು ಇಲ್ಲ. ಆದರೆ ಬ್ರಹ್ಮವಿದ್ಯಾ ಶಾಸ್ತ್ರ ದೇವರಿಂದ ಆದಿಯಲ್ಲಿಯೇ ಸಂಪೂರ್ಣವಾಗಿ ತಿಳಿಯಲ್ಪಟ್ಟಿದೆ. ಆದ್ದರಿಂದ ಯಾವ ಪ್ರಶ್ನೆಗಾದರು ಉತ್ತರ ಖಂಡಿತ ದೊರೆಯುತ್ತದೆ. ಈಗ ಗುರುವಿಗೆ ಶಿಷ್ಯರಿರುವುದಿಲ್ಲ ಎಂಬ ವಿಷಯವನ್ನು ಬ್ರಹ್ಮವಿದ್ಯಾಶಾಸ್ತ್ರದ ಮೂಲಕವೇ ತಿಳಿದುಕೊಳ್ಳೋಣ. ದೇವರು ತನ್ನ ಜ್ಞಾನವನ್ನು ಭೂಮಿಮೇಲಿರುವ ಮನುಷ್ಯರಿಗೆ ತಿಳಿಸಲಿಲ್ಲ. ಖಗೋಳದಲ್ಲಿರುವ ಸೂರ್ಯನಿಗೆ ಬ್ರಹ್ಮವಿದ್ಯಾಶಾಸ್ತ್ರವನ್ನು ಸಂಪೂರ್ಣವಾಗಿ ತಿಳಿಸಿದ್ದಾನೆ. ಹಾಗೆ ತಿಳಿಯಲಾದ ಧರ್ಮಗಳು ಸೂರ್ಯನ ಮೂಲಕ ಭೂಮಿಮೇಲೆ ಪ್ರಜೆಗಳಿಗೆ ತಿಳಿದುಹೋಗಿವೆ. ಹಾಗೆ ಒಂದು ಸಲ ತಿಳಿದುಹೋದ ಧರ್ಮಗಳು ಕೆಲವು ಯುಗಗಳಿಗೆ (ಸುಮಾರು ಹತ್ತು ಯುಗಗಳಿಗೆ) ಅಧರ್ಮಗಳಾಗಿ ಬದಲಾಗಿಹೋಗುತ್ತವೆ. ಆಗ ಮೊದಲು ಹೇಳಿದವುಗಳನ್ನು

ಪುನಃ ಹೇಳುವುದಕ್ಕೆ ಬರುವ ದೇವರ ಅಂಶವನ್ನು ಗುರು ಎನ್ನುತ್ತೇವೆ. ಗುರು ಭೂಮಿಮೇಲಕ್ಕೆ ಬಂದು ಮೊದಲು ಹೇಳಿದ ಧರ್ಮಗಳನ್ನೇ ಪುನಃ ಪುನರುದ್ಧೀಕರಿಸಿ (ಪುನಃ ತಿಳಿಯಪಡಿಸಿ) ಹೋಗುತ್ತಾನೆ. ಆಗ ಬಂದಿರುವ ಗುರುವಿಗೆ ಶಿಷ್ಯರು ಅಗತ್ಯವಿಲ್ಲ. ಏಕೆಂದರೆ! ಗುರು ಒಂದು ಸಲವೇ ಒಬ್ಬ ಶೀಷ್ಯನಿಗೆ ತನ್ನ ಧರ್ಮಗಳನ್ನು ಸಂಪೂರ್ಣವಾಗಿ ತಿಳಿಸುತ್ತಾನೆ. ಸೃಷ್ಟಿ ಆದಿಯಲ್ಲಿಯೇ ದೇವರೆ ಗುರುವಾಗಿದ್ದು ಸೂರ್ಯನನ್ನು ಶಿಷ್ಯನನ್ನಾಗಿ ಮಾಡಿಕೊಂಡು ಧರ್ಮಗಳನ್ನು ತಿಳಿಸಿದ್ದಾನೆ. ಆದ್ದರಿಂದ ಮಾತುಮಾತಿಗು ಆತನು ಬಂದಾಗಲೆಲ್ಲಾ ಆತನಿಗೆ ಶಿಷ್ಯರು ಅಗತ್ಯವಿಲ್ಲ. ಪ್ರಶ್ನಿಸುವ ಶಿಷ್ಯನಿರುವಾಗಲೇ ಉತ್ತರ ಹೇಳುವ ಗುರುವಿರಬೇಕು. ವಿದ್ಯೆಯನ್ನು ಅರ್ಥಿಸುವ ವಿದ್ಯಾರ್ಥಿ ಇದ್ದಾಗಲೇ, ವಿದ್ಯೆಯನ್ನು ತಿಳಿಸುವ ವಿದ್ಯಾವೇತ್ತನಾದ ಗುರು ಅಗತ್ಯ. ಗುರುವಿಲ್ಲದ್ದು ಶಿಷ್ಯನಿರುವುದಿಲ್ಲ ಎನ್ನುವ ಸೂತ್ರದ ಪ್ರಕಾರ, ಮೊದಲು ಸೂರ್ಯನು ಶಿಷ್ಯನಾದಾಗ ದೇವರು ಗುರುವಾಗಿದ್ದಾನೆ. ಸೂತ್ರದ ಪ್ರಕಾರ ದೇವರು ಗುರುವಾಗಿದ್ದಾನೆ ಆಗ ಶೀಷ್ಯನು ಕೂಡ ಇದ್ದಾನೆ. ನಂತರ ಗುರುವಿಗೆ ಶಿಷ್ಯರು ಅಗತ್ಯವಿಲ್ಲ. ಆದ್ದರಿಂದ ಧರ್ಮಗಳು ಅಧರ್ಮಗಳಾಗಿ ಬದಲಾದಾಗ ಹಳೆ ಧರ್ಮಗಳನ್ನೇ ತಿಳಿಸುವುದಕ್ಕೆ ಬರುತ್ತಾನೆ. ಆಗ ಹೇಳುವುದಕ್ಕೆ ಹೊಸ ಧರ್ಮಗಳು ಯಾವುವು ಇಲ್ಲ. ಹೊಸ ಧರ್ಮಗಳು ಇದ್ದರೆ ಶಿಷ್ಯನು ಅಗತ್ಯ. ಉಳಿದ ಹೊಸ ಧರ್ಮಗಳು ಯಾವುವು ಇಲ್ಲ, ಆದ್ದರಿಂದ ಪುನರುದ್ಧರಿಸುವುದಕ್ಕೆ ಬಂದಾಗ ಶಿಷ್ಯರು ಅಗತ್ಯವಿಲ್ಲ. ಕೆಲವು ಲಕ್ಷಗಳ ವರ್ಷಗಳಿಗೆ ಒಂದು ಸಲ ಧರ್ಮಗಳಿಗೆ ಗ್ಲಾನಿ ಉಂಟಾಗಿ ಅಧರ್ಮಗಳು ಅಭಿವೃದ್ಧಿಯಾದಾಗ ಬಂದಿರುವ ಗುರುವು ಯಾರಿಗೋ ಒಬ್ಬರಿಗೆ ತಿಳಿಸಿಹೋ ಗುತ್ತಾನೆ. ಧರ್ಮಗಳ ಮೇಲೆ ಶ್ರದ್ಧೆಯಿಲ್ಲದ ಅನಾಮಿಕನಿಗೆ ಹೇಳಿದ ಜ್ಞಾನವನ್ನು ಕೇಳಿದರೂ ಅವನಿಗೆ ಅದು ಉಪಯೋಗವಾಗುವುದಿಲ್ಲ. ಆದರೆ ನಂತರ ಅವನಮುಖಾಂತರ ತಿಳಿದುಕೊಂಡವರಿಗೆ ಕೆಲಸಕ್ಕೆ ಬರುತ್ತದೆ. ಸಾಂಬಾರು ಪಾತ್ರೆಯೊಳಗೆ ಸೌಟನ್ನು ಇಟ್ಟರೂ, ಸೌಟಿಗೆ ಸಾಂಬಾರಿನ ರುಚಿ ಅಗತ್ಯವಿಲ್ಲ. ಆದರೆ ಚೌಟಿನಿಂದ ಸಾಂಬಾರನ್ನು ಹಾಕಿಸಿಕೊಂಡು ತಿನ್ನುವವನಿಗೆ ಸಾಂಬಾರಿನ ರುಚಿ ತಿಳಿದಹಾಗೆ, ದೇವರು ತನ್ನ ಧರ್ಮಗಳನ್ನು ಪುನರುದ್ಧರಿಸುವ

ಕಾರ್ಯಕ್ರಮದಲ್ಲಿ ಧರ್ಮಗಳು ತಿಳಿಯಬೇಕಾದ ಮನುಷ್ಯರಿಗೆ ತನಗೆ ಮಧ್ಯದಲ್ಲಿ ಸೌಟಿನಂತಹ ವ್ಯಕ್ತಿಯನ್ನು ಇಟ್ಟುಕೊಂಡು, ಅವನಿಗೆ ಧರ್ಮಗಳನ್ನು ತಿಳಿಸುತ್ತಾನೆ. ಅದೇ ವಿಧವಾಗಿ ಕೃಷ್ಣನು ಧರ್ಮಗಳ ಮೇಲೆ ಆಸಕ್ತಿಯಿಲ್ಲದ ಅರ್ಜುನನನ್ನು ಅಡ್ಡ ಇಟ್ಟುಕೊಂಡು ಧರ್ಮಗಳನ್ನು ತಿಳಿಸಿ ಹೋಗಿದ್ದಾನೆ. ಅಷ್ಟೇ ಹೊರತು ಆತನು ಯಾವ ಶಿಷ್ಯರನ್ನು ತಯಾರು ಮಾಡಿಕೊಳ್ಳಲಿಲ್ಲ. ಕೃಷ್ಣನು ಜಗತ್ತಿಗೆಲ್ಲ ಗುರುವಾದ ಜಗತ್‌ಗುರುವೆಂದು ಯಾರೂ ಆತನನ್ನು ಗುರುತಿಸಲಿಲ್ಲ. ಇಲ್ಲಿ ಗುರುವಿಗೆ ಶಿಷ್ಯರಿರುವುದಿಲ್ಲ ಎನ್ನುವ ಮಾತು ಶಾಸ್ತ್ರಬದ್ಧವಾಗಿ ನೇರವೇರಿದೆ ಯೆಂದು ಹೇಳಬಹುದು. ಒಬ್ಬ ಕೃಷ್ಣನಾಗಿ ಬಂದಾಗಲೇ ಅಲ್ಲದೆ, ಯಾವಾ ಗಾದರೂ ಧರ್ಮಗಳನ್ನು ಪುನರುದ್ಧರಿಸುವುದಕ್ಕೆ ಬಂದಿರುವ ಗುರುವು (ದೇವರು) ಯಾವ ವ್ಯಕ್ತಿಯಾಗಿ ಇದ್ದರೂ, ಆಗ ಆತನ ಶಿಷ್ಯರನ್ನು ತಯಾರುಮಾಡಿ ಕೊಳ್ಳುವುದಿಲ್ಲ. ಆತನು ಯಾರಿಗೂ ಗುರೂಪದೇಶವನ್ನು ಕೊಡುವುದಿಲ್ಲ. ಆತನನ್ನು ಯಾರು ಗುರುವಾಗಿ ಗುರುತಿಸುವುದಿಲ್ಲ. ಆತನು ಗುರುವಾಗಿ ಕಾಣಿಸುವುದಿಲ್ಲ. ಇದೆಲ್ಲಾ ಶಾಸ್ತ್ರಬದ್ಧವೇ. ಆದ್ದರಿಂದ ಗುರುವಿಗೆ ಶಿಷ್ಯರಿರುವುದಿಲ್ಲ ಎನ್ನುವ ಮಾತು ನೂರಕ್ಕೆ ನೂರರಷ್ಟು ಸತ್ಯ ಮತ್ತು ಶಾಸನ ಎಂದು ಗ್ರಹಿಸಬೇಕು.

ಶಿಷ್ಯನಿದ್ದರೇನೆ ಗುರು ಇರುತ್ತಾನೆ ಎನ್ನುವ ಮೊದಲ ಮಾತು ಮತ್ತು ಗುರುವಿಗೆ ಶಿಷ್ಯರಿರುವುದಿಲ್ಲ ಎನ್ನುವ ಎರಡನೇ ಮಾತು, ಎರಡು ಪರಸ್ಪರ ವಿರುದ್ಧವಾಗಿ ಕಾಣಿಸಿದರೂ ಎರಡು ಶಾಸ್ತ್ರಬದ್ಧವಾದ ಮಾತುಗಳೆಂದು ಹೇಳಿಕೊಂಡಿದ್ದೇವೆ. ಅದರಲ್ಲಿ ಗುರುವಿಗೆ ಶಿಷ್ಯರಿರುವುದಿಲ್ಲ ಎನ್ನುವ ಮಾತು ಸತ್ಯವೆಂದು ಶಾಸ್ತ್ರಬದ್ಧವೆಂದು ತಿಳಿದುಹೋಗಿದೆ. ಇನ್ನು ಶಿಷ್ಯನಿದ್ದರೇನೆ ಗುರುವಿರುತ್ತಾನೆ ಎಂಬಮಾತು ಹೇಗೆ ಸತ್ಯವೊ, ಹೇಗೆ ಶಾಸ್ತ್ರಬದ್ಧವೋ ವಿವರಿಸಿಕೊಂಡು ನೋಡೋಣ. ವಿಶ್ವವನ್ನು ಸೃಷ್ಟಿಸಿದಾಗ ಅದರಲ್ಲಿನ ಮಾನವರಿಗೆ ದೇವರ ಧರ್ಮಗಳು ಎಂದರೆ ಏನೊ ತಿಳಿದಿಲ್ಲ. ದೇವರು ಅಂದರೆ ಯಾರೋ ಕೂಡ ತಿಳಿದಿಲ್ಲ. ಅಂತಹ ಪರಿಸ್ಥಿತಿಯಲ್ಲಿ ದೇವರೇ ತನ್ನ ಧರ್ಮಗಳನ್ನು ಮೊಟ್ಟಮೊದಲು ತಿಳಿಸಬೇಕಾಗಿದೆ. ಮೊದಲು ಹೇಳುವ ಜ್ಞಾನವನ್ನು

(ಧರ್ಮಗಳನ್ನು) ತಿಳಿದುಕೊಳ್ಳುವುದಕ್ಕೆ ಶಿಷ್ಯನು ತಪ್ಪದೆ ಇರಬೇಕು. ಶಿಷ್ಯನಿದ್ದರೆ ಗುರುವಿದ್ದಂತೆ ಲೆಕ್ಕಿಸಲಾಗುತ್ತದೆ. ದೇವರು ಕಾಣಿಸುವ ಮನುಷ್ಯನಾಗಿ ಕೃಷ್ಣನಂತೆ ಬಂದು ಹೇಳಿದರೆ ಅದು ಧರ್ಮವಿರುದ್ಧ, ಶಾಸ್ತ್ರವಿರುದ್ಧ ಆಗುತ್ತದೆ. ಏಕೆಂದರೆ ಮೊದಲೆ ಇರುವ ಧರ್ಮಗಳು ಇಲ್ಲದಂತೆ ಹೋದಾಗ ಮಾತ್ರವೆ ದೇವರು (ದೇವರ ಅಂಶ) ಮನುಷ್ಯನಾಗಿ ಬಂದು ಪುನಃ ಹೇಳಿದವುಗಳನ್ನೇ ಹೇಳಿಹೋಗುತ್ತಾನೆ. ಹಳೆ ಧರ್ಮಗಳಿಗೆ ಶಿಷ್ಯನ ಅಗತ್ಯವಿಲ್ಲ. ಹೊಸ ಧರ್ಮಗಳಿಗೆ ಗುರು ಶಿಷ್ಯನು ಇಬ್ಬರೂ ಅಗತ್ಯವೇ. ಗುರುಶಿಷ್ಯ ಸಂಬಂಧ ಇರಲೇಬೇಕು. ಇಲ್ಲಿ ಮೊದಲೆ ಹೇಳಲಾದ ಹಳೆಧರ್ಮಗಳು ಎನ್ನುವ ಮಾತನ್ನು ಮತ್ತು ಮೊಟ್ಟಮೊದಲು ಹೇಳಲ್ಪಡುವ ಹೊಸ ಧರ್ಮಗಳು ಎನ್ನುವ ಮಾತನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಹಳೆಧರ್ಮಗಳನ್ನು ಬೋಧಿಸುವಾಗ ಶಿಷ್ಯರಿರುವುದಿಲ್ಲ. ಹೊಸ ಧರ್ಮಗಳನ್ನು ಬೋಧಿಸುವಾಗ ತಪ್ಪದೆ ಶಿಷ್ಯರು ಅವಶ್ಯ. ಹೊಸ ಧರ್ಮವನ್ನು ಬೋಧಿಸುವಾಗ ಎದುರಾಗಿ ಶಿಷ್ಯನನ್ನು ಇಟ್ಟುಕೊಂಡು ತಾನು ಮನುಷ್ಯನಾಗಿದ್ದು ಬೋಧಿಸಿದರೂ ದೇವರು ಬೋಧಿಸಿದಂತೆ ಆಗುತ್ತದೆ. ನಂತರ ಬೋಧಿಸುವ ಗುರುವು ಶಿಷ್ಯನಿಗೆ ಕಾಣಿಸಿ ಬೋಧಿಸಿದಂತಾಗುತ್ತದೆ. ಹೊಸ ಧರ್ಮಗಳನ್ನು ಬೋಧಿಸುವಾಗ ಗುರು ಶಿಷ್ಯರಿದ್ದರೂ, ಶಿಷ್ಯನಿಗೆ ಗುರು ಕಾಣಿಸಬಾರದು. ಕಾಣಿಸಿ ಬೋಧಿಸಿದರೆ ದೇವರು ಕೆಲಸ ಮಾಡಿದಂತಾಗುತ್ತದೆ. ದೇವರು ಕೆಲಸ ಮಾಡಿದಂತಲ್ಲದೆ ಹೊಸ ಧರ್ಮಗಳು ಶಿಷ್ಯನಿಗೆ ತಿಳಿಸಬೇಕು. ಶಿಷ್ಯನಿಗೆ ದೇವರು (ಗುರುವು) ಜ್ಞಾನವನ್ನು (ಧರ್ಮಗಳು) ತಿಳಿಸುತ್ತಿದ್ದರೂ, ಶಿಷ್ಯನು ಗುರುವಿನಿಂದ ಜ್ಞಾನವನ್ನು ಕೇಳಿ ತಿಳಿದುಕೊಳ್ಳುತ್ತಿದ್ದರೂ ಆ ದೃಶ್ಯವನ್ನಾಗಲಿ, ಆ ವಿಷಯವಾಗಲಿ ಇತರರಿಗೆ ಯಾರಿಗೂ ತಿಳಿಯಬಾರದು. ತಿಳಿದರೆ ದೇವರು ಕೆಲಸ ಮಾಡಿದಂತೆ ಆರೋಪಕ್ಕೆ ಬರುತ್ತದೆ. ಆದ್ದರಿಂದ ಹೊಸ ಧರ್ಮಗಳನ್ನು ಮೊದಲು ಒಬ್ಬ ಶಿಷ್ಯನಿಗೆ ದೇವರೇ ತಿಳಿಸಬೇಕಾಗಿದ್ದರೂ, ಶಿಷ್ಯನು ದೇವರ ಮೂಲಕವೇ ತಿಳಿದುಕೊಂಡರೂ ದೇವರು ಹೇಗೆ ಬೋಧಿಸಿರುವುದು, ಶಿಷ್ಯನು ದೇವರ ಮೂಲಕ ಹೇಗೆ ತಿಳಿದುಕೊಂಡಿರುವುದು ಹೊರ ಪ್ರಪಂಚದಲ್ಲಿನ ಯಾರಿಗೂ ತಿಳಿಯಬಾರದು.

ಹೊರ ಪ್ರಪಂಚದಲ್ಲಿ ಯಾರಿಗೂ ತಿಳಿಯದಂತೆ ದೇವರು ರಹಸ್ಯವಾಗಿ ಬೋಧಿಸಿದರೂ ನಿಜಕ್ಕೆ ದೇವರು ಕೆಲಸ ಮಾಡಿದಂತೆ ಅಲ್ಲವೆ! ಎಂದು ಕೂಡ ಕೆಲವರು ಕೇಳಬಹುದು. ಅದಕ್ಕೆ ನಾವು ಕೂಡ ಹೌದೆಂದು ಸಮಧಾನ ಹೇಳಬೇಕಾಗಿ ಬರುತ್ತದೆ. ಆದರೆ ಕಾಣಿಸದಂತೆ ಕೂಡ ದೇವರು ಕೆಲಸವನ್ನು ಮಾಡಿದ್ದಾನೆಂದು ಹೇಳುವುದಕ್ಕೆ ಸಾಧ್ಯವಿಲ್ಲದಂತೆ ದೇವರು ಮಾಡಿದ್ದಾನೆ. ಅದು ಹೇಗೆ ಎಂದರೆ! ವಿಶ್ವವ್ಯಾಪಿಯಾದ ದೇವರ ಅಂಶ ಒಂದು ಭೂಮಿಮೇಲೆ ಹುಟ್ಟಿ, ಆಕಾರವನ್ನು ಧರಿಸಿ ಧರ್ಮಗಳನ್ನು ತಿಳಿಸುವುದು ಧರ್ಮಗಳನ್ನು ಪುನರುದ್ಧರಿಸಿದಂತಾಗುತ್ತದೆ. ಆ ವಿಧವಾಗಿ ಕೃಷ್ಣಾವತಾರದಲ್ಲಿ ನಡೆದಿದೆ. ಆಗ ಗುರುವಿಗೆ ಶಿಷ್ಯರಿರುವುದಿಲ್ಲವೆಂದು ಕೂಡ ಹೇಳಿದ್ದೇವೆ. ಈಗ ಅಸಲು ವಿಷಯಕ್ಕೆ ಬಂದರೆ ಸರ್ವವ್ಯಾಪಿಯಾದ ದೇವರು ಎಲ್ಲರ ಶರೀರಗಳಲ್ಲಿದ್ದಾನೆ. ಆದ್ದರಿಂದ ಜ್ಞಾನ ತಿಳಿದುಕೊಳ್ಳುವ ಸಾಮರ್ಥ್ಯ ಹೊಂದಿದವನನ್ನು ಮತ್ತು ತಿಳಿದ ಧರ್ಮಗಳನ್ನು ಒಂದು ಭೂಮಂಡಲದಲ್ಲಿಯೇ ಅಲ್ಲದೆ ಜೀವರಾಶಿಗಳಿರುವ ಇತರೆ ಗೋಳಗಳ ಮೇಲೆ ಕೂಡ ತಿಳಿಸುವ ಸಾಮರ್ಥ್ಯ ಹೊಂದಿದವನನ್ನು, ನಾನು ನಿಮಗೆ ದೈವಜ್ಞಾನವನ್ನು ತಿಳಿಸಿದ್ದೇನೆ ಎನ್ನುವ ಸಾಕ್ಷಿಯಾಗಿ ಚಿರಕಾಲ ಇರುವವನು, ನಾನು ದೇವರ ಜ್ಞಾನವನ್ನು ತಿಳಿಸಿ ಅದರಿಂದ ಯಾರು ನನ್ನನ್ನು ಏನು ಮಾಡಲಾರರೆಂದು ತಿಳಿಸುವವನನ್ನು, ಶರೀರದಲ್ಲಿಯೇ ದೇವರು ಗುರುತಿಸಿ ಅವನನ್ನು ಶಿಷ್ಯನನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾನೆ. ಹಾಗೆ ಎಲ್ಲಾ ಸಾಮರ್ಥ್ಯ ಗಳಿರುವವನು ವಿಶ್ವದಲ್ಲಿ ಸೂರ್ಯನೊಬ್ಬನೆ ಇದ್ದಾನೆ. "ಮತ್ ಸ್ಥಾನಿ ಸರ್ವಭೂತಾನಿ" ಎನ್ನುವಂತೆ ದೇವರು ಎಲ್ಲರಲ್ಲಿಯೂ ಇದ್ದಾನೆ, ಎಲ್ಲರೂ ದೇವರಲ್ಲಿದ್ದಾರೆ, ಎನ್ನುವ ಸೂತ್ರದ ಪ್ರಕಾರ ಸೂರ್ಯನ ಶರೀರದಲ್ಲಿ ಕೂಡ ದೇವರ ಅಂಶವಿದೆ. ದೇವರ ಅಂಶವೇ ಸೂರ್ಯನ ಸಾಮರ್ಥ್ಯವನ್ನು ಗುರುತಿಸಿ ಸೂರ್ಯನನ್ನು ಶಿಷ್ಯನನ್ನಾಗಿ ಮಾಡಿಕೊಂಡಿದೆ. ಸೂರ್ಯನ ಶರೀರದಲ್ಲಿಯೇ ಇರುವ ದೇವರ ಅಂಶ ಸೂರ್ಯನಿಗೆ ಗುರುವಾಗಿದ್ದೂ, ತನ್ನ ಧರ್ಮಗಳನ್ನು ಸೂರ್ಯನಿಗೆ ಶರೀದೊಳಗೇ ಬೋಧಿಸುವುದು ಪ್ರಾರಂಭ ಮಾಡಿದೆ. ಗೋಳವನ್ನೇ ಶರೀರವಾಗಿರುವ ಸೂರ್ಯನು ತನ್ನ ಶರೀರದಲ್ಲಿಯೇ ತಿಳಿಯುವ ಅನೇಕ

ದೈವಧರ್ಮಗಳನ್ನು ತಿಳಿದುಕೊಂಡಿದ್ದಾನೆ. ಆಗಾಗ ಸೂರ್ಯನಿಗೆ ಕೆಲವು ಪ್ರಶ್ನೆಗಳು ಹುಟ್ಟುತ್ತಿರುವಾಗ ಆ ಪ್ರಶ್ನೆಗಳಿಗೆ ಒಳಗಿರುವ ದೈವಶಕ್ತಿಯೇ ಉತ್ತರವನ್ನು ಕೊಡುತ್ತಾಹೋಗಿದೆ. ಈ ವಿಧವಾಗಿ ಒಂದು ವರ್ಷ ಕಾಲದವರೆಗೂ ಸೂರ್ಯನ ಶರೀರದಲ್ಲಿನ ದೇವರು ಗುರುವಾಗಿದ್ದೂ, ಶರೀರದಲ್ಲಿನ ಸೂರ್ಯನನ್ನು ಶಿಷ್ಯನನ್ನಾಗಿ ಮಾಡಿಕೊಂಡು, ಸಂಪೂರ್ಣವಾಗಿ ಧರ್ಮಗಳನ್ನು ತಿಳಿಸಿದ್ದಾನೆ. ಪ್ರಶ್ನೆ ಶರೀರದಲ್ಲಿಯೇ, ಉತ್ತರ ಆ ಶರೀರದಲ್ಲಿಯೇ ಉತ್ಪನ್ನವಾದಾಗ, ಒಂದೇ ಶರೀರದಲ್ಲಿ ಗುರು ಶಿಷ್ಯನು ಒಂದೇ ಕಾಲದಲ್ಲಿ ಇರುತ್ತಾ, ಗುರುಶಿಷ್ಯಸಂಬಂಧದಿಂದ ಶಿಷ್ಯನಿಗೆ ಧರ್ಮಗಳನ್ನು ಗುರು ತಿಳಿಸಿದ್ದಾನೆ. ಒಂದು ಶರೀರದಲ್ಲಿನ ದೈವವೊಂದರ ಅಂಶ, ಅದೇ ಶರೀರದಲ್ಲಿಯೇ ಜೀವಿಗೆ ಧರ್ಮಗಳನ್ನು ತಿಳಿಸಿದ ವಿಷಯ ಯಾರಿಗೂ ತಿಳಿಯದ ರಹಸ್ಯ. ಆದ್ದರಿಂದ ಸೃಷ್ಟಿ ನಂತರ ದೇವರು ಕೆಲಸ ಮಾಡಿದಂತಲ್ಲದೆ ಹೋಗಿದೆ. ಪ್ರತ್ಯೇಕಿಸಿ ಒಂದು ಶರೀರವನ್ನು ಧರಿಸಿದ ದೇವರ ಅಂಶ, ಮೊದಲು ತಾನು ಹೇಳಿದ ಧರ್ಮಗಳನ್ನೇ ಪುನಃ ಹೇಳುತ್ತಾನೆ. ಆಗ ಶಿಷ್ಯನು ಬೇಕಾಗಿಲ್ಲ. ಒಂದು ಶರೀರದಲ್ಲಿ ಎಲ್ಲರಲ್ಲಿರುವಂತೆ ಸರ್ವ ಸಾಧಾರಣ ವಾಗಿರುವ ದೇವರ ಅಂಶ, ಅದೇ ಶರೀರವನ್ನು ವೇದಿಕೆ ಮಾಡಿಕೊಂಡು ಅದರಲ್ಲಿನ ಜೀವಿಯನ್ನು ಶಿಷ್ಯನನ್ನಾಗಿ ಮಾಡಿಕೊಂಡು ಹೊಸ ಧರ್ಮಗಳನ್ನು ತಿಳಿಸುತ್ತಾನೆ. ಅದು ಸೃಷ್ಟಿ ನಂತರ ಒಂದು ಸಲ ಮಾತ್ರವೇ ನಡೆಯುತ್ತದೆ. ಹಾಗೆ ಹೇಳುವುದು ನಡೆದರೂ ಅದು ಸೃಷ್ಟಿ ನಂತರ ದೇವರು ಮಾಡಿದ ಕೆಲಸವಲ್ಲ. ದೇವರ ಅಂಶ ಮಾಡಿದ ಕೆಲಸ ಆಗಿರುವುದರಿಂದ ಅದನ್ನು ಸಂಪೂರ್ಣ ದೇವರ ಕೆಲಸವಾಗಿ ಲೆಕ್ಕಿಸಲಾರೆವು.

ಶಾಸ್ತ್ರಪದ್ಧತಿಗೆ ಯಾವಮಾತ್ರ ಲೋಪ ಇಲ್ಲದಂತೆ ಸೃಷ್ಟಿ ಆದಿಯಲ್ಲಿ ದೇವರ ಅಂಶ ಧರ್ಮಗಳನ್ನು ಬೋಧಿಸಿದೆ. ಆದರೆ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ! ಮೊಟ್ಟಮೊದಲು ಧರ್ಮಗಳು ಬೋಧಿಸಲ್ಪಟ್ಟಾಗ ಗುರು ಶಿಷ್ಯನು ಇಬ್ಬರು ಇದ್ದರೂ, ಅವರು ಬಾಹ್ಯವಾಗಿ ಕಾಣಿಸುವುದಿಲ್ಲ. ಒಂದೇ ಶರೀರದಲ್ಲಿ ಇಬ್ಬರು ಇರುವುದರಿಂದ ಶಿಷ್ಯನಿಗೆ ಬಂದಿರುವ ಪ್ರಶ್ನೆಯಾಗಲಿ,

ಗುರು ಹೇಳಿದ ಉತ್ತರವಾಗಲಿ, ಹೊರಗಿನ ಪ್ರಜೆಗಳಿಗೆ ಯಾರಿಗೂ ತಿಳಿದಿಲ್ಲ. ಶರೀರವನ್ನು ವೇದಿಕೆ ಮಾಡಿಕೊಂಡು ದೇವರ ಅಂಶ ಜೀವಾತ್ಮಕ್ಕೆ ಬೋಧಿಸಿದಾಗ, ಆ ಜೀವಾತ್ಮ ಹೊರಗಿನ ಪ್ರಜೆಗಳಿಗೆ ಮೊಟ್ಟಮೊದಲು ಬೋಧಿಸಿದವನಾಗುತ್ತಾನೆ. ಆದ್ದರಿಂದ ಮೊದಲು ಭೂಮಿಮೇಲೆ ಪ್ರಜೆಗಳಿಗೆ ಧರ್ಮಗಳನ್ನು ತಿಳಿಸಿದ ಘನತೆ ಸೂರ್ಯನಿಗೆ ಸಿಕ್ಕಿದೆ. ಸೂರ್ಯನಿಗೆ ಯಾರು ಬೋಧಿಸಿರುವುದು ಪ್ರಜೆಗಳಿಗೆ ತಿಳಿದಿಲ್ಲ ಆದರೆ, ಪ್ರಜೆಗಳಿಗೆ ಮೊದಲು ಬೋಧಿಸಿರುವುದು ಸೂರ್ಯನೆಂದು ಎಲ್ಲರಿಗೂ ತಿಳಿದಿದೆ. ಮೊದಲು ಭೂಮಂಡಲದಲ್ಲಿ ಪ್ರಜೆಗಳಿಗೆ ದೈವಧರ್ಮಗಳನ್ನು ತಿಳಿಸಿದವನು ಸೂರ್ಯನು. ಆದ್ದರಿಂದ ಸೂರ್ಯನನ್ನು ಕೆಲವರು ಆದಿ ಗುರು ಎನ್ನುತ್ತಿದ್ದಾರೆ. ವಾಸ್ತವಕ್ಕೆ ಆದಿ ಗುರು ದೈವವೇ ಆದರೂ, ಅದು ಯಾರಿಗೂ ತಿಳಿಯದ ರಹಸ್ಯ ಆಗುವುದರಿಂದ, ಆದಿ ಗುರುವಾಗಿ ಸೂರ್ಯನನ್ನೇ ಹೇಳಬಹುದು. ನಮಗೆ ಆದಿಯಲ್ಲಿನ ದೈವ ರಹಸ್ಯ ಸ್ವಲ್ಪ ತಿಳಿದಿದೆ ಆದ್ದರಿಂದ ಸೂರ್ಯನನ್ನು ಆದಿ ಗುರು ಎನ್ನುವುದಲ್ಲದೆ, ಅದೇ ಸೂರ್ಯನನ್ನು ಆದಿ ಶಿಷ್ಯನೆಂದು ಕೂಡ ಹೇಳುತ್ತಿದ್ದೇವೆ. ಹಾಗೆ ಒಬ್ಬ ವ್ಯಕ್ತಿಯನ್ನು ಆದಿಗುರುವಾಗಿ ಮತ್ತು ಆದಿ ಶಿಷ್ಯನಾಗಿ ಹೇಳುವುದರಿಂದ, ಹಾಗೆ ಏಕೆ ಹೇಳುತ್ತಿದ್ದಾರೆಂದು ಯಾರಿಗಾದರು ಪ್ರಶ್ನೆಬರಬಹುದು. ಪ್ರಶ್ನೆಬರುವುದರಿಂದ ಅವರು ಉತ್ತರಕ್ಕೋಸ್ಕರ ಹುಡುಕುವುದಕ್ಕೆ ಅವಕಾಶ ಇದೆ. ಹಾಗೆ ಅನ್ವೇಷಣೆ ಮಾಡುವವರಿಗೆ ಎಂದಿಗಾದರೂ ಉತ್ತರ ಸಿಗುತ್ತದೆ. ಆಗ ಅವರಿಗೂ ಕೂಡ ಆದಿಯಲ್ಲಿ ಧರ್ಮಗಳು ಹೇಗೆ ತಿಳಿಯಲ್ಪಟ್ಟಿವೆಯೊ ತಿಳಿದುಹೋಗುತ್ತದೆ.

ದೇವರ ಅಂಶ ಕಾಣಿಸುವ ಗುರುವಾಗಿ ಶರೀರದಿಂದ ಬಂದರೂ, ಗುರುವಾಗಿ ಆತನನ್ನು ಯಾರೂ ಗುರುತು ಹಿಡಿಯಲಾರರು. ಆದ್ದರಿಂದ ಗುರುವಿಗೆ ಶಿಷ್ಯರಿರುವುದಿಲ್ಲವೆಂದು ಹೇಳಿದ್ದೇವೆ. ಕೆಲವರು ತಮಗೆ ಗುರು ಬೇಕೆಂದು ಅನ್ವೇಷಣೆಮಾಡಿದರೂ ಗುರು ಅವರಿಗೆ ಸಿಗುವುದಿಲ್ಲ. ಒಂದುವೇಳೆ ಗುರು ದೊರೆತರೂ, ಈತನು ನಮಗೆ ಗುರುವು ಅಲ್ಲವೆಂದು ಶಿಷ್ಯರು ನಿರ್ಣಯಿಸಿ ಹೇಳುತ್ತಾರೆ. ಆಗ ಅವರಿಗೆ ಗುರು ದೊರೆತು ಪ್ರಯೋಜನವಿಲ್ಲ. ಅವರ ಲೆಕ್ಕದಲ್ಲಿ

ಅವರಿಗೆ ಗುರು ದೊರೆಯದಂತೆ. ಕಾಣಿಸುವ ಶರೀರದಿಂದ ಪ್ರತ್ಯೇಕವಾಗಿ ಜನ್ಮಿಸಿ ಬರದಿದ್ದರೂ ಎಲ್ಲರ ಶರೀರದಲ್ಲಿ ವ್ಯಾಪಿಸಿರುವ ಪರಮಾತ್ಮ, ಅದೇ ಶರೀರದಲ್ಲಿನ ಜೀವಿಗೆ ಜ್ಞಾನವನ್ನು ತಿಳಿಸುವುದರಿಂದ, ಒಂದೇ ಶರೀರದಲ್ಲಿಯೇ ಹೊರಗಿನ ಪ್ರಜೆಗಳಿಗೆ ಕಾಣಿಸದಂತೆ ಗುರು ಶಿಷ್ಯರಿದ್ದಾರೆಂದು ಹೇಳಿಕೊಂಡಿದ್ದೇವೆ. ಅಷ್ಟೇ ಅಲ್ಲದೆ ಸೃಷ್ಟಿ ಕಲ್ಪಕ್ಕೆ ಎಲ್ಲದಕ್ಕೂ ಹಾಗೆ ಒಂದೇಸಲವೇ ನಡೆಯುತ್ತದೆಂದು ಹೇಳುತ್ತಿದ್ದೇವೆ. 1000 ಯುಗಗಳಲ್ಲಿ ದೇವರು ಶರೀರ ಧರಿಸಿ ಮೊದಲು ತಿಳಿಸಿದ ಧರ್ಮಗಳನ್ನೇ ಪುನಃ ತಿಳಿಸುವುದಕ್ಕೆ, ನೂರು ಸಲ ಆದರೂ ಅದಕ್ಕಿಂತ ಹೆಚ್ಚು ಸಲ ಆದರೂ ಬರಬಹುದು. ಆದರೆ ಶರೀರ ಧರಿಸದಂತೆ ಶೀಷ್ಯನಿರುವ ಶರೀರದಲ್ಲಿಯೇ ಒಂದೇ ಒಂದು ಸಲ ತನ್ನ ಜ್ಞಾನವನ್ನು ಬೋಧಿಸುತ್ತಾನೆ. ಇದನ್ನನುಸರಿಸಿ ದೇವರು ಶರೀರವನ್ನು ಧರಿಸದಂತೆ ಒಂದು ಸಲ ಹೇಳಿದರೂ, ಶರೀರವನ್ನು ಧರಿಸಿ ನೂರು ಸಲ ಹೇಳಿದರೂ ಒಂದೇ ಜ್ಞಾನವನ್ನು ಹೇಳುತ್ತಾನೆಂದು, ಅದರಲ್ಲಿ ಎಂತಹ ಬದಲಾವಣೆ ಇರುವುದಿಲ್ಲವೆಂದು ತಿಳಿಯುತ್ತಿದೆ. ನಮಗೆ ತಿಳಿದಮಟ್ಟಿಗೆ ಕೃಷ್ಣನು ಶರೀರವನ್ನು ಧರಿಸಿ ಬಂದಿರುವ ದೈವಶಕ್ತಿ ಎಂದು ಅರ್ಥವಾಗಿದೆ. ಕೃಷ್ಣನು ಅರ್ಜುನನನ್ನು ಅಡ್ಡ ಇಟ್ಟುಕೊಂಡು ಜ್ಞಾನ ಹೇಳಿದ್ದಾನೆಂದು, ನಿಜಕ್ಕೆ ಶಿಷ್ಯನ ಲಕ್ಷಣಗಳು ಅರ್ಜುನನಲ್ಲಿ ಇಲ್ಲವೆಂದು, ಆದ್ದರಿಂದ ಅರ್ಜುನನು ಶಿಷ್ಯನು ಅಲ್ಲವೆಂದು, ಗತದಲ್ಲಿ ಕೂಡ ಹೇಳಿಕೊಂಡಿ ದ್ದೇವೆ. ಆದರೆ ಹೇಳುವವನನ್ನು ಗುರುವಾಗಿ ಕೇಳುವವನನ್ನು ಶೀಷ್ಯನನ್ನಾಗಿ ಲೆಕ್ಕಿಸಬಹುದಲ್ಲವೆ! ಅದರ ಪ್ರಕಾರ ಅರ್ಜುನನು ಶಿಷ್ಯನೇ ಆಗುತ್ತಾನೆ ಅಲ್ಲವೆ! ಎಂದು ಕೆಲವರು ಕೇಳಬಹುದು. ಭಗವದ್ಗೀತೆ ಸಾಂಖ್ಯಾಯೋಗದಲ್ಲಿ ಏಳನೇ ಶ್ಲೋಕದಲ್ಲಿ ನನ್ನನ್ನು ಶಿಷ್ಯನನ್ನಾಗಿ ಲೆಕ್ಕಿಸಿ, ಹೇಗೆ ಮಾಡುವುದು ಧರ್ಮವೊ ತಿಳಿಸೆಂದು ಅರ್ಜುನನು ಕೃಷ್ಣನನ್ನು ಕೇಳಿದ್ದಾನೆ. ಅಲ್ಲಿ ಗಮನಿಸಿದರೆ ಅರ್ಜುನನು ಕೇಳಿರುವುದು ಯುದ್ಧ ಮಾಡಬೇಕಾ? ಬೇಡವಾ? ಎಂಬ ಪ್ರಪಂಚ ವಿಷಯವನ್ನು ಕೇಳಿದ್ದಾನೆ ಹೊರತು ಪರಮಾತ್ಮ ವಿಷಯವನ್ನು ಕೇಳಲಿಲ್ಲ. ಪ್ರಪಂಚ ವಿಷಯದಲ್ಲಿ ಯಾರು ಯಾರಿಗಾದರೂ ಗುರುವಾಗಬಹುದು. ಆದರೆ ಪರಮಾತ್ಮ ವಿಷಯದಲ್ಲಿ ಯಾರು ಯಾರಿಗೂ ಗುರುವಾಗುವುದಿಲ್ಲ. ಯುದ್ಧರಂಗದಲ್ಲಿ ಆ ಸಮಯಕ್ಕೆ

ಏನು ಮಾಡಬೇಕೊ ತಿಳಿಯದ ಸ್ಥಿತಿಯಲ್ಲಿದ್ದು, ಕೃಷ್ಣನನ್ನು ಗುರುವಾಗಿ ಮುಗಿದು ತನ್ನನ್ನು ಶಿಷ್ಯನನ್ನಾಗಿ ಲೆಕ್ಕಿಸಿಕೊಂಡು ಕೇಳಿದರೂ, ಕೇಳಿದ ಸಮಸ್ಯೆ ಆಧ್ಯಾತ್ಮಿಕವಲ್ಲ, ಆದಕಾರಣ ಅರ್ಜುನನನ್ನು ಶಿಷ್ಯನನ್ನಾಗಿ ಲೆಕ್ಕಿಸಬಾರದು. ನಂತರ ಯುದ್ಧಾ ನಂತರವೂ ಅರ್ಜುನನು ಕೃಷ್ಣನನ್ನು ತನಗೆ ಆಧ್ಯಾತ್ಮಿಕ ಗುರುವಾಗಿ ಗುರುತಿಸಿದಂತೆ ಎಲ್ಲಿಯೂ ಹೇಳಿಕೊಂಡಿಲ್ಲ. ಇಲ್ಲಿ ಕೆಲವರು ಒಂದು ಪ್ರಶ್ನೆ ಕೇಳಬಹುದು. ದೈವಜ್ಞಾನದ ಮೇಲೆ ಧ್ಯಾಸವಿಲ್ಲದ ಅರ್ಜುನನಿಗೆ ಧರ್ಮಗಳನ್ನು ಕೃಷ್ಣನು ಏಕೆ ತಿಳಿಸಬೇಕು? ಧರ್ಮಗಳ ಮೇಲೆ ಆಸಕ್ತಿ ಇರುವವನಿಗೆ ಯಾರಿಗಾದರೂ ಹೇಳಬಹುದು ಅಲ್ಲವೆ! ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಭೂಮಿಮೇಲಕ್ಕೆ ಶರೀರವನ್ನು ಧರಿಸಿ ಗುರುವಾಗಿ ಬಂದ ಗುರುವು (ಕೃಷ್ಣನು) ಎದುರಿನಲ್ಲಿ ಕಾಣಿಸುವ ವ್ಯಕ್ತಿಗೆ (ಅರ್ಜುನನಿಗೆ) ದೈವ ಧರ್ಮಗಳನ್ನು ಹೇಳಿದರೂ ಅವು ನೇರವಾಗಿ ಎದುರಿಗಿರುವ ಶರೀರದಲ್ಲಿನ ಆತ್ಮವನ್ನು ಸೇರುವವು. ಆದ್ದರಿಂದ ಗುರುವಾಗಿ ಬಂದಿರುವಾಗ ತಿಳಿಸಿದ ಜ್ಞಾನ ಕೇಳುವ ಜೀವಿಗೆ ಅಲ್ಲವೆಂದು, ಅದೇ ಶರೀರದಲ್ಲಿನ ಜೀವಿಯ ಪಕ್ಕದಲ್ಲಿರುವ ಆತ್ಮಗೆಂದು ತಿಳಿಯಬೇಕು. ಇನ್ನೊಂದು ರಹಸ್ಯವೇನೆಂದರೆ! ಶರೀರವನ್ನು ಧರಿಸದಂತೆ ಶರೀರದಲ್ಲಿಯೇ ಪರಮಾತ್ಮ ಅಂಶ ತಿಳಿಸುವ ಜ್ಞಾನ ಅದೇ ಶರೀರದಲ್ಲಿನ ಜೀವಿಗೆ ಸೇರುತ್ತಿದೆ. ಆದ್ದರಿಂದ ಅಲ್ಲಿ ಜೀವಿಯು (ಶಿಷ್ಯನು) ಆಗುತ್ತಿದ್ದಾನೆ. ಕೃಷ್ಣನಾಗಿ ಬಂದು ಹೇಳಿದಾಗ ಅರ್ಜುನನ ಆತ್ಮಕ್ಕೆ ಜ್ಞಾನ ಸೇರುವುದರಿಂದ ಅರ್ಜುನನು ಶಿಷ್ಯನು ಆಗಲಾರದೆಹೋಗಿದ್ದಾನೆ.

ಇಲ್ಲಿಗೆ ಸುಮಾರು ದೇವರ ವಿವರ ಮತ್ತು ಧರ್ಮ ತಿಳಿದುಹೋದಂತೆ. ತಿಳಿದಿರುವ ಪ್ರಕಾರ ದೇವರು ಈ ಸೃಷ್ಟಿ ಎಲ್ಲವೂ ಇಲ್ಲದಿರುವಾಗ ಕೂಡ ಇದ್ದಾನೆ. ಆದರೆ ಆಗ ಹೇಗೆ ಇದ್ದಾನೊ ಯಾವ ಶಾಸ್ತ್ರಗಳು ಆತನನ್ನು ಕುರಿತು ತಿಳಿಸಲಾರವು. ಸೃಷ್ಟಿ ಪೂರ್ವದಲ್ಲಿ ದೇವರನ್ನು ಯಾವ ಪ್ರಮಾಣದಿಂದ ಹೇಳುವುದಕ್ಕೆ ಸಾಧ್ಯವಿಲ್ಲ. ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮ ಯೋಗದಲ್ಲಿ 20ನೇ ಶ್ಲೋಕದಲ್ಲಿ **"ಭಾವೋನ್ಯೋ"** ಎನ್ನುವ ಪದವನ್ನುಪಯೋಗಿಸಿ ಸೃಷ್ಟಿ

ಪೂರ್ವದಲ್ಲಿರುವ ದೇವರನ್ನು ಕುರಿತು ಹೇಳುವುದು ನಡೆದಿದೆ. **"ಭಾವೋನ್ಯೋ"** ಎಂದರೆ ನಾವು ಭಾವಿಸಿಕೊಳ್ಳುವ ಭಾವನೆಗಳಿಗೆ ಅನ್ಯವಾಗಿ ಇದ್ದಾನೆಂದು ತಿಳಿಯುತ್ತಿದೆ. ನಾವು ಯಾವ ವಿಧವಾಗಿ ಯೊಚಿಸಿ ಭಾವಿಸಿದರೂ, ಆ ಭಾವಕ್ಕಿಂತ ಬೇರೆಯಾಗಿ ಇದ್ದಾನೆಂದು ಅರ್ಥ. ವಾಸ್ತವವಾಗಿ ಹೇಳಬೇಕೆಂದರೆ ಯಾವ ಪ್ರಮಾಣಕ್ಕೆ ದೇವರು ಸಿಗದಿರುವವನೆಂದು ಅರ್ಥ. ಸೃಷ್ಟಿ ನಂತರ ಪರಮಾತ್ಮ ಎಂದು, ಪುರುಷೋತ್ತಮನೆಂದು ಶಾಸ್ತ್ರಪ್ರಮಾಣವಾಗಿ ಹೇಳಲಾಗುತ್ತಿದ್ದೇವೆ. ವಿಶ್ವ ಹುಟ್ಟಿದ ನಂತರ ಶಾಸ್ತ್ರ ಹುಟ್ಟಿದೆ. ಆದ್ದರಿಂದ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ದೇವರು ಸರ್ವಾಂತರ್ಯಾಮಿ, ವಿಶ್ವವ್ಯಾಪಿ, ಸರ್ವಧಾರಿ, ಪರಮಾತ್ಮ ಪುರುಷೋತ್ತಮನು ಎಂದು ಹೇಳಬಹುದು. ಇವೇ ಮಾತುಗಳನ್ನು ಸೃಷ್ಟಿ ಪೂರ್ವದಲ್ಲಿ ಯಾರೂ ಇಲ್ಲದಿರುವಾಗ ಸರ್ವಾಂತರ್ಯಾಮಿ ಎನ್ನುವುದಕ್ಕೆ ಸಾಧ್ಯವಿಲ್ಲ. ವಿಶ್ವವೇ ಇಲ್ಲದಿರುವಾಗ ವಿಶ್ವವ್ಯಾಪಿ ಎನ್ನುವುದಕ್ಕೆ ಸಾಧ್ಯವಿಲ್ಲ. ಏನು ಇಲ್ಲದಿರುವಾಗ ಸರ್ವಧಾರಿ ಎನ್ನುವುದಕ್ಕೆ ಆಗುವುದಿಲ್ಲ. ಆತ್ಮವೇ ಇಲ್ಲದಿರುವಾಗ ಪರಮಾತ್ಮ ಎನ್ನುವುದಕ್ಕೆ ಸಾಧ್ಯವಿಲ್ಲ. ಹಾಗೆಯೇ ಕ್ಷರ ಪುರುಷನಾಗಲಿ, ಅಕ್ಷರ ಪುರುಷನಾಗಲಿ ಇಲ್ಲದಿರುವಾಗ ಪುರುಷೋತ್ತಮ ಎನ್ನುವುದಕ್ಕೆ ಅವಕಾಶವೇ ಇಲ್ಲ. ಇದನ್ನೆಲ್ಲವನ್ನೂ ನೋಡಿದರೆ ಸೃಷ್ಟಿ ಇಲ್ಲದಿರುವಾಗ ದೇವರ ಬಗ್ಗೆ ಏನು ಹೇಳಲಾರೆವು. ಸೃಷ್ಟಿ ಇರುವಾಗ ಮಾತ್ರವೇ ದೇವರನ್ನು ಕುರಿತು ಶಾಸ್ತ್ರಪದ್ಧತಿಯಾಗಿ ಹೇಳಬಲ್ಲವು.

ಸೃಷ್ಟಿ ಇಲ್ಲದ ಕಾಲ, ಸೃಷ್ಟಿ ಇರುವ ಕಾಲಗಳು ಎರಡು ಇವೆಯೆಂದು ತಿಳಿದಿದೆ! ಸೃಷ್ಟಿ ಇರುವ ಕಾಲದಲ್ಲಿ ನಾವು ಇದ್ದೇವೆ. ಸೃಷ್ಟಿ ಮೊದಲಾದ ಕಾಲವನ್ನು ಖಚಿತವಾಗಿ ಹೇಳಲಾರೆವು. ಆದರೆ ಸೃಷ್ಟಿ ಮೊದಲಿನಿಂದ ಎಷ್ಟು ಕಾಲವಿರುತ್ತದೊ ಹೇಳಬಲ್ಲೆವು. ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಪ್ರಪಂಚವೊಂದರ ಆಯುಸ್ಸು 108 ಕೋಟಿ ವರ್ಷಗಳೆಂದು ತಿಳಿಯುತ್ತಿದೆ. ಸೃಷ್ಟಿ ಸಾವಿರ ಯುಗಗಳ ಕಾಲವಿರುತ್ತದೆಂದು ಶಾಸ್ತ್ರವೇ ಹೇಳುತ್ತಿದೆ. 1) ಕೃತ ಯುಗ 2) ತ್ರೇತಾ ಯುಗ 3) ದ್ವಾಪರಯುಗ 4) ಕಲಿಯುಗ ಎನ್ನುವ ನಾಲ್ಕು ಯುಗಗಳು 250 ಸಲ

ನಡೆಯಬೇಕೆಂದು ತಿಳಿಯುತ್ತಿದೆ. ಸೃಷ್ಟಿ ಮೊದಲಾಗಿರುವುದು ಕೃತಯುಗದಿಂದ ಎಂದು, ಅಂತ್ಯವಾಗುವುದು ಕಲಿಯುಗದಿಂದವೆಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೆ ಕಲಿಯುಗವೊಂದರ ಪರಿಮಾಣ 4,32,000 ವರ್ಷಗಳೆಂದು, ಅದಕ್ಕಿಂತ ಎರಡರಷ್ಟು 8,64,000 ವರ್ಷಗಳು ದ್ವಾಪರಯುಗವೆಂದು, ಕಲಿಯುಗಕ್ಕೆ ಮೂರರಷ್ಟು 12,96,000 ವರ್ಷಗಳು ತ್ರೇತಾಯುಗವೆಂದು, ಹಾಗೆಯೇ ಕಲಿಯುಗಕ್ಕೆ ನಾಲ್ಕುಹಂತಗಳು, 17,28,000 ವರ್ಷಗಳು ಕೃತಯುಗವೆಂದು ತಿಳಿಯುತ್ತಿದೆ. ನಾಲ್ಕು ಯುಗಗಳು ಕಳೆಯುವುದಕ್ಕೆ 43,20,000 ವರ್ಷಗಳ ಕಾಲ ಹಿಡಿಸುತ್ತಿದೆ.

| | |
|---|---|
| ಕಲಿಯುಗ | 4,32,000 ಸಂ॥ |
| ದ್ವಾಪರಯುಗ | 8,64,000 ಸಂ॥ |
| ತ್ರೇತಾಯುಗ | 12,96,000 ಸಂ॥ |
| ಕೃತಯುಗ | 17,28,000 ಸಂ॥ |
| **ನಾಲ್ಕು ಯುಗಗಳು ಒಟ್ಟು** | **43,20,000 ಸಂ॥** |

ಕಲಿಯುಗ ಪರಿಮಾಣಕ್ಕೆ ಶೇ. ಹತ್ತರಷ್ಟು ಹೆಚ್ಚಾಗಿ ನಾಲ್ಕು ಯುಗಗಳ ಪರಿಮಾಣ ಇದೆಯೆಂದು ತಿಳಿಯುತ್ತಿದೆ.

ನಾಲ್ಕು ಯುಗಗಳು 250 ಸಲ ನಡೆದರೆ ಸಾವಿರಯುಗಗಳಾಗುತ್ತದೆ. ಒಮ್ಮೆ ನಾಲ್ಕು ಯುಗಗಳು ಕಳೆಯುವುದಕ್ಕೆ 43,20,000 ವರ್ಷಗಳ ಕಾಲ ಹಿಡಿಸಿದಾಗ, ನಾಲ್ಕು ಯುಗಗಳು 250 ಸಲ ಕಳೆಯುವುದಕ್ಕೆ 108 ಕೋಟಿ ವರ್ಷಗಳ ಕಾಲ ಹಿಡಿಸುತ್ತದೆ.

**43,20,000 x 250 = 108,00,00,000.**

ಈ ವಿಧವಾಗಿ ಪ್ರಪಂಚವೊಂದರ ಆಯುಷ್ಯನ್ನು 108 ಕೋಟಿ ವರ್ಷಗಳಿಂದ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರವೇ ಹೇಳಬಹುದು. ಪ್ರಪಂಚವೊಂದರ

ಆಯುಷ್ಯನ್ನು ಯಾರೂ ಮರೆತುಹೋಗದಂತೆ ಇರುವುದಕ್ಕೆ ಜಪಮಾಲೆಯಲ್ಲಿ 108 ಮಣಿಗಳನ್ನೇ ಇರಿಸುವುದು ನಡೆದಿದೆ. ಪ್ರಪಂಚ 108 ಕೋಟಿ ವರ್ಷಗಳು ಜೀವಿಗಳಿಂದ ತುಂಬಿ ಜನನ ಮರಣಗಳು ನಡೆಯುತ್ತಿರುತ್ತವೆ. 108 ಕೋಟಿ ವರ್ಷಗಳನ್ನು ಒಂದು ಕಲ್ಪ ಎನ್ನುತ್ತಿದ್ದೇವೆ. ಕಲ್ಪವು ಮುಗಿದುಹೋದ ತಕ್ಷಣ ಪ್ರಳಯ ಬರುತ್ತದೆ. ಕಲ್ಪ ಎಂದರೆ ಸೃಷ್ಟಿಸಲ್ಪಟ್ಟಿರುವುದು ಅಥವಾ ಕಲ್ಪಿಸಲ್ಪಟ್ಟಿರುವುದೆಂದು ಅರ್ಥ. ಪಂಚಭೂತಗಳಿಂದ ಸೃಷ್ಟಿಸಲ್ಪಟ್ಟಿರುವ ಪ್ರಪಂಚವು ಪ್ರಳಯದಲ್ಲಿ ಇಲ್ಲದಂತೆ ಹೋಗುತ್ತದೆ. ಹಾಗೆ ಪ್ರಪಂಚ ಇಲ್ಲದ ಸ್ಥಿತಿಯನ್ನು ದೇವರಿಗೆ ರಾತ್ರಿ ಕಾಲವಾಗಿ, ಪ್ರಪಂಚವಿರುವ ಸ್ಥಿತಿಯನ್ನು ದೇವರಿಗೆ ಹಗಲು ಕಾಲವಾಗಿ ಬ್ರಹ್ಮವಿದ್ಯಾಶಾಸ್ತ್ರದಲ್ಲಿ ದೇವರೇ ಹೇಳಿದ್ದಾನೆ. ದೇವರ ಹಗಲು 108 ಕೋಟಿ ವರ್ಷಗಳಾದಾಗ ದೇವರ ರಾತ್ರಿ ಕೂಡ 108 ಕೋಟಿ ವರ್ಷಗಳೆ ಇರುತ್ತದೆ. ಮನುಷ್ಯನಿಗೆ ಹಗಲು ಹನ್ನೆರಡು ಗಂಟೆಗಳು, ರಾತ್ರಿ ಹನ್ನೆರಡು ಗಂಟೆಗಳ ಕಾಲವಿರುವಂತೆ, ದೇವರಿಗು ಕೂಡ ಹಗಲು 108 ಕೋಟಿ, ರಾತ್ರಿ 108 ಕೋಟಿ ವರ್ಷಗಳಿರುತ್ತವೆ. ಕಾಲಚಕ್ರದಲ್ಲಿ ಮನುಷ್ಯನಿಗೆ ಒಂದು ರಾತ್ರಿ ಹಗಲು ಕಳೆಯುವುದಕ್ಕೆ 24 ಗಂಟೆಗಳು ಹಿಡಿಸಿದಂತೆ ದೇವರಿಗೆ ಒಂದುರಾತ್ರಿ ಒಂದು ಹಗಲು ಕಳೆಯುವುದಕ್ಕೆ 216 ಕೋಟಿ ವರ್ಷಗಳು ಹಿಡಿಸುತ್ತದೆ. ಈ ಲೆಕ್ಕ ಪ್ರಕಾರ ನೋಡಿದರೆ ಮನುಷ್ಯನ ಲೆಕ್ಕದಲ್ಲಿ 25,000 ವರ್ಷಗಳು ಕಳೆದರೆ ದೇವರ ಲೆಕ್ಕದಲ್ಲಿ ಒಂದು ಸೆಕೆಂಡು ಕಳೆದಂತೆ, ಮನುಷ್ಯನ ಲೆಕ್ಕದಲ್ಲಿ 15,00,000 ವರ್ಷಗಳು ಕಳೆದರೆ ದೇವರ ಲೆಕ್ಕದಲ್ಲಿ ಒಂದು ನಿಮಿಷ ಕಳೆದಂತಾಗುತ್ತದೆ. ಮನುಷ್ಯನ ಲೆಕ್ಕದಲ್ಲಿ 9 ಕೋಟಿ ವರ್ಷಗಳು ಕಳೆದರೆ ದೇವರ ಲೆಕ್ಕದಲ್ಲಿ ಒಂದು ಗಂಟೆ ಕಳೆದಂತಾಗುತ್ತದೆಂದು ತಿಳಿಯುತ್ತಿದೆ.

ಸೃಷ್ಟಿ ಆದಿಯಿಂದ ನಾವು ಎಲ್ಲರೂ ಇದ್ದೇವೆ. ಆದರೆ ಈಗಿರುವುದು ಮಾತ್ರ ನಮಗೆ ತಿಳಿಯುತ್ತಿದೆ. ಗತದಲ್ಲಿ ಎಷ್ಟೋ ಸಲ ಜನ್ಮಿಸಿ, ಸ್ವಲ್ಪಕಾಲ ಬದುಕಿ, ಎಷ್ಟೋ ಸಲ ಮರಣಿಸಿದ್ದೇವೆ. ಈ ವಿಧವಾಗಿ ಪ್ರಳಯದವರೆಗೂ ನಾವು ಸಾವುಹುಟ್ಟುಗಳ ಚಕ್ರದಲ್ಲಿ ಸಿಲುಕಿಕೊಂಡು ಪ್ರತಿ ಜೀವನದಲ್ಲಿಯೂ

ಎಷ್ಟೋ ಪಾಪಗಳನ್ನು ಬಾಧೆಗಳರೂಪವಾಗಿ ಅನುಭವಿಸುತ್ತಿದ್ದೇವೆ. ಇಂತಹ ಸಾವುಹುಟ್ಟುಗಳಿಂದ ತಪ್ಪಿಸಿಕೊಳ್ಳಬೇಕೆಂದರೆ, ಪಾಪಫಲಿತಗಳನ್ನು ಹೊಂದದಂತೆ ಇರಬೇಕೆಂದರೆ, ಮನುಷ್ಯನಿಗೆ ಮುಕ್ತಿ ಬರಬೇಕೆಂದರೆ ಜಗತ್ತಿನಲ್ಲಿ ಯಾರಿಗಾದರೂ ಸೃಷ್ಟಿ ಆದಿಯಲ್ಲಿ ದೇವರು ಹೇಳಿದ ಜ್ಞಾನವೇ ಆಧಾರ. ದೇವರು ಹೇಳಿದ ಜ್ಞಾನದಿಂದಲೇ ಮನುಷ್ಯ ಕರ್ಮಬಂಧನಗಳಿಂದ ಹೊರ ಬೀಳುತ್ತಾನೆ, ಮೋಕ್ಷವನ್ನು ಹೊಂದುತ್ತಾನೆ. ಆದರೆ ಸೃಷ್ಟಿ ಆರಂಭದಲ್ಲಿ ದೇವರು ಹೇಳಿದ ಜ್ಞಾನ ಮನುಷ್ಯರಿಗೆ ತಿಳಿಯದಂತೆ ಹೋಗಿದೆ. ಆದ್ದರಿಂದ ದೈವಜ್ಞಾನ ಬೇಕೆಂದುಕೊಂಡ ಮನುಷ್ಯ, ಯಾವುದು ದೈವಜ್ಞಾನವೊ ತಿಳಿಯದೆ ಎಷ್ಟೋ ಜನ ಗುರುಗಳೆನ್ನುವವರು ಹೇಳಿರುವುದೆ ಜ್ಞಾನವೆಂದು ನಂಬಿ ಅದನ್ನೇ ಅನುಸರಿಸುತ್ತಿದ್ದಾನೆ. ಸೃಷ್ಟಿ ಆದಿಯಲ್ಲಿ ದೇವರು ಹೇಳಿದ ಜ್ಞಾನ ತಿಳಿಯದಂತೆ ಹೋಗಿ, ಅದರ ಸ್ಥಾನದಲ್ಲಿ ಅನೇಕ ಜನರು ಹೇಳಿದ, ಅನೇಕ ಜ್ಞಾನಗಳು ಬಂದು ಸೇರಿವೆ. ಉದಾಹರಣೆಗೆ ಭೂಮಿಮೇಲೆ ಹತ್ತು ವಿಧಗಳ ಗುರುಗಳು ಹತ್ತು ವಿಧಗಳಾಗಿ ತಮ್ಮ ತಮ್ಮ ಜ್ಞಾನವನ್ನು ಹೇಳಿದಾಗ, ಮನುಷ್ಯರು ಕೂಡ ಹತ್ತು ವಿಧಗಳಾಗಿ ಸೀಳಿಹೋಗಿ, ಒಬ್ಬೊಬ್ಬ ಗುರುವನ್ನು ಆಶ್ರಯಿಸಿದವರೆಲ್ಲರೂ ಒಂದೊಂದು ವಿಧದ ಜ್ಞಾನವನ್ನು ತಿಳಿದುಕೊಂಡು, ಯಾರಿಗವರು ನಾವೇ ದೊಡ್ಡ ಜ್ಞಾನಿಗಳೆಂದುಕೊಳ್ಳುತ್ತಿದ್ದಾರೆ. ವಿಶೇಷ ಏನೆಂದರೆ ಹತ್ತು ವಿಧಗಳ ಗುರುಗಳ ಜ್ಞಾನಗಳಲ್ಲಿ ಒಬ್ಬರದು ಕೂಡ ದೇವರು ಹೇಳಿದ ಜ್ಞಾನ ಅಲ್ಲದಂತೆ ಹೋಗಿದೆ. ಕಾಲಕ್ರಮೇಣ ದೇವರು ಹೇಳಿದ ಧರ್ಮಗಳು ಹೋಗಿ, ಮನುಷ್ಯರು ದೈವಜ್ಞಾನವೆಂಬ ಹೆಸರಿನಿಂದ ಸೃಷ್ಟಿಸಿದ ಜ್ಞಾನ ಬಂದು, ಯಾವುದು ಮನುಷ್ಯರು ಹೇಳಿದ ಧರ್ಮವೊ, ಯಾವುದು ದೇವರು ಹೇಳಿದ ಧರ್ಮವೊ ತಿಳಿಯದಂತೆ ಹೋಗಿದೆ. ಅಂತಹದರಲ್ಲಿ ದೇವರು ಹೇಳಿದ ಧರ್ಮಗಳಿಗೆ ಹಾನಿ ಏರ್ಪಟ್ಟು ದೇವರ ಧರ್ಮಗಳ ಸ್ಥಾನದಲ್ಲಿ ಮನುಷ್ಯರ ಅಧರ್ಮಗಳು ಸ್ಥಳ ಮಾಡಿಕೊಂಡಿವೆ. ದೇವರ ಧರ್ಮಗಳು ದೇವರಿಗೇ ತಿಳಿದಿವೆ, ಆದ್ದರಿಂದ ಪುನಃ ಅವುಗಳನ್ನು ಹೇಳಬೇಕಾಗಿರುವವನು ದೇವರೇ ಎಂದು ಹಿಂದಿನ ಪುಟಗಳಲ್ಲಿ ಬರೆದು ಕೊಂಡಿದ್ದೇವೆ. ಮನೆಗುಟ್ಟು ಪೆರುಮಾಳ್ಳಕ್ಕೆ ಗೊತ್ತು ಎನ್ನುವಂತೆ ಶರೀರದ ಗುಟ್ಟು

ದೇವರಿಗೆ ಗೊತ್ತು. ಮೈ ಅಥವಾ ಶರೀರ ಎಂದರೆ ಸಜೀವ ಶರೀರವೆಂದು ಅರ್ಥ. ಜನ್ಮಿಸಿದ ಶರೀರದಿಂದ ಇರುವವನು ಶರೀರ ಎನ್ನುವ ಮನೆಯಿಂದ ಹೊರ ಬೀಳುವುದಕ್ಕೆ ಒಂದು ವಿಧಾನ ಇದೆ. ಆ ವಿಧಾನವೇ ಜ್ಞಾನವೆನ್ನುವ ಗುಟ್ಟು ಅಥವಾ ರಹಸ್ಯ. ಜ್ಞಾನವೆನ್ನುವ ಗುಟ್ಟು ಶರೀರವೆನ್ನುವ ಮನೆಯನ್ನು ತಯಾರು ಮಾಡಿದವನಿಗೇ ಗೊತ್ತು. ಶರೀರವೆನ್ನುವ ಮನೆಯನ್ನು ತಯಾರು ಮಾಡಿದವನು ದೇವರೇ, ಆದ್ದರಿಂದ ಮನೆ ಗುಟ್ಟು ಪೆರುಮಾಳ್ಳಕ್ಕೆ ಗೊತ್ತು, ಶರೀರದ ಗುಟ್ಟು ದೇವರಿಗೆ ಗೊತ್ತು ಎಂದಿದ್ದಾರೆ. ಮನೆ ಗುಟ್ಟು ಎಂದರೂ, ಶರೀರದ ಗುಟ್ಟು ಎಂದರೂ ಎರಡೂ ಒಂದೇ. ಹಾಗೆಯೇ ಪೆರುಮಾಳ್ಳು ಎಂದರೂ, ದೇವರು ಎಂದರೂ ಎರಡೂ ಒಂದೇ ಎಂದು ಅರ್ಥ. ಗುಟ್ಟು ಎಂದರೆ ರಹಸ್ಯವಾದ ಜ್ಞಾನ ಎಂದು ಗುರುತಿಟ್ಟುಕೊಳ್ಳಬೇಕು.

ಹೇಗೆ ಹೇಳಿಕೊಂಡರೂ ಮನುಷ್ಯ ಕರ್ಮಗಳಿಂದ, ಜನ್ಮಗಳಿಂದ ಮುಕ್ತಿ ಹೊಂದುವುದಕ್ಕೆ ದೇವರ ಜ್ಞಾನ ಒಂದೇ ಅಗತ್ಯ. ಆ ಒಂದು ಜ್ಞಾನವನ್ನು ತಿಳಿಸುವವನು ಒಬ್ಬ ದೇವರು ಮಾತ್ರವೇ. ದೇವರಿಗೆ ಹೊರತು ಯಾರಿಗೂ ಕರ್ಮಗಳನ್ನು ಜಯಿಸುವ ಜ್ಞಾನ ತಿಳಿದಿಲ್ಲ, ಯಾವ ಮನುಷ್ಯನಿಗು ದೈವ ಧರ್ಮಗಳು ತಿಳಿದಿಲ್ಲ. ಆದ್ದರಿಂದ ಮನುಷ್ಯರು ಹೇಳಿರುವವು ದೇವರ ಧರ್ಮಗಳು ಅಲ್ಲ. ಈಗ ಒಂದು ದೊಡ್ಡ ಸಿಕ್ಕು ಬಂದು ಬಿದ್ದಿದೆ. ಅದು ಏನೆಂದರೆ! ದೇವರು, ಕಾಣಿಸುವುದಿಲ್ಲ ಮತ್ತು ಮಾತನಾಡುವ ಕೆಲಸವನ್ನು ಸಹ ಮಾಡುವುದಿಲ್ಲ. ಒಂದುವೇಳೆ ಸಂಜ್ಞೆಯಿಂದಾದರೂ ತಿಳಿಸುತ್ತಾನೆಯೇ ಎಂದು ನೋಡಿದರೆ ಅದು ಸಹ ಕೆಲಸವೇ ಆಗುತ್ತದೆ! ನಾನು ಯಾವ ಕೆಲಸವನ್ನು ಮಾಡದ ಕ್ರಿಯಾರಹಿತನೆಂದು ಎನ್ನುತ್ತಾನೆ. ಸಂಜ್ಞೆಗಳು ಮಾಡುವುದಕ್ಕಾದರೂ ಆತನು ಕಾಣಿಸಬೇಕು! ಇತ್ತ ಕಾಣಿಸುವುದಿಲ್ಲ, ಅತ್ತ ಕೇಳಿಸುವುದಿಲ್ಲ ಅಂತಹದರಲ್ಲಿ ತನ್ನ ಧರ್ಮಗಳನ್ನು ದೇವರು ಪುನಃ ತಿಳಿಸುತ್ತಾನೆನ್ನುವುದು ಒಪ್ಪಿಕೊಳ್ಳಬೇಕಾದ ಮಾತೇನಾ ಎಂದು ನಮಗೆ ಪ್ರಶ್ನೆ ಬಾರದೆ ಇರುವುದಿಲ್ಲ. ಕಾಣಿಸದವನು, ಕೇಳಿಸದವನು ತನ್ನ ಜ್ಞಾನವನ್ನು ಹೇಗೆ ತಿಳಿಸುತ್ತಾನೆಂದು ಯಾರಾದರೂ

ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೆ! ನಮಗೆ ಕಿವಿಯ ಮೂಲಕ ಶಬ್ದ ಕೇಳಿಸುತ್ತದೆ. ಜ್ಞಾನ ಶಬ್ದದ ಮೂಲಕವೇ ಮನುಷ್ಯನಿಗೆ ತಿಳಿಯಬೇಕು. ಮನುಷ್ಯ ತನಗೆ ಅರ್ಥವಾಗುವ ಶಬ್ದವನ್ನು ಕೇಳಿದಾಗಲೇ ಆ ಶಬ್ದದಲ್ಲಿನ ಸಾರಾಂಶವನ್ನು ಗ್ರಹಿಸಬಹುದು. ಆದ್ದರಿಂದ ತಾನು ಮಾತನಾಡುವ ಭಾಷೆಯಲ್ಲಿಯೇ ಮನುಷ್ಯ ಜ್ಞಾನವನ್ನು ಕೇಳಬೇಕು. ಅಂತಹದರಲ್ಲಿ ದೇವರು ಮನುಷ್ಯನಿಗೆ ಅರ್ಥವಾಗುವ ಭಾಷೆಯಲ್ಲಿಯೇ ಹೇಳಬೇಕು. ಮನುಷ್ಯನಿಗೆ ಅರ್ಥವಾಗುವ ಭಾಷೆಯಲ್ಲಿಯೇ ಹೇಳಬೇಕೆಂದರೆ ಎದುರುಗಡೆ ಇನ್ನೊಬ್ಬರಿದ್ದು ಹೇಳಬೇಕು. ಎದುರುಗಡೆ ಇರುವವನು ತನ್ನಂತೆ ಇರುವಾಗಲೇ, ತನ್ನಂತೆ ಮಾತನಾಡಿದಾಗಲೇ ಆತನನ್ನು ನೋಡಿ ಗೌರವಿಸಿ, ಆತನ ಮೇಲೆ ಇರುವ ಗೌರವದಿಂದ, ಆತನು ಹೇಳುವ ಮಾತುಗಳನ್ನು ಮನುಷ್ಯ ಕೇಳುತ್ತಾನೆ. ಅಂದರೆ ಕೇಳುವ ಮನುಷ್ಯನಿಗೆ ಹೇಳುವವನು ಚಿರಪರಿಚಿತನಾಗಿರಬೇಕು ಮತ್ತು ಆತನು ತನ್ನೊಂದಿಗೆ ಮಾತನಾಡುವವನಾಗಿರಬೇಕು. ಇದೆಲ್ಲವನ್ನು ನೋಡಿದರೆ ಜ್ಞಾನ ತಿಳಿಯದ ಮನುಷ್ಯನಿಗೆ ಜ್ಞಾನ ತಿಳಿದ ಮತ್ತೊಬ್ಬ ಮನುಷ್ಯ, ಜ್ಞಾನವನ್ನು ತಿಳಿಸುತ್ತಿದ್ದಾನೆಂದಲ್ಲವೆ ಅರ್ಥ. ದೇವರು ತಿಳಿಸುವುದೇ ಅಸಲಾದ ಜ್ಞಾನವೆಂದು, ಯಾವ ಮನುಷ್ಯ ಅಸಲಾದ ಜ್ಞಾನವನ್ನು ತಿಳಿಸಲಾರನೆಂದು ಇಲ್ಲಿಯವರೆಗೂ ನೀವೇ ಹೇಳಿದ್ದೀರಾ. ಈಗಲೇನೊ ಒಬ್ಬ ಮನುಷ್ಯನಿಗೆ ಜ್ಞಾನ ತಿಳಿಯಬೇಕೆಂದರೆ ಆತನಂತಿರುವ ಮನುಷ್ಯನೇ ಜ್ಞಾನವನ್ನು ಹೇಳಬೇಕು. ಹಾಗೆ ಹೇಳಿದಾಗಲೇ ಕೇಳುವವನಿಗೆ ಜ್ಞಾನ ತಿಳಿಯುತ್ತದೆಂದು ಹೇಳಿದ್ದೀರ. ದೇವರು ಕಾಣಿಸುವುದಿಲ್ಲ, ಕೇಳಿಸುವುದಿಲ್ಲ. ಅಂತಹದರಲ್ಲಿ ಕಾಣಿಸಿ ಹೇಳುವವನು ದೇವರು ಅಲ್ಲವೆಂದು ನೀವೇ ಹೇಳುತ್ತೀರಾ. ಈ ಪದ್ಧತಿಯಲ್ಲಿ ದೇವರು ತನ್ನ ಜ್ಞಾನವನ್ನು ಮನುಷ್ಯರಿಗೆ ಹೇಗೆ ತಿಳಿಸುತ್ತಾನೆಂದು ನನ್ನನ್ನು ಕೇಳಿದರೆ! ದೇವರು ಮನುಷ್ಯನಿಗೆ ಎಲ್ಲಾ ವಿಧಗಳಲ್ಲಿ ಅರ್ಥವಾಗುವಂತೆ ನಮಗೆ ಕಾಣಿಸಿ ಕೇಳಿಸುವಂತೆ ತಿಳಿಸುವುದಕ್ಕೆ ತಕ್ಕಾದ ಏರ್ಪಾಟುಗಳು ಮಾಡಿಟ್ಟಿದ್ದಾನೆಂದು ಹೇಳಬಹುದು. ದೇವರು ಕಾಣಿಸುವುದಿಲ್ಲ, ಕೇಳಿಸುವುದಿಲ್ಲ ಎನ್ನುವ ಮಾತು ನಿಜವೇ. ಆದ್ದರಿಂದ ದೇವರು ಸ್ವತಃವಾಗಿ ಹೇಳದಂತೆ ಕಾಣಿಸುವವನೊಂದಿಗೆ ಮತ್ತು ಕೇಳಿಸುವವನೊಂದಿಗೆ

ಹೇಳಿಸುತ್ತಾನೆ. ಹಾಗೆಂದು ಹೇಳುವವನು ಮನುಷ್ಯನಲ್ಲ. ದೇವರ ಜ್ಞಾನ ದೇವರಿಗೆ ತಿಳಿಯುತ್ತದೆ. ಯಾವ ಮನುಷ್ಯ ಹೇಳಲಾರನು ಎಂದಿದ್ದೇವೆ ಅಲ್ಲವೆ! ಹಾಗೆಂದು ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿಸುವವನು ಇತ್ತ ದೇವರೂ ಅಲ್ಲ, ಅತ್ತ ಮನುಷ್ಯನೂ ಅಲ್ಲ. ಆದರೆ ದೇವರ ಧರ್ಮಗಳನ್ನು ಪುನಃ ತಿಳಿಸುವವನನ್ನು ಏನನ್ನಬೇಕು? ಎಂದು ಪ್ರಶ್ನಿಸಬಹುದು. ಹೇಳಲ್ಪಡುವವು ದೈವ ಧರ್ಮಗಳಾದಾಗ, ಹೇಳುವವನು ಕಾಣಿಸಿದರೂ, ಅವನು ಮನುಷ್ಯನಲ್ಲ. ಇನ್ನೊಂದು ವಿಧವಾಗಿ ನೋಡಿದರೆ ಹೇಳುಲ್ಪಡುವವು ದೈವಧರ್ಮಗಳಾದಾಗ ಕಾಣಿಸುವವನು ದೇವರೂ ಅಲ್ಲ, ರೂಪ, ನಾಮ, ಕ್ರಿಯೆಗಳು ಇಲ್ಲದವನು ದೇವರು ಎನ್ನುವ ಸೂತ್ರದ ಪ್ರಕಾರ ಕಾಣಿಸಿ ಹೇಳುವವನು ದೇವರು ಅಲ್ಲ. ದೇವರ ಜ್ಞಾನವನ್ನು ದೇವರು ಹೊರತು ಮನುಷ್ಯ ತಿಳಿಸಲಾರನೆನ್ನುವ ಸೂತ್ರದ ಪ್ರಕಾರ ಹೇಳುವವನು ಮನುಷ್ಯನಲ್ಲ. ಇತ್ತ ಮನುಷ್ಯನಲ್ಲದೆ, ಅತ್ತ ದೇವರಲ್ಲದಂತೆ ಇರುವವನು ಮಾತ್ರವೇ ತಿಳಿಸಬೇಕು. ವಿವರವಾಗಿ ಹೇಳಿದರೆ ದೇವರಲ್ಲದೆ ಮನುಷ್ಯನ ಲಕ್ಷಣಗಳಿದ್ದು, ಮನುಷ್ಯನಲ್ಲದೆ ದೇವರ ಲಕ್ಷಣಗಳಿರುವವನು ಮಾತ್ರವೇ ತಿಳಿಸುತ್ತಾನೆ. ಇತ್ತ ದೇವರು, ಅತ್ತ ಮನುಷ್ಯ ಅಲ್ಲದವನು ಒಬ್ಬನೇ ಒಬ್ಬ ಇದ್ದಾನೆ ಆತನೇ ಭಗವಂತನು. ದೇವರು ಭಗವಂತನಾ? ಎಂದರೆ ಅಲ್ಲ, ಭಗವಂತನು ದೇವರಾ? ಎಂದರೆ ಹಾಗೂ ಸಹ ಅಲ್ಲ. ಇನ್ನೊಂದು ವಿಧವಾಗಿ ಮನುಷ್ಯ ಭಗವಂತನಾ? ಎಂದರೆ ಅಲ್ಲ. ಭಗವಂತನು ಮನುಷ್ಯನಾ? ಎಂದರೆ ಹಾಗೂ ಕೂಡ ಅಲ್ಲ. ಇದೇನು ಗೊಂದಲ ವ್ಯವಹಾರ ಎಂದು ಕೆಲವರಂದುಕೊಳ್ಳಬಹುದು. ಹೇಳುವವನು ಯಾರೊ ತಿಳಿಯದೆ ಹೋದರೆ ಹೇಳುವುದು ಅಸಲಾದ ಜ್ಞಾನವೆಂದು ಹೇಗೆ ತಿಳಿಯುತ್ತದೆ? ಎಂದು ಸಹ ಕೆಲಸವರು ಕೇಳಬಹುದು.

ಇಲ್ಲಿ ಒಂದು ಮುಖ್ಯಸೂತ್ರ ಇದೆ. ಅದೇನೆಂದರೆ! ಹೇಳುವವನನ್ನನು ಸರಿಸಿ ಕೇಳುವ ಜ್ಞಾನ ಇಂತಹ ಜ್ಞಾನವೆಂದು ಹೇಳಲಾರೆವು. ಆದರೆ ಕೇಳಿದ ಜ್ಞಾನವನ್ನು ಅನುಸರಿಸಿ ಹೇಳಿದವನು ಇಂತಹವನೆಂದು ಹೇಳಬಹುದು. ಆದ್ದರಿಂದ ಹೇಳಿದವನು ಭಗವಂತನಾ, ಅಥವಾ ಸಾಧಾರಣ ಮನುಷ್ಯನಾ

ಎಂದು ನೋಡಬೇಕಾದ ಕೆಲಸವಿಲ್ಲ. ನೋಡಬೇಕಾಗಿರುವುದೆಲ್ಲಾ ನಾವು ಕೇಳಿರುವುದು ಅಸಲಾದ ದೈವಜ್ಞಾನವಾ? ಅಲ್ಲವಾ? ಎಂದು ನೋಡಬೇಕು. ಇಲ್ಲಿ ಕೇಳಬೇಕಾಗಿರುವುದು ಏನೆಂದರೆ! ನಮಗೆ ಜ್ಞಾನವೇನೊ ತಿಳಿಯದಿರುವಾಗ, ಎಷ್ಟೋಜನ ಜ್ಞಾನವನ್ನು ಹೇಳುತ್ತಿರುವಾಗ, ಇದೇ ನಿಜವಾದ ದೈವಜ್ಞಾನವೆಂದು ಹೇಗೆ ತಿಳಿಯುತ್ತದೆ? ನಾವು ಜ್ಞಾನವನ್ನು ಇಂತಹದೆಂದು ಗುರುತಿಸದಿರುವಾಗ, ಹೇಳುವವನು ಮನುಷ್ಯನಾ? ಭಗವಂತನಾ? ಎಂದು ಹೇಗೆ ತಿಳಿಯುತ್ತದೆ? ಎಂದು ಕೆಲವರಂದುಕೊಳ್ಳಬಹುದು. ಅದಕ್ಕೆ ಸಮಾಧಾನವಾಗಿ ಒಂದು ಚಿಕ್ಕ ಉದಾಹರಣೆಯನ್ನು ಹೇಳಿಕೊಳ್ಳೋಣ. ಸಂತೆಯಲ್ಲಿ ಇಪ್ಪತ್ತುಜನ ವ್ಯಾಪಾರಸ್ತರು ಅಕ್ಕಿಯನ್ನು ಮಾರುವವರಿದ್ದಾರೆ. ಅವರು ಒಬ್ಬೊಬ್ಬರು ಒಂದೊಂದು ವಿಧದ ಅಕ್ಕಿಯನ್ನು ಮಾರುತ್ತಿದ್ದಾರೆಂದುಕೊಳ್ಳಿ. ಮಾರ್ಕೆಟ್‌ನಲ್ಲಿ ಯಾರಾದರೆ ಎಲ್ಲದಕ್ಕಿಂತ ಒಳ್ಳೆಯ ನಾಣ್ಯತೆ ಇರುವ ಅಕ್ಕಿಯನ್ನು ಮಾರುತ್ತಾನೊ, ಅವನು ಒಳ್ಳೆಯ ವ್ಯಾಪಾರಸ್ತನು ಎಂದು ತಿಳಿದಾಗ, ಒಳ್ಳೆಯ ವ್ಯಾಪಾರಸ್ತನು ಯಾರೆಂದು ತಿಳಿಯಬೇಕೆಂದರೆ, ಮೊದಲು ಒಳ್ಳೆಯ ಅಕ್ಕಿಯನ್ನು ಯಾರು ಮಾರುತ್ತಿದ್ದಾರೊ ನೋಡಬೇಕು. ಅಕ್ಕಿಯನ್ನು ನೋಡುವುದಕ್ಕೆ ಎಲ್ಲಾ ಚೆನ್ನಾಗಿಯೇ ಕಾಣಿಸುತ್ತಿವೆ. ಅನೇಕ ವಿಧಗಳಲ್ಲಿ ಯಾವ ಅಕ್ಕಿ ಒಳ್ಳೆಯವೊ ಕೊಂಡುಕೊಳ್ಳುವವನಿಗೆ ಯಾವಮಾತ್ರ ತಿಳಿದಿಲ್ಲ. ಅಂತಹದರಲ್ಲಿ ಒಂದೊಂದು ದಿನ ಒಂದೊಂದು ವ್ಯಾಪಾರಸ್ತನ ಹತ್ತಿರ, ಆ ದಿನಕ್ಕೆ ತಕ್ಕಷ್ಟು ಅಕ್ಕಿಯನ್ನು ಕೊಂಡು ಅನ್ನಮಾಡಿ ತಿಂದು ನೋಡಬೇಕು. ಹಾಗೆ ಇಪ್ಪತ್ತು ದಿನಗಳು ಇಪ್ಪತ್ತು ವಿಧಗಳ ಅಕ್ಕಿಯನ್ನು ತಿಂದು ರುಚಿ ನೋಡಿದ ನಂತರ ಅಷ್ಟು ವಿಧಗಳಲ್ಲಿ ಅನ್ನ ಮೃದುವಾಗಿ, ಒಂದು ಅಗಳಿಗು ಮತ್ತೊಂದು ಅಗಳಿಗೂ ಅಂಟಿಕೊಳ್ಳದಂತೆ ಬಿಡಿಯಾಗಿ, ತೇವಯಿಲ್ಲದಂತೆ ಉದುರಾಗಿ, ರುಚಿಯಾಗಿ, 24 ಗಂಟೆಗಳಿದ್ದರೂ ಕೆಟ್ಟುಹೋಗ ದಂತೆ, ಬೇಗನೆ ಬೆಂದು ಹೋಗುವವಾಗಿ, ಅಡಿಗೆ ಮಾಡಿದ ನಂತರ ಬಣ್ಣಬದಲಾಗದಂತೆ ಇರುವವು, ತಿಂದ ನಂತರ ಸುಲಭವಾಗಿ ಜೀರ್ಣವಾಗುವವು ಯಾವವಾದರೆ ಇವೆಯೋ, ಆ ಅಕ್ಕಿಯನ್ನು ಎಲ್ಲದಕ್ಕಿಂತ ಒಳ್ಳೆಯ ನಾಣ್ಯತೆ

ಇರುವ ಅಕ್ಕಿಯೆಂದು ಹೇಳಬಹುದು. ಒಳ್ಳೆಯ ನಾಣ್ಯತೆ ಇರುವ ಅಕ್ಕಿಯನ್ನು ಮಾರುವವನನ್ನು ಒಳ್ಳೆಯ ವ್ಯಾಪಾರಸ್ತನನ್ನಾಗಿ ಗುರುತಿಸಬಹುದು.

ಸಂತೆಯಲ್ಲಿ ಅಕ್ಕಿಯನ್ನು ಮಾರುವ ವ್ಯಾಪಾರಸ್ತರಂತೆ ಭೂಮಿಮೇಲೆ ಬಹಳಜನ ಜ್ಞಾನವನ್ನು ಹೇಳುವ ಗುರುಗಳು ಇದ್ದಾರೆ. ಒಳ್ಳೆಯ ನಾಣ್ಯತೆ ಇರುವ ಅಕ್ಕಿಯನ್ನು ಮಾರುವವನನ್ನು ಒಳ್ಳೆಯ ವ್ಯಾಪಾರಸ್ತನೆಂದು ಗುರುತಿಸಬಹುದೆಂದು ಹೇಳಿದಂತೆ, ಒಳ್ಳೆಯ ಜ್ಞಾನವನ್ನು ಹೇಳುವ ಗುರುವನ್ನು ಅಸಲಾದ ಗುರುವಾಗಿ ಗುರುತಿಸಬಹುದು. ಅಕ್ಕಿವೊಂದರ ನಾಣ್ಯತೆ ನಮಗೆ ತಿಳಿಯದಂತೆ ಯಾವುದು ಅಸಲಾದ ಜ್ಞಾನವೊ ಕೂಡ ನಮಗೆ ತಿಳಿದಿಲ್ಲ. ಎಲ್ಲಾ ಅಂಗಡಿಗಳಲ್ಲಿನ ಅಕ್ಕಿಯನ್ನು ಬಳಸಿನೋಡಿ, ಯಾವು ಒಳ್ಳೆಯ ಅಕ್ಕಿಯೊ ಗ್ರಹಿಸಿದಂತೆ, ಗುರುಗಳೆಲ್ಲರೂ ಹೇಳುವ ಜ್ಞಾನವನ್ನು ಕೇಳಿ, ಯಾವುದು ಒಳ್ಳೆಯ ಜ್ಞಾನವೊ ತಿಳಿದುಕೊಳ್ಳಬಹುದು. ಒಳ್ಳೆಯ ಅಕ್ಕಿಯನ್ನು ಮಾರಿದವನನ್ನೇ ನಿಜಾಯಿತಿ ಇರುವ ಒಳ್ಳೆಯ ವ್ಯಾಪಾರಿಯಾಗಿ ಗುರುತಿಸಿದಂತೆ, ಒಳ್ಳೆಯ ಧರ್ಮಗಳ ಜ್ಞಾನವನ್ನು ಹೇಳಿದ ಗುರುವನ್ನೇ ನಿಜವಾದ ಗುರುವಾಗಿ ಗುರುತಿಸಬಹುದು. ಎಲ್ಲಾ ವಿಧಗಳ ಅಕ್ಕಿವೊಂದರ ಅನ್ನವನ್ನು ನೋಡಿದಾಗಲೇ ಯಾವು ಒಳ್ಳೆಯ ಅಕ್ಕಿಯೋ ತಿಳಿಯುವುದು. ಹಾಗೆಯೇ ಎಲ್ಲಾರ ಜ್ಞಾನಗಳನ್ನು ನೋಡಿದಾಗ ಯಾವುದು ಎಲ್ಲದಕ್ಕಿಂತ ಮೀರಿದ ಜ್ಞಾನವೊ ತಿಳಿಯುವುದು. ಅಕ್ಕಿಯನ್ನು ಅನುಸರಿಸಿ ಅಕ್ಕಿ ಮಾರುವ ವ್ಯಾಪಾರಿ ಎಂತಹವನೊ ತಿಳಿದುಕೊಂಡಂತೆ, ನಾವು ಕೇಳಿದ ಜ್ಞಾನವನ್ನನುಸರಿಸಿ ಜ್ಞಾನವನ್ನು ಹೇಳಿದ ಗುರುವು ಎಂತಹವನೋ ತಿಳಿಯುತ್ತದೆ. ಮೊದಲು ಅಕ್ಕಿಯ ಕುರಿತು ತಿಳಿಯದವನಿಗೆ, ಎಲ್ಲ ವಿಧಗಳ ಅಕ್ಕಿಯನ್ನು ನೋಡಿದ ನಂತರ ಒಳ್ಳೆಯ ಅಕ್ಕಿಯನ್ನೇ ತಿಳಿದುಕೊಂಡಂತೆ, ಮೊದಲು ಜ್ಞಾನವೊಂದರ ಭೇದಗಳನ್ನು ತಿಳಿಯದ ಮನುಷ್ಯ, ಎಲ್ಲಾ ವಿಧಗಳ ಜ್ಞಾನಗಳನ್ನು ನೋಡಿದ ನಂತರ ಯಾವುದು ಉತ್ತಮ ಜ್ಞಾನವೊ ತಿಳಿದುಕೊಳ್ಳುತ್ತಾನೆ. ಯಾವುದು ಉತ್ತಮ ಜ್ಞಾನವೊ ತಿಳಿದಾಗ ಅದನ್ನನುಸರಿಸಿ ಯಾರು ಉತ್ತಮ ಗುರುವೊ ತಿಳಿಯುತ್ತದೆ. ಈ ವಿಧವಾಗಿ

ಆದರೆ ಅಸಲಾದ ಜ್ಞಾನವನ್ನು ಹೇಳುವವನು ಅಸಲಾದ ಭಗವಂತನೆಂದು ಗುರುತಿಸಬಹುದು.

ಕೆಲವು ವಿಧಗಳ ಕಲ್ಲುಗಳನ್ನು ಪರಿಶೀಲಿಸಿದಾಗ ಎಲ್ಲದಕ್ಕಿಂತ ಪ್ರಕಾಶ 7ವಾಗಿರುವುದು, ಉತ್ತಮವಾದುದು ವಜ್ರವೆಂದು ಗುರುತಿಸಬಹುದು. ಹಾಗೆಯೇ ಭೂಮಿಮೇಲೆ ಎಷ್ಟೋ ಜನ ಹೇಳುವ ಎಲ್ಲಾ ವಿಧಗಳ ಜ್ಞಾನಗಳನ್ನು ಕೇಳಿದರೇನೆ, ಎಲ್ಲದಕ್ಕಿಂತ ಉತ್ತಮ ಧರ್ಮಗಳನ್ನು ತಿಳಿಸುವ ಉತ್ತಮವಾದ ಜ್ಞಾನವನ್ನು ಗುರುತಿಸಬಹುದು. ಆದ್ದರಿಂದ ನಾವು ಎಲ್ಲರ ಜ್ಞಾನವನ್ನು ನೋಡಿರಿ ಎಂದು ಹೇಳುತ್ತಿರುವಾಗ, ಕೆಲವರೇನೊ ನಾವು ಹೇಳುವ ಬೋಧನೆಯನ್ನು ಹೊರತು ಇತರರು ಹೇಳುವುದನ್ನು ಕೇಳಬೇಡಿ ಎಂದು, ನಾವು ಬರೆದ ಪುಸ್ತಕಗಳು ಹೊರತು ಇತರರು ಬರೆದ ಪುಸ್ತಕಗಳು ಓದಬೇಡಿರಿ ಎಂದು ಅವರವರ ಶಿಷ್ಯರಿಗೆ ಹೇಳುತ್ತಿರುತ್ತಾರೆ. ಹಾಗೆ ಏಕೆ ಹೇಳುತ್ತಿದ್ದಾರೆ ಎಂದರೆ! ತಾವು ಹೇಳುವ ಜ್ಞಾನಕ್ಕಿಂತ ಉತ್ತಮವಾದ ಜ್ಞಾನ ಎಲ್ಲಿಯಾದರೂ ತಿಳಿದರೆ, ತಮ್ಮನ್ನು ಬಿಟ್ಟು ಅವರ ಹತ್ತಿರಕ್ಕೆ ಹೋಗುತ್ತಾರೆನ್ನುವ ಉದ್ದೇಶದಿಂದ ಅಥವಾ ಭಯದಿಂದ ಹಾಗೆ ಹೇಳುತ್ತಿರುತ್ತಾರೆ. ತಾವು ಹೇಳುವ ಜ್ಞಾನದಲ್ಲಿ ಧರ್ಮಗಳು ಇಲ್ಲವೆಂದು, ತಮ್ಮ ಜ್ಞಾನಕ್ಕಿಂತ ಉತ್ತಮವಾದ ಜ್ಞಾನವಿದೆಯೆಂದು, ಅದು ತಿಳಿದರೆ ತಮ್ಮ ಹತ್ತಿರಕ್ಕೆ ಶಿಷ್ಯರು ಬರುವುದಿಲ್ಲವೆಂದು ತಿಳಿದು, ತಮ್ಮ ಯಾಜಮಾನಿಕೆಯನ್ನು ಕಾಪಾಡಿಕೊಳ್ಳುವುದಕ್ಕೆ, ಇಂದು ಬಹಳಜನ ಬೋಧಕರಾದ ಗುರುಗಳು, ತಮ್ಮ ಶಿಷ್ಯರನ್ನು ಇತರರ ಪುಸ್ತಕಗಳನ್ನು ಓದಬೇಡಿರೆಂದು ಹೇಳುತ್ತಿದ್ದಾರೆ. ಒಂದುವೇಳೆ ಯಾವ ಮನುಷ್ಯರಾದರೂ ಅಂತಹ ಗುರುಗಳು ಅಲ್ಲದಂತಹ ಗುರುಗಳ ಮಾತುಗಳನ್ನು ಕೇಳಿದರೆ ಅವರು ಮೋಸಹೋದಂತಾಗುತ್ತದೆ. ಒಬ್ಬನು ನನ್ನದು ಅಸಲಾದ ಬಂಗಾರ, ನೀನು ಕೊಂಡರೂ ಯಾರಿಗೂ ತೋರಿಸಬೇಡ ಎನ್ನುತ್ತಾನೆ. ಆದರೆ ನಾವು ಅವನ ಮಾತು ಕೇಳುತ್ತೇವಾ? ಇತರರ ಹತ್ತಿರ ಪರೀಕ್ಷಿಸಿಕೊಂಡು ಅದು ಅಸಲಾದುದೊ ಅಲ್ಲವೊ ನಿರ್ಧಾರಿಸಿಕೊಳ್ಳುತ್ತೇವೆ. ಅದೇ ವಿಧವಾಗಿ ಚಿನ್ನಕ್ಕಿಂತ ಎಷ್ಟೋ ಹೆಚ್ಚು ಬೆಲೆಯುಳ್ಳ ಜ್ಞಾನದ ಹತ್ತಿರ ನಾವು ಮೋಸಹೋಗ

ಬಾರದು. ಜ್ಞಾನ ಜೀವನದ ಸಾಫಲ್ಯಕ್ಕೆ ಸೇರಿರುವುದು. ಆದ್ದರಿಂದ ಬಹಳ ಜಾಗ್ರತೆಯಾಗಿ ತಿಳಿದು ಗ್ರಹಿಸಬೇಕು.

ಭೂಮಿಮೇಲೆ ದೇವರು ತನ್ನ ಜ್ಞಾನವನ್ನು ನೆಲೆಗೊಳಿಸಿದರೆ, ದೇವರಿಗೆ ಪ್ರತಿಪಕ್ಷವಾದ ಮಾಯೆ ಸಹ ತನ್ನ ಜ್ಞಾನವನ್ನು ಏರ್ಪಡಿಸಿಟ್ಟಿದೆ. ಇಲ್ಲಿ ವಿಶೇಷವೇನೆಂದರೆ ದೇವರ ಜ್ಞಾನದಂತೆ ಮಾಯಾಜ್ಞಾನ ಇರುವುದರಿಂದ ಯಾವುದು ದೇವರ ಜ್ಞಾನವೊ, ಯಾವುದು ಮಾಯ ಜ್ಞಾನವೊ ಯಾರಿಗೂ ಅರ್ಥವಾಗದಂತೆ ಇರುತ್ತದೆ. ಆದ್ದರಿಂದ ಯಾರಾದರೂ ಮಾಯ ಜ್ಞಾನವನ್ನು ದೈವಜ್ಞಾನ ಎಂದುಕೊಳ್ಳುವುದಕ್ಕೆ ಅವಕಾಶ ಇದೆ. ದೈವಜ್ಞಾನದಂತಿರುವ ಮಾಯೆ ಜ್ಞಾನ ಭೂಮಿಮೇಲೆ 99 ಪಾಲು ವಿಸ್ತರಿಸಿದೆ. ಮುಖ್ಯವಾದ ಮತ ಗ್ರಂಥಗಳಲ್ಲಿ ಸಹ ದೈವಜ್ಞಾನದಂತೆ ಮಾಯೆ ಜ್ಞಾನ ಸ್ಥಳ ಮಾಡಿಕೊಂಡು ಯಾರೂ ಗುರುತಿಸದ ರೀತಿಯಲ್ಲಿ ಇದೆ. ಅಷ್ಟೇ ಅಲ್ಲದೆ ಮಾಯೆ ಭೂಮಿಮೇಲೆ ಗುರುಗಳಾಗಿ ಎಷ್ಟೋ ಜನರನ್ನು ತಯಾರುಮಾಡಿ, ಅವರಿಂದ ತನ್ನ ಜ್ಞಾನವನ್ನು ದೈವಜ್ಞಾನದಂತೆ ಬೋಧಿಸುತ್ತಿದೆ.

ಇದಕ್ಕೂ ಮೊದಲು ಅಕ್ಕಿವೊಂದರ ವಿಧಗಳ ಉದಾಹರಣೆಯನ್ನು ಹೇಳಿಕೊಂಡಿದ್ದೇವೆ! ಅದರಲ್ಲಿ ಇಪ್ಪತ್ತು ವಿಧಗಳ ಅಕ್ಕಿಗಳಲ್ಲಿ ಶ್ರೇಷ್ಟವಾದುದು ಒಂದು ಮಾತ್ರವೆ ಇರುವಂತೆ, ಭೂಮಿಮೇಲಿರುವ ಎಷ್ಟೋ ವಿಧಗಳ ಜ್ಞಾನಗಳಲ್ಲಿ ಕೊನೆಗೆ ಒಂದು ಜ್ಞಾನವೇ ನಿಜವಾದ ದೈವಜ್ಞಾನವೆಂದು ತಿಳಿದಾಗ, ಉಳಿದ ವಿಧಗಳ ಜ್ಞಾನಗಳೆಲ್ಲವನ್ನು ಮಾಯಾ ಜ್ಞಾನಗಳೆಂದೇ ಹೇಳಬಹುದು. ದೈವಜ್ಞಾನ ಯಾವುದು, ಮಾಯ ಜ್ಞಾನ ಯಾವುದು ಎಂದು ಪರಿಶೀಲಿಸದವರೆಲ್ಲರೂ, ದೈವಜ್ಞಾನವನ್ನು ಗುರುತಿಸಲಾರದೆ, ಮಾಯಾ ಜ್ಞಾನದಕಡೆಯೇ ಆಕರ್ಷಿತರಾಗುತ್ತಾರೆ. ಅದನ್ನೇ ದೊಡ್ಡದಾಗಿ ಹೇಳಿಕೊಳ್ಳುತ್ತಿರುತ್ತಾರೆ. ಆದ್ದರಿಂದ ಮಾಯಾ ಜ್ಞಾನ ನೂರಕ್ಕೆ ತೊಂಭತ್ತೊಂಭತ್ತ ರಷ್ಟು ಇದೆಯೆಂದು ಹೇಳಬಹುದು. ಈ ಮಾತು ನಿಜವಾ ಸುಳ್ಳಾ ಎನ್ನುವುದಕ್ಕೆ ಚಿಕ್ಕ ಉದಾಹರಣೆಯನ್ನು ನೋಡೋಣ. ಪ್ರಸ್ತುತ ಕಾಲದಲ್ಲಿ ಯಜ್ಞಗಳು ಮಾಡುವುದು ದೊಡ್ಡ ಕಾರ್ಯವೆಂದು ಬಹಳ

ಜನ ತಿಳಿಯುತ್ತಿರುತ್ತಾರೆ. ಯಾವ ದೇವಾಲಯದಲ್ಲಾಗಲಿ, ಯಾವ ಆರಾಧನೆ ಕಾರ್ಯಗಳಲ್ಲಾಗಲಿ ಯಜ್ಞಗಳನ್ನು ಜ್ಞಾನ ಹೊಂದಿದವರೆ ಮಾಡುತ್ತಿರುತ್ತಾರೆ. ಯಜ್ಞಗಳನ್ನು ಮಾಡುವುದು ಉನ್ನತವಾದ ಆರಾಧನೆಯಾಗಿ ಎಷ್ಟೋ ಜನ ಭಾವಿಸುತ್ತಿದ್ದಾರೆ. ಮಳೆ ಬರಬೇಕೆಂದು ವರುಣ ಯಜ್ಞ, ಮೃತ್ಯು ಬರಬಾರದೆಂದು ಮೃತ್ಯುಂಜಯ ಯಜ್ಞ, ಶಾಂತಿಗೋಸ್ಕರ ವಿಶ್ವಶಾಂತಿ ಯಜ್ಞ, ಹೀಗೆ ಎಷ್ಟೋ ಹೆಸರು ಹೊಂದಿದ ಯಜ್ಞಗಳು ಅನೇಕ ಇವೆ. ದೈವಮಾರ್ಗದಲ್ಲಿ ಯಜ್ಞಗಳು ಸರಿಯಾದವಾ? ಅಲ್ಲವಾ? ಧರ್ಮಗಳಾ? ಅಧರ್ಮಗಳಾ? ಎಂದು ಪ್ರಶ್ನಿಸಿದರೆ ಸಾವಿರಜನರನ್ನು ಕೇಳಿದರೂ ಸರಿಯಾದವೇಯೆಂದು, ಧರ್ಮಗಳೇಯೆಂದು ಹೇಳುತ್ತಿರುತ್ತಾರೆ. ಕೆಲವು ಲಕ್ಷ ಜನರನ್ನು ಕೇಳಿದರೆ ಯಾರಾದರೂ ಅಪರೂಪವಾಗಿ ಸರಿಯಾದವು ಅಲ್ಲ ಅಧರ್ಮಗಳೆಂದು ಹೇಳುತ್ತಾನೇನೊ! ಒಂದು ಯಜ್ಞ ವಿಷಯದಲ್ಲಿಯೇ ಕೆಲವು ಲಕ್ಷ ಜನರಿಗೆ ಒಬ್ಬನು ಸಹ ಯಜ್ಞಗಳು ಮಾಡುವುದು ಅಧರ್ಮವೆಂದು ಹೇಳಲಿಲ್ಲ. ವಾಸ್ತವವಾಗಿ ದೈವಜ್ಞಾನದ ಪ್ರಕಾರ ಯಜ್ಞಗಳು ಅಧರ್ಮಗಳೇ. ಮಾಯಾಜ್ಞಾನದಲ್ಲಿ ಯಜ್ಞಗಳು ಮಾಡುವುದು ಒಳ್ಳೆಯಕೆಲಸ ವೆಂದು ಬೋಧಿಸಲ್ಪಡುತ್ತಿದೆ. ಯಜ್ಞಗಳು ಧರ್ಮವಾ, ಅಧರ್ಮವಾ ಎಂದು ಕೇಳಿದರೆ ಕೆಲವು ಲಕ್ಷ ಜನರು ಧರ್ಮವೆಂದಾಗ, ಭೂಮಿಮೇಲೆ ಮಾಯಾಜ್ಞಾನ ಎಷ್ಟು ಶಾತವಿದೆಯೋ, ದೈವಜ್ಞಾನ ಎಷ್ಟುಪಾಲು ಇದೆಯೋ ನೀವೇ ಯೋಚಿಸಿರಿ. ಇದು ಮಾಯಾಜ್ಞಾನ, ಇದು ದೈವಜ್ಞಾನ ಎಂದು ತಿಳಿಯದಿರುವುದರಿಂದ ಭೂಮಿಮೇಲೆ ದೈವಜ್ಞಾನ ಸಾಂದ್ರತೆಗಿಂತ ಮಾಯಾ ಜ್ಞಾನ ಸಾಂದ್ರತೆ ಹೆಚ್ಚಾಗಿಹೋಗಿದೆ.

ಹುಟ್ಟಿದಾಗಿನಿಂದ ತಿಂಡಿಗೋಸ್ಕರ, ಬೆಳೆದಾಗಿನಿಂದ ಬದುಕು ಬಾಳ್ವಿಗಾಗಿ ಒದ್ದಾಡುವ ಮನುಷ್ಯರಿಗೆ ಜೀವನದಲ್ಲಿ ಮುಖ್ಯವಾದುದು ದೈವಜ್ಞಾನವೆಂದು ತಿಳಿಯದಂತೆ ಹೋಗಿದೆ. ಒಂದುವೇಳೆ ಕೆಲವು ಸಾವಿರಾರು ಜನರಲ್ಲಿ ಅಪರೂಪವಾಗಿ ಯಾರಿಗಾದರೂ ದೈವಜ್ಞಾನದ ಮೇಲೆ ಆಸಕ್ತಿ ಉಂಟಾದರೂ, ಅವನಿಗೆ ದೈವಜ್ಞಾನ ರೂಪದಲ್ಲಿ ಮಾಯಾಜ್ಞಾನ ತಿಳಿಯುತ್ತಿದೆ. ಹಾಗೆ

ಮಾಯಾಜ್ಞಾನ ಅಂಟಿಕೊಂಡ ಕೆಲವು ಲಕ್ಷ ಜನರಲ್ಲಿ, ಯಾರಾದರೂ ಅಪರೂಪವಾಗಿ ದೈವಜ್ಞಾನ ಪ್ರತ್ಯಕ್ಷವಾಗಿ ಇದೆಯೆಂದು, ಇಲ್ಲಿಯವರೆಗೂ ತನಗೆ ತಿಳಿದಿರುವುದು ದೈವಜ್ಞಾನ ಅಲ್ಲವೆಂದು ತಿಳಿಯಬಲ್ಲನು. ಈ ವಿಧವಾಗಿ ಲೆಕ್ಕಿಸಿದರೆ ಪ್ರಸ್ತುತಕಾಲದಲ್ಲಿ ದೈವಜ್ಞಾನವೊಂದರ ಸ್ಥಿತಿ ಏನೋ ಅರ್ಥವಾಗುತ್ತಿದೆ. ನಿಜವಾದ ದೈವಧರ್ಮಗಳನ್ನು ತಿಳಿಸುವ ಜ್ಞಾನವನ್ನು ತಿಳಿದಾಗಲೇ ಇದು ದೇವರು ಹೇಳಿದ ಜ್ಞಾನವೆಂದು ತಿಳಿಯಬಲ್ಲದು. ಮಾಯಾ ಜ್ಞಾನವಾದರೂ, ದೈವಜ್ಞಾನವಾದರೂ ಅದನ್ನು ಮನುಷ್ಯ ಹೇಳಿರುವುದೆಂದೇ ಹೇಳಬಹುದು. ಮಾಯಾಜ್ಞಾನವನ್ನು ಎಲ್ಲರೂ ಹೇಳುತ್ತಿರುವಾಗ ದೈವಜ್ಞಾನವನ್ನು ಮಾತ್ರ ಒಬ್ಬನೇ ಹೇಳುತ್ತಾನೆ. ಜ್ಞಾನವನ್ನು ಹೇಳುವ ಎಲ್ಲರಲ್ಲಿ ದೈವಜ್ಞಾನವನ್ನು ಹೇಳುವವನು ಸಹ ಮನುಷ್ಯನೇ ಆದರೂ ಅವನನ್ನು ಪ್ರತ್ಯೇಕವಾದವನಾಗಿ ಹೇಳಬಹುದು. ಆ ಪ್ರತ್ಯೇಕತೆ ಹೊಂದಿರುವವನೆ ಭಗವಂತನೆಂದು ಹೇಳಬಹುದು. ಭಗವಂತನು ಸಹ ಒಬ್ಬ ಮನುಷ್ಯನೆ. ಆತನ ಜೀವನದಲ್ಲಾಗಲಿ, ಆಕಾರದಲ್ಲಾಗಲಿ ಎಲ್ಲಾ ವಿಧಗಳಲ್ಲಿ ಮನುಷ್ಯನನ್ನೇ ಹೋಲಿರುತ್ತಾನೆ. ಆದ್ದರಿಂದ ಭಗವಂತನನ್ನು ಒಂದು ಜ್ಞಾನದ ಮುಖಾಂತರ ಹೊರತು ಯಾವ ವಿಧವಾಗಿ ಕೂಡ ಗುರುತಿಸಲಾರೆವು, ಗುರುತಿಸುವುದಕ್ಕೆ ಸಾಧ್ಯವಾಗುವುದಿಲ್ಲ.

ಭೂಮಿ ಮೇಲೆ ದೈವಧರ್ಮಗಳನ್ನು ತಿಳಿಸುವ ಒಬ್ಬ ಮನುಷ್ಯನನ್ನು ಮಾತ್ರ ಭಗವಂತನು ಎನ್ನುತ್ತಿದ್ದೇವೆ. ಆದ್ದರಿಂದ ಉಳಿದ ಮನುಷ್ಯರ್ಯಾರೂ ಭಗವಂತರು ಆಗುವುದಿಲ್ಲವೆಂದು ತಿಳಿಯುತ್ತಿದೆ. ಭುಮಿ ಮೇಲಕ್ಕೆ ಭಗವಂತನು ಕೆಲವು ಸಾವಿರ ವರ್ಷಗಳಿಗೋ ಅಥವಾ ಕೆಲವು ಲಕ್ಷ ವರ್ಷಗಳಿಗೊ ಬರುತ್ತಾನೆ. ಹಾಗೆ ಬಂದಿರುವವನು ಮನುಷ್ಯನಾಗಿ ಕಾಣಿಸಿದರೂ ಆತನು ಮನುಷ್ಯನಲ್ಲ. ಭಗವಂತನು ಎಂದಿಗೂ ಮನುಷ್ಯನಲ್ಲ. ಹಾಗೆಯೇ ಮನುಷ್ಯ ಎಂದಿಗೂ ಭಗವಂತನು ಆಗುವುದಿಲ್ಲ. ಭಗವಂತನು ಹುಟ್ಟಿದಾಗ ಭಗವಂತನು ತನ್ನ ಜೀವನದಲ್ಲಿ ಮನುಷ್ಯನಾಗಿ ಬದಲಾಗುವುದಕ್ಕೆ ಸಾಧ್ಯವಿಲ್ಲ. ಹಾಗೆಯೇ ಮನುಷ್ಯ ಹುಟ್ಟಿದ ನಂತರ ತನ್ನ ಜೀವನದಲ್ಲಿ ಭಗವಂತನಾಗಿ ಬದಲಾಗುವುದಕ್ಕೆ ಸಾಧ್ಯವಿಲ್ಲ. ಇದನ್ನನುಸರಿಸಿ **"ಭೂಮಿಮೇಲೆ ಭಗವಂತನು ಮನುಷ್ಯನಾಗಿ, ಮನುಷ್ಯ**

**ಭಗವಂತನಾಗಿ ಬದಲಾಗುವುದಿಲ್ಲ"** ಎನ್ನುವುದು ಸೂತ್ರ ಎಂದು ತಿಳಿಯಬೇಕು. ದೇವರು ಭಗವಂತನಾಗಿ ಬದಲಾಗಬಹುದಾಗಲಿ, ಮನುಷ್ಯ ಭಗವಂತನಾಗಿ ಬದಲಾಗುವುದಿಲ್ಲ. ಈ ಸೂತ್ರದ ಪ್ರಕಾರ ದೇವರು, ಭಗವಂತನು, ಮನುಷ್ಯ ಎನ್ನುವ ಮೂವರನ್ನು ಹೇಳಿಕೊಳ್ಳಬಹುದು. ದೇವರು ತನ್ನ ಜ್ಞಾನವನ್ನು ಭೂಮಿಮೇಲೆ ಮನುಷ್ಯನಿಗೆ ಹೇಳುವುದಕ್ಕೆ ಭಗವಂತನ ಪಾತ್ರವನ್ನು ಉಪಯೋಗಿಸಿಕೊಳ್ಳುತ್ತಿದ್ದಾನೆ. ದೇವರು ಪ್ರತ್ಯಕ್ಷವಾಗಿ ಮನುಷ್ಯನಿಗೆ ತನ್ನ ಜ್ಞಾನ ವನ್ನು ತಿಳಿಸುವುದಿಲ್ಲ. ಆದ್ದರಿಂದ ಭಗವಂತನ ಪಾತ್ರವನ್ನು ಉಪಯೋಗಿಸಿ ಕೊಳ್ಳುತ್ತಿದ್ದಾನೆ. ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 16, 17 ಶ್ಲೋಕಗಳಲ್ಲಿ ಕ್ಷರ, ಅಕ್ಷರ, ಪುರುಷೋತ್ತಮರೆಂದು ತ್ರೈತವನ್ನು ತಿಳಿಸಿದಂತೆ ಹೊರಗಡೆ ಕೂಡ ಮನುಷ್ಯ, ಭಗವಂತನು, ದೇವರು ಎನ್ನುವ ತ್ರೈತದಿಂದಲೇ ತನ್ನ ಜ್ಞಾನವನ್ನು ಪ್ರಸಾರವಾಗುವಂತೆ ಮಾಡುತ್ತಿದ್ದಾನೆ.

ದೇವರ ಧರ್ಮಗಳನ್ನು ದೇವರೇ ತಿಳಿಸಬೇಕು, ಮನುಷ್ಯ ಹೇಳಲಾರನು ಎನ್ನುವ ಸೂತ್ರದ ಪ್ರಕಾರ ಮನುಷ್ಯನಲ್ಲದಿರುವ ಭಗವಂತನು ದೇವರ ಧರ್ಮಗಳನ್ನು ತಿಳಿಸುತ್ತಿದ್ದಾನೆ. ದೇವರು ಕಾಣಿಸುವುದಿಲ್ಲ, ಕೇಳಿಸುವುದಿಲ್ಲ, ಭಗವಂತನು ಕಾಣಿಸುತ್ತಾನೆ, ಕೇಳಿಸುತ್ತಾನೆ. ಕಾಣಿಸುವ ಕೇಳುವ ಮನುಷ್ಯನಿಗೆ ಕಾಣಿಸಿ, ಕೇಳಿಸುವವನೇ ಜ್ಞಾನವನ್ನು ತಿಳಿಸಬೇಕು. ಆದ್ದರಿಂದ ದೇವರು ಭೂಮಿಮೇಲಕ್ಕೆ ಭಗವಂತನಾಗಿ ತನ್ನ ಅಂಶವನ್ನು ಕಳಿಸುತ್ತಾನೆ. ದೇವರಿಗೆ ಲೆಕ್ಕವಿಲ್ಲದಷ್ಟು ಕೋಟ್ಯಾಂತರ ಅಂಶಗಳು ಇವೆ. ಭಗವದ್ಗೀತೆ ವಿಭೂತಿಯೋಗ 42ನೇ ಶ್ಲೋಕದಲ್ಲಿ **"ಏಕಾಂಶೇನ ಸ್ಥಿತೋ ಜಗತ್"** ಎನ್ನುವಂತೆ ಈ ಜಗತ್ ಎಲ್ಲವೂ ದೇವರವೊಂದರ ಅಂಶದಿಂದಲೇ ಹೊಂದಿದೆ. ಒಟ್ಟಾರೆ ಜಗತ್ತು ಎಲ್ಲವೂ ಒಂದೇವೊಂದು ಅಂಶದಿಂದ ಉಂಟಾಗಿರುವಾಗ, ದೇವರೊಂದರ ಮತ್ತೊಂದು ಅಂಶದಿಂದ ಭಗವಂತನು ಸೃಷ್ಟಿಸಲ್ಪಟ್ಟಿದ್ದಾನೆ. ದೇವರಿಗಿರುವ ಲೆಕ್ಕವಿಲ್ಲದಷ್ಟು ಕೋಟಿ ಅಂಶಗಳಲ್ಲಿ ಒಂದು ಅಂಶ ಜಗತ್ತಾಗಿ, ಒಂದು ಅಂಶ ಭಗವಂತನಾಗಿ ಬರುತ್ತಿದೆ. ಆದ್ದರಿಂದ ಜಗತ್ತಿಗೆ ಸಮಾನವಾದವನು ಭಗವಂತನು, ಆದರೆ

ಜಗತಿ ಯಾರಿಗೂ ಅರ್ಥವಾಗುವುದಿಲ್ಲ, ಹಾಗೆಯೇ ಭಗವಂತನು ಸಹ ಯಾರಿಗೂ ಅರ್ಥವಾಗುವುದಿಲ್ಲ. "ಜಗತಿ"ಯನ್ನು ವಿಭಜಿಸಿ ನೋಡಿದರೆ ಜ+ಗತಿ = ಜಗತಿ ಆಗುತ್ತದೆ. 'ಜ' ಎಂದರೇ ಜನ್ಮಿಸುವುದು ಎಂದೂ, 'ಗತಿ' ಎಂದರೇ ಗತಿಸುವುದು ಅಥವಾ ಮರಣಿಸುವುದು ಎಂದೂ ಹೇಳಬಹುದು. ಆದಕಾರಣ ಹುಟ್ಟಿ ಮರಣಿಸುವುದನ್ನು ಜಗತಿ ಎನ್ನುತ್ತಿದ್ದೇವೆ. ಜೀವಿಗೆ ಜನನ, ಮರಣ ಇಲ್ಲದಿದ್ದರೂ ಜೀವಿಯು ಧರಿಸುವ ಶರೀರಕ್ಕೆ ಜನನ ಮರಣಗಳು ಇವೆ. ಆದ್ದರಿಂದ ಸಜೀವ ಶರೀರಗಳೆಲ್ಲವನ್ನು ಜಗತಿ ಎನ್ನುತ್ತಿದ್ದೇವೆ. ದೇವರ ಅಂಶ ಭಗವಂತನಾಗಿ ಶರೀರವನ್ನು ಧರಿಸಿ ಬರುತ್ತಿದೆ. ಆದ್ದರಿಂದ ಜಗತಿಯಲ್ಲಿ ಭಗವಂತನನ್ನು ಸಹ ಒಬ್ಬ ಮನುಷ್ಯನನ್ನಾಗಿ ಪ್ರಜೆಗಳು ನೋಡುತ್ತಿದ್ದಾರೆ. ಅಜ್ಞಾನ ಪ್ರಜೆಗಳು ಭಗವಂತನನ್ನು ಸಾಧಾರಣ ಮನುಷ್ಯನನ್ನಾಗಿ ಲೆಕ್ಕಹಾಕಿ ಭಗವಂತನನ್ನು ಸಹ ಅವಮಾನಿಸುತ್ತಿದ್ದಾರೆ.

ಇದೇ ವಿಷಯವನ್ನು ಭಗವದ್ಗೀತೆ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 11ನೇ ಶ್ಲೋಕದಲ್ಲಿ ಈ ವಿಧವಾಗಿ ಹೇಳುತ್ತಿದ್ದಾನೆ.

ಶ್ಲೋ॥ **ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್।**
**ಪರಂ ಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್॥**

**ಭಾವಾರ್ಥ :–** ನಾನು ಸರ್ವ ಜೀವರಾಶಿಗಳಿಗು ಮಹೇಶ್ವರನಾದರೂ, ಮನುಷ್ಯ ಶರೀರ ಧರಿಸಿದ ನನ್ನನ್ನು ನೋಡಿ, ನನ್ನ ಶ್ರೇಷ್ಟತ್ವವನ್ನು ತಿಳಿಯದ ನರರು ಮೂಢರಾಗುತ್ತಾ ನನ್ನನ್ನು ಅವಮಾನಿಸುತ್ತಿದ್ದಾರೆ.

ವಿವರವಾಗಿ ಹೇಳಿಕೊಂಡರೆ ದೇವರು ಸರ್ವಪ್ರಪಂಚವನ್ನು ಸೃಷ್ಟಿಸಿದ ಸೃಷ್ಟಿಕರ್ತ. ಅಂತಹ ದೇವರ ಏಕಾಂಶವೇ ಭಗವಂತನು. ಆ ದೇವರ ಮತ್ತೊಂದು ಅಂಶವೇ ಜೀವರಾಶಿಗಳ ಜಗತ್ತು. ಇದನ್ನನುಸರಿಸಿ ನೋಡಿದರೆ ಜಗತ್ತಿನಲ್ಲಿನ ಜೀವಿಗಳಿಗೆಲ್ಲಾ ಅಧಿಪತಿ ಭಗವಂತನು ಎಂದು ಹೇಳಬಹುದು. ಆದರೆ ಕೆಲವರು ಇಲ್ಲಿಯೊಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ದೇವರ ಒಂದು ಅಂಶ

ಜಗತ್ತು ಆದಾಗ ಮತ್ತು ದೇವರ ಮತ್ತೊಂದು ಅಂಶ ಭಗವಂತನಾದಾಗ ಜಗತ್ತು ಭಗವಂತನು ಎರಡೂ ಸಮಾನವೇ ಆಗುತ್ತವೆ. ಅಂತಹದರಲ್ಲಿ ಜಗತ್ತಿಗೆ ಭಗವಂತನು ಹೇಗೆ ಅಧಿಪತಿ ಆಗುತ್ತಾನೆ? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಸರ್ಕಾರ ನಿರುದ್ಯೋಗ ಸಮಸ್ಯೆ ನಿವಾರಿಸುವುದಕ್ಕೆ ಹತ್ತುಜನರನ್ನು ಉದ್ಯೋಗದೊಳಗೆ ತೆಗೆದುಕೊಂಡು, ಒಂದು ದಿನಕ್ಕೆ ನೂರು ರೂಪಾಯಿಗಳ ಪ್ರಕಾರ ತಿಂಗಳಿಗೆ ಮೂರುಸಾವಿರ ರೂಪಾಯಿಗಳು ಸಂಬಳ (ಜೀತ) ಕೊಡುವಂತೆ ಮಾಡಿದೆ. ಒಂದು ತಿಂಗಳಿಗೆ ಹತ್ತು ಜನರಿಗೆ ಬರುವ ಜೀತ (ಸಂಬಳ) ಮೂವತ್ತುಸಾವಿರ ರೂಪಾಯಿಗಳಾಗುತ್ತದೆ. ಈ ಹತ್ತು ಜನರಿಂದ ಸರಿಯಾಗಿ ಕೆಲಸಮಾಡಿಸುವುದಕ್ಕೆ ಹತ್ತು ಜನರಿಗು ಅಧಿಪತಿಯಾಗಿ ಒಬ್ಬ ಆಫೀಸರ್‌ನನ್ನು ನಿಯಮಿಸಿದೆ. ಹಾಗೆ ನಿಯಮಿಸಿದ ಆಫೀಸರ್‌ಗೆ ಒಂದು ತಿಂಗಳಿಗೆ ಸಂಬಳ 30 ಸಾವಿರ ರೂಪಾಯಿಗಳಾಗಿ ನಿರ್ಣಯಿಸಿದೆ. ಸರ್ಕಾರ ನಿರ್ಣಯದ ಪ್ರಕಾರ ಹತ್ತು ಜನರಿಗೆ 30ಸಾವಿರ ಸಂಬಳವಾದರೆ, ಆಫೀಸರ್ ಒಬ್ಬನಿಗೆ 30ಸಾವಿರ ಸಂಬಳ ಇರುವಾಗ ತಿಂಗಳ ಸಂಬಳದಲ್ಲಿ ಇಬ್ಬರೂ ಸಮಾನವೇ ಆದರೂ, ಹತ್ತು ಜನರಿಗೆ ಆಫೀಸರ್ ಅಧಿಪತಿಯೇ ಎಂದು ಹೇಳುತ್ತಿದ್ದೇವೆ. ಒಬ್ಬ ಆಫೀಸರ್ ಹೇಳಿದಂತೆ ಹತ್ತು ಜನರು ಕೇಳಬೇಕಾಗಿದ್ದೆ. ಹತ್ತುಜನ ಉದ್ಯೋಗಸ್ತರು ಮನುಷ್ಯರೆ, ಹಾಗೆಯೇ ಒಬ್ಬ ಆಫೀಸರ್ ಸಹ ಮನುಷ್ಯನೇ. ಆದರೂ ಹತ್ತುಜನರಿಗು ಆಫೀಸರ್‌ನನ್ನು ಯಜಮಾನ ಅಂದಂತೆ ಭಗವಂತನನ್ನು ಜಗತ್ತಿಗೆ ಅಧಿಪತಿ ಎನ್ನುತ್ತಿದ್ದೇವೆ. ವಿವರಿಸಿ ಹೇಳಿದರೆ 30 ಸಾವಿರ ರೂಪಾಯಿಗಳು ಹತ್ತು ಜನರಿಗೆ ತಿಂಗಳ ಸಂಬಳ ಮತ್ತು 30 ಸಾವಿರ ರೂಪಾಯಿಗಳೆ ಆಫೀಸರ್ ಸಂಬಳ. ಹಾಗೆಯೇ ಒಂದು ಅಂಶವೇ ಜೀವರಾಶಿಗಳೆಲ್ಲ ಮತ್ತು ಒಂದು ಅಂಶವೇ ಭಗವಂತನು. ಹತ್ತುಜನರ ಸಂಬಳ, ಆಫೀಸರ್ ಸಂಬಳ ಸಮಾನವಾದಷ್ಟು ಮಾತ್ರಕ್ಕೆ ಕೆಲಸದವರು ಆಫೀಸರ್ ಇಬ್ಬರೂ ಹೇಗೆ ಸಮಾನವಾಗುವುದಿಲ್ಲವೊ ಹಾಗೆಯೇ ಜಗತ್ತು ಅಂಶ, ಭಗವಂತನ ಅಂಶ ಸಮಾನವಾದಷ್ಟು ಮಾತ್ರಕ್ಕೆ ಜಗತ್ತು ಭಗವಂತನು ಸಮಾನ ಅಲ್ಲ. ಹತ್ತುಜನರ ಸಂಬಳ ಒಬ್ಬ ಆಫೀಸರ್ ಸಂಬಳಕ್ಕೆ ಸಮಾನ ವಾದರೂ, ಹತ್ತುಜನರು

ಸೇರಿ ಆಫೀಸರ್ ಮಾತನ್ನು ಕೇಳುವುದರಿಂದ, ಆತನು ಹತ್ತು ಜನರಿಗೂ ಅಧಿಪತಿ ಎಂದು ಹೇಳಬಹುದು. ಅದೇ ವಿಧವಾಗಿ ಒಂದು ಅಂಶದಿಂದ ಜಗತ್ತಿದ್ದರೂ, ಒಂದು ಅಂಶದಿಂದಲೇ ಭಗವಂತನಿದ್ದರೂ, ಜಗತ್ತಿನಲ್ಲಿನ ಮನುಷ್ಯರು ಭಗವಂತನು ಹೇಳಿದ ಧರ್ಮಗಳನ್ನೇ ಕೇಳಬೇಕಾಗಿ ಬರುತ್ತದೆ. ಭಗವಂತನು ಹೇಳಿದ ಧರ್ಮಗಳನ್ನು ಕೇಳದವರೆಗು ಅವರಿಗೆ ಮುಕ್ತಿಯಿಲ್ಲ. ಆದ್ದರಿಂದ ಮಾನವರೆಲ್ಲರಿಗೂ ಭಗವಂತನು ಅಧಿಪತಿಯೇ ಎಂದು ಹೇಳ ಬಹುದು. ಇಲ್ಲಿ ಹತ್ತುಜನ ಉದ್ಯೋಗಸ್ತರಿಗು ಅಲ್ಲಿ ಆಫೀಸರ್‌ಗು ಸರ್ಕಾರ ಹೇಗೆ ದೊಡ್ಡದಾಗಿದೆಯೋ, ಹಾಗೆ ಇತ್ತ ಜಗತ್ತಿಗು ಅತ್ತ ಭಗವಂತನಿಗು ದೇವರು ದೊಡ್ಡದಾಗಿ ಇದ್ದಾನೆ.

ಹತ್ತುಜನ ಉದ್ಯೋಗಸ್ತರು ಆಫೀಸರ್ ಮಾತು ಕೇಳದಂತೆ, ಆಫೀಸರ್ ನನ್ನು ಗೌರವಿಸದಂತೆ ಆಫೀಸರ್‌ನನ್ನು ಯಾವ ವಿಧವಾಗಿ ಅವಮಾನಿಸಿದರೂ ಮೇಲೆ ಸರ್ಕಾರ ತಪ್ಪದೆ ಉದ್ಯೋಗಸ್ಥರನ್ನು ಶಿಕ್ಷಿಸುತ್ತದೆ. ಮೇಲೆ ಇರುವುದು ಕುರುಡ ಸರ್ಕಾರವೇ ನಮಗೆ ಬರುವ ಸಂಬಳ ಬರುತ್ತದೇಳು ಎಂದು ಮಾಡಬೇಕಾದ ಕೆಲಸವನ್ನು ಸರಿಯಾಗಿ ಮಾಡದಿದ್ದರೂ, ನಮ್ಮ ಮಧ್ಯದೊಳಗೆ ಬಂದ ಅಧಿಕಾರಿಯನ್ನು ಅಧಿಕಾರಿಯಾಗಿ ಗುರುತಿಸದೆ ಅವಮಾನಮಾಡಿದರೂ, ಮೇಲೆ ಸರ್ಕಾರ ಉದ್ಯೋಗಸ್ಥರ ಮೇಲೆ ಕಠಿಣ ಕ್ರಮಗಳು ತೆಗೆದುಕೊಳ್ಳುತ್ತಾರೆ. ಹಾಗೆಯೇ ಜಗತ್ತಿನಲ್ಲಿನ ಮನುಷ್ಯರನ್ನು ದೇವರನ್ನು ಕುರುಡನಾಗಿ ಲೆಕ್ಕಹಾಕಿ ತಮ್ಮ ಇಷ್ಟಬಂದಂತೆ ಪಾಪ ಮಾಡಿದರೂ, ತಮ್ಮ ಮಧ್ಯದೊಳಗಾಗಲಿ, ಹತ್ತಿರಕ್ಕಾಗಲಿ ಬಂದಿರುವ ಭಗವಂತನನ್ನು ಗುರುತಿಸದೆ ಆತನನ್ನು ಅವಮಾನ ಮಾಡಿದರೂ, ದೇವರು ನಿರ್ಮಿಸಿದ ಭೂತಗಳು, ಗ್ರಹಗಳ ಪರಿಪಾಲನೆಯಲ್ಲಿ ಪೂರ್ತಿ ಶಿಕ್ಷಾರ್ಹರಾಗುತ್ತಾರೆ. ಅದರೂ ದೇವರ ಪರಿಪಾಲನೆ ಏನೊ ತಿಳಿಯದೆ ಮನುಷ್ಯರು ಅಜ್ಞಾನ ಅಂಧಕಾರದಲ್ಲಿ ಕಣ್ಣುಗಳು ಕುರುಡಾಗಿ, ಜಗತ್ತಿಗೆಲ್ಲ ಅಧಿಪತಿಯಾದ ಭಗವಂತನನ್ನು ಗುರುತಿಸದೆ, ಮಾನವ ಶರೀರವನ್ನು ಧರಿಸಿದ ಭಗವಂತನ ದೊಡ್ಡತನ ತಿಳಿಯದೆ, ಸಾಧಾರಣ ಮನುಷ್ಯನಾಗಿ ಲೆಕ್ಕಹಾಕಿ

ಅವಮಾನಪಾಲು ಮಾಡುತ್ತಿದ್ದಾರೆ. ಆದ್ದರಿಂದ ಮೇಲಿನ ಶ್ಲೋಕದಲ್ಲಿ **"ಅವಜಾನನ್ತಿ ಮಾಂ ಮೂಢಾ ಮಾನುಷೀಮ್ ತನುಮಾಶ್ರಿತಮ್"** ಮನುಷ್ಯ ಶರೀರವನ್ನು ಧರಿಸಿದ ನನ್ನನ್ನು ನೋಡಿ ಮೂಢರು ಅವಮಾನಿಸುತ್ತಿದ್ದಾರೆಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ **"ಪರಂ ಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್"** ನಾನೇ ಸರ್ವ ಜೀವರಾಶಿಗಳಿಗು ಅಧಿಪತಿಯೆಂದು, ನನ್ನ ಹಿರಿಮೆಯನ್ನು ತಿಳಿಯಲಾರರು' ಎಂದು ಸಹ ಹೇಳಿದ್ದಾನೆ.

ದೇವರು ತಾನು ನಿರ್ಮಿಸಿದ ಸೃಷ್ಟಿಯೊಳಗೆ ತನ್ನ ಧರ್ಮಗಳನ್ನು ಕಾಪಾಡುವುದಕ್ಕೆ ಯಾವಾಗಲೊ ಒಂದುಸಲ ಭಗವಂತನನ್ನು ಕಳಿಸುತ್ತಿದ್ದಾನೆ. ಬಂದಿರುವ ಭಗವಂತನು ಯಾರೆನ್ನುವುದು, ಕಳಿಸಿದ ದೇವರಿಗೆ ಗೊತ್ತು. ಆದರೆ ಭೂಮಿಮೇಲಿರುವ ಮನುಷ್ಯರಿಗೆ ತಿಳಿದಿಲ್ಲ. ದೇವರಿಂದ ಕಳಿಸಲ್ಪಟ್ಟ ಅಂಶವನ್ನು ಅಂದರೆ ಭಗವಂತನನ್ನು ಮೊದಲು ಪ್ರಜೆಗಳು ಗುರುತಿಸದೆ ಇದ್ದರೂ, ನಂತರ ಗುರುತಿಸುವುದಕ್ಕೆ ಅನೇಕ ಅವಕಾಶಗಳನ್ನು ದೇವರು ಕಲ್ಪಿಸಿದ್ದಾನೆ. ಬಂದಿರುವ ಭಗವಂತನು ಎಂದಿಗೂ ನಾನು ಭಗವಂತನೆಂದು ಹೇಳದೆ ಹೋದರೂ, ಆತನು ಹೇಳುವ ಬೋಧನೆಗಳನ್ನನುಸರಿಸಿ ಸುಲಭವಾಗಿ ಭಗವಂತನನ್ನು ತಿಳಿಯಬಹುದು. ಆತನ ಬೋಧನೆಗಳನ್ನೇ ಕೇಳದವನು, ಆತನನ್ನು ಸಾಧಾರಣ ಮನುಷ್ಯನಾಗಿಯೇ ಲೆಕ್ಕಿಸುವುದು ನಡೆಯುತ್ತಿದೆ. ಆತನು ಹೇಳುವ ಅನೇಕ ದೈವ ಧರ್ಮಗಳನ್ನನುಸರಿಸಿ ಭಗವಂತನನ್ನು ಗುರುತಿಸುವುದಕ್ಕೆ ಅನೇಕ ಅವಕಾಶಗಳಿದ್ದರೂ ದೈವಧರ್ಮಗಳ ಮೇಲೆ ಆಸಕ್ತಿ ಇಲ್ಲದವನು, ಭಗವಂತನು ಏನು ಹೇಳುತ್ತಿದ್ದಾನೆಂದು ಯಾವಮಾತ್ರ ನೋಡುವುದಿಲ್ಲ. ಆದ್ದರಿಂದ ಅಂತಹವರು ಭಗವಂತನನ್ನು ಯಾವಮಾತ್ರ ತಿಳಿಯಲಾರರು. ದೇವರಮೇಲೆ ವಿಶ್ವಾಸ ಇಲ್ಲದವನು ದೇವರ ಧರ್ಮಗಳ ಮೇಲೆ ಆಸಕ್ತಿಯನ್ನು ತೋರಿಸುವುದಿಲ್ಲ. ದೈವಜ್ಞಾನದ ಮೇಲೆ ಆಸಕ್ತಿಯಿಲ್ಲದವರಿಗೆ ಪ್ರಪಂಚ ಕಾರ್ಯಗಳ ಮೇಲೆ, ಪ್ರಪಂಚ ವಿಷಯಗಳ ಮೇಲೆ ಆಸಕ್ತಿ ಹೆಚ್ಚಾಗಿರುತ್ತದೆ. ಆದಕಾರಣ ಭಗವಂತನು ತಿಳಿಸುವ ಧರ್ಮಗಳ ಮೇಲೆ ಅಜ್ಞಾನಿಗಳು ಆಸಕ್ತಿಯನ್ನು ತೋರಿಸದೆ,

ಭೂಮಿಮೇಲೆ ಭಗವಂತನನ್ನು ಮನುಷ್ಯನಾಗಿ ತಿಳಿದು, ಆತನು ಮಾಡುವ ಪ್ರಪಂಚಕಾರ್ಯಗಳನ್ನೇ ಲೆಕ್ಕಿಸಿ, ಭಗವಂತನನ್ನು ಮನುಷ್ಯರಿಗಿಂತ ಹೀನವಾಗಿ ಮಾತನಾಡುತ್ತಿದ್ದಾರೆ. ಅಷ್ಟೇ ಅಲ್ಲದೆ ಸಾಧಾರಣ ಮನುಷ್ಯನಿಗೆ ಕೊಡುವ ಗೌರವವನ್ನು ಸಹ ಕೊಡದೆ ಹೀನವಾಗಿ ಅವಮಾನಮಾಡುತ್ತಿದ್ದಾರೆ. ಅವಮಾನ ಮಾಡುವುದಲ್ಲದೆ ಭಗವಂತನು ಭೂಮಿಮೇಲೆ ಮಾಡುವ ಧರ್ಮಕಾರ್ಯಗಳಿಗೆ ಆತಂಕಗಳನ್ನು ಉಂಟುಮಾಡುತ್ತಿದ್ದಾರೆ. ಈ ವಿಧವಾಗಿ ಅಜ್ಞಾನ ಪ್ರಜೆಗಳು ಮಾಡಿದರೂ ಭೂಮಿಮೇಲೆ ಪ್ರಜೆಗಳೆಲ್ಲರಿಗೂ ಭಗವಂತನು ಅಧಿಪತಿಯಾದರೂ, ತಾನು ಸಾಧಾರಣ ಮನುಷ್ಯನಾಗಿಯೇ ಕಾಣಿಸುತ್ತಾ, ತಾನು ಯಾವ ಕೆಲಸಕ್ಕೋಸ್ಕರ ಬಂದಿದ್ದಾನೊ ಆ ಕೆಲಸವನ್ನು ಮಾತ್ರ ಮಾಡಿಕೊಳ್ಳುತ್ತಾ ಹೋಗುತ್ತಿರುತ್ತಾನೆ.

ದೇವರ ಅಂಶವಾದ ಭಗವಂತನನ್ನು ಅವಮಾನಮಾಡಿದರೆ, ಭಗವಂತನ ಕಾರ್ಯಗಳನ್ನು ಪ್ರೋತ್ಸಹಿಸದೆ, ಸಹಕರಿಸದೆ ಆತಂಕಪಡಿಸಿದರೆ, ಅಂತಹವನನ್ನು ದೇವರು ಏನು ಮಾಡುವುದಿಲ್ಲವಾ? ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ಉತ್ತರ ಏನೆಂದರೆ! ದೇವರು ಯಾವ ಕೆಲಸವನ್ನು ಮಾಡದವನೆಂದು ಮೊದಲೆ ಹೇಳಿಕೊಂಡಿದ್ದೇವೆ! ಆದ್ದರಿಂದ ಅಂತಹ ಅಜ್ಞಾನಿಗಳನ್ನು ದೇವರು ಏನು ಮಾಡುವುದಿಲ್ಲ, ಆದರೆ ದೇವರ ಪರಿಪಾಲನೆಯಲ್ಲಿನವರು ಅಜ್ಞಾನಿಗಳು ಮಾಡಿದ ಕೆಲಸವನ್ನು ಲೆಕ್ಕಿಸಿ, ಪಾಪವನ್ನು ಅಂಟಗಟ್ಟಿ, ಆ ಪಾಪವನ್ನು ಅನುಭವಿಸುವಂತೆ ಮಾಡುತ್ತಾರೆ. ಈ ನನ್ನಮಾತು ಅಸತ್ಯವಲ್ಲ. ಇದೇ ಮಾತನ್ನೇ ಭಗವಂತನು ಒಂದು ಸಂದರ್ಭವಾಗಿ ಹೇಳುತ್ತಾ ಹೀಗೆ "ನಾನು ಪ್ರಜೆಗಳಿಗೆ ದೈವಧರ್ಮಗಳನ್ನು ಬೋಧಿಸುವುದಕ್ಕೆ ಬಂದಿದ್ದೇನೆ. ದೈವ ಧರ್ಮಗಳ ಮೇಲೆ ಆಸಕ್ತಿ ಇರುವವರೆಲ್ಲರೂ ನನ್ನ ಹತ್ತಿರಕ್ಕೆ ಬಂದು ಜ್ಞಾನ ಸಮೂಹವಾಗಿ ಜ್ಞಾನಸಂಘವಾಗಿ ತಯಾರಾಗುತ್ತಿರುತ್ತಾರೆ. ನಾನು ಮಾಡುವ ಕೆಲಸಗಳಲ್ಲಿ ನನಗೆ ಸಹಕರಿಸದವನು, ನನಗೆ ಪ್ರತಿಪಕ್ಷವಾಗಿದ್ದು ವಿರುದ್ಧ ಕಾರ್ಯಗಳನ್ನು ಮಾಡುತ್ತಿರುತ್ತಾನೆ. ಅಂತಹವನು ನನಗೆ ವಿರೋಧಿಯಾಗಿ ಲೆಕ್ಕಿಸಲ್ಪಡುತ್ತಾನೆ. ನನ್ನ ಕೆಲಸಗಳಿಗೆ ವಿರೋಧಿಯಾದವನು ನನ್ನ ಹತ್ತಿರಕ್ಕೆ ಬರುವ ಪ್ರಜೆಗಳನ್ನು ಬರಮಾಡದೆ,

ಇರುವವರನ್ನೂ ಸಹ ಚೆದರಿಸುವವನಾಗಿ ಇದ್ದಾನೆ" ಅಂದಿದ್ದಾನೆ. ಅಂತಹವರನ್ನು ಕುರಿತು ನಾನು ಮುಖ್ಯವಾಗಿ ಹೇಳುವುದೇನೆಂದರೆ! ಮನುಷ್ಯರು ಮಾಡುವ ಪ್ರಪಂಚ ಸಂಬಂಧವಾದ ಪ್ರತಿ ಪಾಪವನ್ನು ದೈವಜ್ಞಾನದಿಂದ ಕ್ಷಮಿಸುವಂತೆ ಮಾಡಿಕೊಂಡು ಅನುಭವಿಸದಂತೆ ತಪ್ಪಿಸಿಕೊಳ್ಳಬಹುದು. ಆದರೆ ದೈವಸಂಬಂಧ ವಾದ ಪಾಪಕ್ಕೆ ದೈವಜ್ಞಾನದ ಮೂಲಕವೂ ಸಹ ಕ್ಷಮಾಪಣೆ ಇಲ್ಲ. ಮನುಷ್ಯರಿಂದ ಹುಟ್ಟಿದ ಸಾಧಾರಣ ಮನುಷ್ಯನಿಗೆ ವಿರೋಧವಾಗಿ ಮಾತನಾಡಿದರೂ ವಿರುದ್ಧವಾದ ಕೆಲಸಗಳು ಮಾಡಿದರೂ ಬರುವ ಪಾಪಕ್ಕೆ ಕ್ಷಮಾಪಣೆ ಇದೆ. ಆದರೆ ದೇವರಿಂದ ಹುಟ್ಟಿದ ಭಗವಂತನಿಗೆ ವಿರೋಧವಾಗಿ ಮಾತನಾಡುವವನಿಗೆ ಬರುವ ಪಾಪ ದೈವಜ್ಞಾನ ಎನ್ನುವ ಅಗ್ನಿಯಿಂದಲೂ ಸಹ ಇದೆ. ಎಂದರೆ ಆ ಪಾಪವನ್ನು ಇತ್ತ ಭಗವಂತನಾಗಲಿ, ಅತ್ತ ದೇವರಾಗಲಿ ಕ್ಷಮಿಸುವುದಿಲ್ಲ. ದೇವರಿಂದ ದೇವರ ಅಂಶವಾಗಿ ಬಂದಿರುವ ಭಗವಂತನಿಗೆ ವಿರುದ್ಧವಾಗಿ ಮಾಡಿದ ಪಾಪ ಭಯಂಕರವಾದುದು. ಸಾಧಾರಣ ಮನುಷ್ಯರಿಗೆ ವಿರುದ್ಧವಾಗಿ ಮಾಡಿದ ಪಾಪ ಒಂದು ಜನ್ಮದಲ್ಲಿ ಅನುಭವಿಸಿದರೆ ಹೋಗುತ್ತದೆ. ಇಲ್ಲದಿದ್ದರೆ ದೇವರನ್ನು ಆರಾಧಿಸಿ ದೇವರ ಜ್ಞಾನದ ಪ್ರಕಾರ ನಡೆದುಕೊಂಡರೆ ಬರುವ ಜ್ಞಾನಾಗ್ನಿಯಿಂದ ಸುಟ್ಟುಹೋಗುತ್ತದೆ. ಆದರೆ ಭಗವಂತನಿಗೆ ವಿರುದ್ಧವಾಗಿ ಮಾಡಿದ ಪಾಪ ಒಂದು ಜನ್ಮದಲ್ಲಿ ಅನುಭವಿಸಿದರೂ ಮುಗಿದುಹೋಗುವುದಿಲ್ಲ, ದೈವ ಜ್ಞಾನದಿಂದಲೂ ಸಹ ಸುಟ್ಟುಹೋಗುವುದಿಲ್ಲ. ಆ ಪಾಪ ಬಹಳ ಭಯಂಕರವಾದುದು ಏಕೆಂದರೆ! ಅದು ಒಂದು ಜನ್ಮದಲ್ಲಿ ಮುಗಿದುಹೋಗದೆ, ನಡೆಯುತ್ತಿರುವ ಈ ಯುಗದಲ್ಲಿ ಎಷ್ಟೋ ಜನ್ಮಗಳಲ್ಲಿ ಅನುಭವಿಸಬೇಕಾಗಿರುತ್ತದೆ. ಈ ಯುಗದಲ್ಲಿಯೇ ಅಲ್ಲದೆ ಬರುವಂತಹ ಯುಗದಲ್ಲಿಯೂ ಸಹ ಅನುಭವಿಸಬೇಕಾಗಿರುತ್ತದೆ. ಭಗವಂತನಿಗೆ ವಿರುದ್ಧವಾಗಿ ಸಂಪಾದಿಸಿಕೊಂಡ ಪಾಪ ಎರಡು ಯುಗಗಳ ಪರ್ಯಂತವು ಅನುಭವಿಸಬೇಕಾಗಿರುತ್ತದೆ.

ನೋಡಿದ್ದೀರಾ! ಮನುಷ್ಯರ ಬಗ್ಗೆ ಮಾಡುವ ಪಾಪಕ್ಕಿಂತ ಭಗವಂತನ ಬಗ್ಗೆ ಮಾಡುವ ಪಾಪ ಎಷ್ಟು ಭಯಂಕರವಾದುದೊ! ಎಷ್ಟು ದೊಡ್ಡದೊ!! ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! ಮನುಷ್ಯನ

ವಿರ್ಯದಿಂದ ಹುಟ್ಟಿದ ಮನುಷ್ಯನಾದರೂ, ದೇವರ ಅಂಶದಿಂದ ಹುಟ್ಟಿದ ಭಗವಂತನಾದರೂ ಇಬ್ಬರೂ ಮನುಷ್ಯರೇ ಅಲ್ಲವೆ! ಅಂತಹದರಲ್ಲಿ ಸಾಧಾರಣ ಮನುಷ್ಯನಿಂದ ಬರುವ ಪಾಪ ಎಷ್ಟೋ, ಭಗವಂತನಿಂದ ಬರುವ ಪಾಪವೂ ಸಹ ಅಷ್ಟೇ ಪಾಪ ಬರಬೇಕು ಅಲ್ಲವೆ! ಹಾಗಲ್ಲದೆ ಏಕೆ ಹೆಚ್ಚಿನಪಾಪ ಬರುತ್ತಿದೆ? ಈ ಪ್ರಶ್ನೆಗೆ ನಮ್ಮ ಉತ್ತರ ಏನೆಂದರೆ! ಮನುಷ್ಯನಿಂದ ಬಂದಿರುವ ಮನುಷ್ಯನಾಗಲಿ, ದೇವರಿಂದ ಬಂದಿರುವ ಭಗವಂತನಾಗಲಿ ಇಬ್ಬರು ಮಾನವರೂಪವನ್ನೇ ಹೊಂದಿದ್ದರೂ, ಸಾಧಾರಣ ಮನುಷ್ಯ ದೇವರ ಜ್ಞಾನವನ್ನು ತಿಳಿದುಕೊಳ್ಳ ಬಹುದಾಗಲಿ, ದೇವರ ಜ್ಞಾನವನ್ನು ತಿಳಿಸಲಾರನು. ಹಾಗೆಂದು ಜ್ಞಾನ ಹೇಳುವವರೆಲ್ಲರೂ ಭಗವಂತರು ಅಲ್ಲ. ಯಾರಿಗೂ ತಿಳಿಯದಂತೆ ಹೋದ ಧರ್ಮಗಳನ್ನು ನೂತನವಾಗಿ (ಹೊಸದಾಗಿ) ತಿಳಿಸುವವನು ಭಗವಂತನು. ಮನುಷ್ಯ ಕರ್ಮವನ್ನು ಸಂಪಾದಿಸಿಕೊಳ್ಳುತ್ತಿರುತ್ತಾನೆ. ಭಗವಂತನು ಯಾವ ಕರ್ಮವನ್ನು ತಗಲಿಸಿಕೊಳ್ಳದಂತೆ ಕೆಲಸ ಮಾಡುತ್ತಿರುತ್ತಾನೆ. ಮನುಷ್ಯನ ಕರ್ಮ ಅನುಭವಿಸುವುದಕ್ಕೋಸ್ಕರ ಹುಟ್ಟಿದ್ದಾನೆ. ಭಗವಂತನು ದೈವಧರ್ಮಗಳನ್ನು ತಿಳಿಸುವುದಕ್ಕೆ ಹುಟ್ಟಿದ್ದಾನೆ. ಅಷ್ಟೇಅಲ್ಲದೆ **"ಮಮಭೂತ ಮಹೇಶ್ವರಮ್"** ಎನ್ನುವಂತೆ ಆತನು ಎಲ್ಲರಿಗೂ ಅಧಿಪತಿ. ಅಷ್ಟು ದೊಡ್ಡವನನ್ನು, ಎಷ್ಟೋ ಉತ್ತಮ ಜ್ಞಾನ ತಿಳಿಸುವ ಭಗವಂತನಿಂದ ಬರುವ ಪಾಪ ಎಷ್ಟೋ ದೊಡ್ಡದಾಗಿಯೇ ಇರುತ್ತದೆ. ಭಗವಂತನು **"ಮಾನುಷೀಮ್ ತನುಮಾಶ್ರೀತಮ್"** ಎನ್ನುವಂತೆ ಮನುಷ್ಯ ಶರೀರ ಧರಿಸಿ ಇದ್ದರೂ ಆತನು ಯಾವ ವಿಧವಾಗಿ ನೋಡಿದರು ಮಾನವನಿಗೆ ಸಮಾನ ಅಲ್ಲ. ಆದ್ದರಿಂದ ಮನುಷ್ಯನಿಗೆ ಕೆಟ್ಟದು ಮಾಡಿದರೆ ಬರುವ ಪಾಪಕ್ಕಿಂತ ಭಗವಂತನಿಗೆ ಕೆಟ್ಟದು ಮಾಡಿದರೆ ಬರುವ ಪಾಪ ದೊಡ್ಡದೆಂದು ತಿಳಿಯುತ್ತಿದೆ.

ಇಲ್ಲಿ ಮತ್ತೊಂದು ಪ್ರಶ್ನೆಯನ್ನು ಕೇಳುವುದಕ್ಕೆ ಅವಕಾಶವಿದೆ. "ಸಾಧಾರಣ ಮನುಷ್ಯ ಕರ್ಮವನ್ನು ಅನುಭವಿಸುವುದಕ್ಕೋಸ್ಕರ ಹುಟ್ಟಿದ್ದಾನೆ ಎಂದಿದ್ದೀರ. ಹುಟ್ಟಿದ ನಂತರ ಕರ್ಮವನ್ನು ಸಂಪಾದಿಸಿಕೊಳ್ಳುತ್ತಾನೆ ಎಂದು ಸಹ ಹೇಳಿದ್ದೀರ.

ಭಗವಂತನೇನೊ ಕರ್ಮ ಅಂಟದಂತೆ ಕಾರ್ಯಗಳನ್ನು ಮಾಡುತ್ತಾನೆಂದು ಹೇಳಿದ್ದೀರ. ನೀವು ಹೇಳುವ ಧರ್ಮ ಸೂತ್ರಗಳ ಪ್ರಕಾರ ಕಾಣಿಸುವ ಯಾವ ಮನುಷ್ಯನಾದರೂ, ಯಾವ ಕಾರ್ಯವನ್ನು ಮಾಡುತ್ತಿದ್ದರೂ, ಆ ಕಾರ್ಯಕ್ಕೆ ಕಾಣಿಸದ ಕರ್ಮ ಕಾರಣವಾಗಿ ಇದೆಯೆಂದು ಹೇಳಿದ್ದೀರ. ಅಂತಹದರಲ್ಲಿ ಭಗವಂತನು ಸಹ ಕಾಣಿಸುವ ಮನುಷ್ಯನೇ! ಆತನೂ ಸಹ ಎಷ್ಟೋ ಕಾರ್ಯಗಳನ್ನು ಮಾಡುತ್ತಿರುವನು! ಆತನು ಮಾಡುವ ಕೆಲಸಗಳಿಗೂ ಕೂಡ ಪ್ರಾರಬ್ಧಕರ್ಮ ಕಾರಣವಾಗಿ ಇರುತ್ತದೆ! ಅತನು ಕರ್ಮ ಅಂಟದಂತೆ ಕೆಲಸ ಮಾಡದಿರುವಾಗ, ಆತನಿಗೆ ಪ್ರಾರಬ್ಧಕರ್ಮವೇ ಇರುವುದಿಲ್ಲ. ಹಾಗೆ ಕರ್ಮ ಇಲ್ಲದಿರುವಾಗ ಆತನು ಕಾರ್ಯಗಳನ್ನು ಹೇಗೆ ಮಾಡುತ್ತಿದ್ದಾನೆ. ಆತನು ಮಾಡುವ ಕಾರ್ಯಕ್ಕೆ ಕಾರಣ ಕರ್ಮ ಅಲ್ಲವೆ!" ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ದೇವರು ಹೇಳಿದ ಸೂತ್ರದ ಪ್ರಕಾರ ಭೂಮಿಮೇಲೆ ಆಕಾರವಿರುವ ಯಾವ ಮನುಷ್ಯನಾದರೂ ಕದಲಿ ಕೆಲಸಮಾಡಬೇಕೆಂದರೆ ಅದಕ್ಕೆ ಕಾರಣವಾದ ಪ್ರಾರಬ್ಧಕರ್ಮ ಇರಲೇಬೇಕು. ಈ ಸೂತ್ರ ಆಕಾರವಿರುವ ಭಗವಂತನಿಗೂ ಸಹ ಅನ್ವಯಿಸುತ್ತದೆ. ಕರ್ಮವಿಲ್ಲದೆ ಯಾರೂ ಶರೀರ ಧರಿಸಿ ಹುಟ್ಟುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಶರೀರವಿರುವ ಪ್ರತಿ ಮನುಷ್ಯ ಕರ್ಮದಿಂದಲೇ ಹುಟ್ಟಬೇಕಾಗಿ ಬರುತ್ತದೆ. ದೇವರ ಅಂಶವಾದ ಭಗವಂತನು ಸಹ ಭೂಮಿಮೇಲೆ ಶರೀರದಿಂದ ಇದ್ದಾನೆ. ಆದ್ದರಿಂದ ಆತನು ಸಹ ಪ್ರಾರಬ್ಧಕರ್ಮದಿಂದಲೇ ಬಂದಿರುತ್ತಾನೆ. ಸಾಧಾರಣ ಮನುಷ್ಯನಾದರೂ, ಭಗವಂತನಾದರೂ ಯಾರಾದರೂ ಪ್ರಾರಬ್ಧಕರ್ಮವನ್ನನುಸರಿಸಿ ಕಾರ್ಯಗಳನ್ನು ಮಾಡಬೇಕಾಗಿದ್ದೆ. ಇನ್ನೊಂದು ಮುಖ್ಯ ವಿಷಯವೇನೆಂದರೆ! ದೈವ ಸಂಬಂಧ ಅಲ್ಲದೆ, ಪ್ರಪಂಚ ಸಂಬಂಧವಾದ ಯಾವ ಕಾರ್ಯಕ್ಕಾಗಲಿ ಕರ್ಮ ಕಾರಣ ವಾಗಿರುತ್ತದೆ. ದೈವಜ್ಞಾನ ಕರ್ಮವನ್ನು ನಾಶ ಮಾಡುವುದು, ಆದಕಾರಣ ದೈವಕಾರ್ಯಗಳಿಗಾಗಲಿ, ದೈವಜ್ಞಾನಕ್ಕಾಗಲಿ ಪ್ರಾರಬ್ಧಕರ್ಮ ಕಾರಣವಾಗಿರುತ್ತದೆ. ದೈವಜ್ಞಾನ ಕರ್ಮಕ್ಕೆ ಅತೀತವಾದುದು. ಆದ್ದರಿಂದ ದೇವರಿಗೆ ಸಂಬಂಧಿಸಿದ ಯಾವ ಕಾರ್ಯಕ್ಕು ಕರ್ಮ ಇರುವುದಿಲ್ಲ. ಅದೇ ಪ್ರಪಂಚ ಸಂಬಂಧವಾದ

ಅತಿಚಿಕ್ಕ ಕೆಲಸಕ್ಕೂ ಸಹ ಕರ್ಮ ಕಾರಣವಾಗಿರುತ್ತದೆ. ದೇವರ ಅಂಶ ಭೂಮಿಮೇಲೆ ಭಗವಂತನಾಗಿ ಬಂದಾಗ ಭಗವಂತನು ಸಮಯವನ್ನು, ಸಂದರ್ಭವನ್ನು ನೋಡಿ ದೈವಧರ್ಮಗಳನ್ನು ತಿಳಿಸುವ ಕೆಲಸಗಳನ್ನು ಮಾಡುತ್ತಾನೆ. ಉಳಿದ ಜೀವಿತಕಾಲದಲ್ಲಿ ಎಲ್ಲರಂತೆ ಪ್ರಪಂಚ ಕಾರ್ಯಗಳನ್ನೇ ಮಾಡುತ್ತಿರುತ್ತಾನೆ. ಪ್ರಪಂಚ ಕಾರ್ಯಗಳಿಗೆ ಕರ್ಮ ಇರಬೇಕು. ಆದ್ದರಿಂದ ಭಗವಂತನಿಗೂ ಸಹ ಕರ್ಮ ಇದೆಯೆಂದು ಹೇಳಬಹುದು. ಆ ಕರ್ಮಪ್ರಕಾರವೇ ಆತನೂ ಸಹ ಪ್ರಪಂಚ ಕಾರ್ಯಗಳನ್ನು ಮಾಡುತ್ತಿದ್ದಾನೆ. ಭಗವಂತನು ದೇವರ ಧರ್ಮಗಳನ್ನು ತಿಳಿಸುವುದಕ್ಕೋಸ್ಕರ ಬಂದರೂ ಜೀವಿತಕಾಲದಲ್ಲಿ ಹೆಚ್ಚಾಗಿ ಎಲ್ಲರಂತೆ ಪ್ರಪಂಚ ಕಾರ್ಯಗಳೇ ಮಾಡಬೇಕಾಗಿರುತ್ತದೆ. ದೈವಜ್ಞಾನವನ್ನು ಸಂದರ್ಭ ಬಂದಾಗ ಮಾತ್ರವೇ ಹೇಳುತ್ತಾನೆ. ಉದಾಹರಣೆಗೆ ಶ್ರೀಕೃಷ್ಣನನ್ನು ತೆಗೆದುಕೊಳ್ಳೋಣ. ಕೃಷ್ಣನು ಸಾಧಾರಣ ವ್ಯಕ್ತಿಯಾಗಿಯೇ ಜೀವಿಸಿದ್ದಾನೆ. ಜೀವನದಲ್ಲಿ ಒಂದು ಸಲ 90 ವರ್ಷಗಳ ವಯಸ್ಸಿನಲ್ಲಿ ಅದು ಯುದ್ಧ ಪ್ರಾರಂಭ ಸಮಯದಲ್ಲಿ ಜ್ಞಾನವನ್ನು ಹೇಳಿದ್ದಾನೆ. ಆ ಒಂದು ಸಮಯ ಮಾತ್ರ ಕರ್ಮಕ್ಕೆ ಅತೀತವಾದುದು. ಉಳಿದ ಜೀವಿತಕಾಲವೆಲ್ಲವೂ ಕರ್ಮಾನುಸಾರ ನಡೆದಿದೆ ಯೆಂದೇ ಹೇಳಬಹುದು. ಈ ಜನ್ಮದಲ್ಲಿ ಕರ್ಮ ಸಂಪಾದಿಸಿಕೊಂಡು ಅವನು ಅದೇ ಸೂತ್ರದ ಪ್ರಕಾರ ಹಿಂದಿನ ಜನ್ಮದಲ್ಲಿಯೂ ಸಹ ಕರ್ಮ ಸಂಪಾದಿಸಿಕೊಂಡು ಇರುತ್ತಾನೆಂದು ಹೇಳಬಹುದು. ಹಿಂದಿನ ಜನ್ಮದಲ್ಲಿ ಕರ್ಮ ಇಲ್ಲದವನಿಗೆ ಈ ಜನ್ಮದಲ್ಲಿ ಅನುಭವಿಸುವುದಕ್ಕೆ ಕರ್ಮ ಇರುವುದಿಲ್ಲ. ಏಕೆಂದರೆ ಹಿಂದಿನ ಜನ್ಮ ಕರ್ಮವೇ ಈ ಜನ್ಮ ಕೆಲಸಗಳು ಮಾಡುವುದಕ್ಕೆ ಕಾರಣವಾದ ಪ್ರಾರಬ್ಧಕರ್ಮ ಆಗುತ್ತದೆ. ಹಿಂದಿನ ಜನ್ಮದಲ್ಲಿ ಕರ್ಮ ಸಂಪಾದನೆ ಇಲ್ಲದವನಿಗೆ ಈ ಜನ್ಮದಲ್ಲಿ ಕರ್ಮ ಅನುಭವ ಸಹ ಇರುವುದಿಲ್ಲ.

ಅಂತಹದರಲ್ಲಿ ಕೃಷ್ಣನು ಭೂಮಿಮೇಲೆ ಅನೇಕ ಕಾರ್ಯಗಳನ್ನು ಮಾಡುವುದಕ್ಕೆ ಕಾರಣವಾದ ಕರ್ಮ ಇಲ್ಲದಿರುವಾಗ, ಆ ಕೆಲಸಗಳನ್ನು ಹೇಗೆ ಮಾಡಿದ್ದಾನೆ? ಎನ್ನುವ ಪ್ರಶ್ನೆ ಬರುತ್ತದೆ. ಕೆಲಸ ನಡೆಯಬೇಕೆಂದರೆ ಕರ್ಮ ಇರಬೇಕು. ಆದರೆ ಕೃಷ್ಣನಿಗೆ ಹಿಂದಿನ ಕರ್ಮ ಇಲ್ಲ. ಆದರೆ ಆತನು ಭೂಮಿಮೇಲೆ

ಕೆಲಸಗಳು ಮಾಡುವುದಕ್ಕೆ ಕಾರಣವಾದ ಕರ್ಮ ಎಲ್ಲಿದೆ? ಎನ್ನುವ ಪ್ರಶ್ನೆಗೆ ಉತ್ತರ ಒಂದೇ ಇದೆ! ಕರ್ಮ ಇಲ್ಲದ ಕೃಷ್ಣನು, ಕರ್ಮ ಇರುವ ಕೃಷ್ಣನಾಗಿ ಬಂದಿದ್ದಾನೆ. ಆತನು ಹುಟ್ಟಿದಾಗಲೇ ಆ ಜನ್ಮಕ್ಕೆ ಬೇಕಾದ ಕರ್ಮವನ್ನು ಆತನೇ ಸ್ವತಃವಾಗಿ ರಚಿಸಿಕೊಂಡು ಬಂದಿದ್ದಾನೆ. ಆದ್ದರಿಂದ ಕೃಷ್ಣನು ಮಾಡಿದ ಕಾರ್ಯಗಳು ಆತನು ಮಾಡಿಕೊಂಡ ಕರ್ಮದಿಂದ ನಡೆದಿರುವವು ಅಲ್ಲ. ಆ ಕಾರ್ಯಗಳೆಲ್ಲ ಆತನು ಬರೆದುಕೊಂಡ ಕರ್ಮಗಳೆಂದು ತಿಳಿಯುತ್ತಿದೆ. ಈ ವಿಷಯವಾಗಿ ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ 6ನೇ ಶ್ಲೋಕದಲ್ಲಿ ಈ ವಿಧವಾಗಿ ಇದೆ.

**ಶ್ಲೋ॥ ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾ ಮೀಶ್ವರೋಽಪಿಸನ್।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾ ಮ್ಯಾತ್ಮ ಮಾಯಯಾ॥**

**ಭಾವಾರ್ಥ:–** ಹುಟ್ಟುವಿಕೆಯಾಗಲಿ, ನಾಶವಾಗಲಿ ಇಲ್ಲದವನು ಮತ್ತು ಸರ್ವ ಜೀವರಾಶಿಗಳಿಗು ಈಶ್ವರನಾದ ನಾನು, ನನ್ನ ಪ್ರಕೃತಿಯನ್ನು ಅಧಿಷ್ಠಿಸಿ ಗುಣಗಳನ್ನು ಏರ್ಪಡಿಸಿಕೊಂಡು ಕರ್ಮವನ್ನು ಕಲ್ಪಿಸಿಕೊಂಡು ಜೀವಿಯಂತೆ ಹುಟ್ಟುತ್ತಿದ್ದೇನೆ.

ವಿವರವಾಗಿ ಹೇಳಿಕೊಂಡರೆ ಮೇಲಿನ ಶ್ಲೋಕದಲ್ಲಿ ಸರ್ವ ಜೀವರಾಶಿ ಗಳಿಗು ಈಶ್ವರನು, ದೇವರಾದ ನಾನು ಪ್ರಕೃತಿಯಿಂದ ಪಂಚಭೂತ ಶರೀರವನ್ನು ತಯಾರು ಮಾಡಿಕೊಂಡು, ಮಾಯೆಯಿಂದ ಗುಣಕರ್ಮಗಳನ್ನು ಏರ್ಪ ಡಿಸಿಕೊಂಡು ಹುಟ್ಟುತ್ತಿದ್ದೇನೆಂದು ಹೇಳಿದ್ದಾನೆ. ಈ ಶ್ಲೋಕದಲ್ಲಿ **"ಪ್ರಕೃತಿಂ ಸ್ವಾಮಧಿಷ್ಠಾಯ"** ಎಂದಾಗ ಪಂಚಭೂತ ಶರೀರವನ್ನು ಅಧಿಷ್ಠಿಸಿ ಎಂದು ತಿಳಿಯಬೇಕು. ಹಾಗೆಯೇ **"ಸಂಭವಾಮಿ ಆತ್ಮ ಮಾಯಯಾ"** ಎಂದಾಗ 'ಮಾಯೆ' ಎನ್ನುವ ಗುಣಗಳು ಅವುಗಳಿಂದ ಉಂಟಾಗುವ ಕರ್ಮವನ್ನು ನಿಯಮಿಸಿಕೊಂಡು ಎಂದು ತಿಳಿಯಬೇಕು.

ದೇವರಾದ ಪರಮಾತ್ಮ ಸರ್ವಜೀವಿಗಳಿಗೆ ಅಧಿಪತಿಯಾಗಿದ್ದು, ಸಾವುಹುಟ್ಟುಗಳು ಇಲ್ಲದವನಾಗಿದ್ದು, ತನ್ನ ಪ್ರಕೃತಿಯೊಂದಿಗೆ ಪ್ರತ್ಯೇಕವಾದ

ಶರೀರವನ್ನು ತಯಾರು ಮಾಡಿಕೊಂಡು, ತನ್ನ ಮಾಯೆಯಿಂದ ಗುಣಗಳನ್ನು ಅವುಗಳಿಗೆ ಅನುಬಂಧವಾದ ಕರ್ಮವನ್ನು ತಯಾರು ಮಾಡಿಕೊಂಡು, ಮನುಷ್ಯನಂತೆ ಹುಟ್ಟಿ, ಮನುಷ್ಯರಲ್ಲಿ ಪ್ರತ್ಯೇಕ ಮನುಷ್ಯನಾಗಿ ಭಗವಂತನಾಗಿ ಧರ್ಮಗಳನ್ನು ಪುನರುದ್ಧರಿಸಿ, ಪುನಃ ಎಲ್ಲಿಂದ ಬಂದಿದ್ದಾನೊ ಅಲ್ಲಿಗೆ ಹೋಗುತ್ತಿದ್ದಾನೆ. **ಇದರಿಂದ ದೇವರು ಭಗವಂತನಾಗಿ ಹುಟ್ಟಿ, ಮನುಷ್ಯನಾಗಿ ಜೀವಿಸಿದ್ದಾನೆಂದು ಹೇಳಬಹುದು. ಆದ್ದರಿಂದ ದೇವರು ಮನುಷ್ಯನಲ್ಲ. ಹಾಗೆಯೇ ಭಗವಂತನು ಮನುಷ್ಯನಾಗಿ ಮರಣಿಸಿ, ದೇವರಾಗಿ ಬದಲಾಗಿಹೋಗಿದ್ದಾನೆಂದು ಹೇಳಬಹುದು. ಆದಕಾರಣ ಭಗವಂತನು ಮನುಷ್ಯನಲ್ಲ. ಒಂದು ಮಾತಿನಲ್ಲಿ ಹೇಳಬೇಕೆಂದರೆ ದೇವರು ಭಗವಂತನಾಗಿ ಬಂದು, ಭಗವಂತನು ದೇವರಾಗಿ ಬದಲಾಗಿಹೋದರೂ, ನಮಗೆ ಕಾಣಿಸುವುದು ಮನುಷ್ಯ ಹುಟ್ಟಿ ಸ್ವಲ್ಪಕಾಲ ಇದ್ದು ಮರಣಿಸಿದಂತೆ ಇರುತ್ತದೆ.** ಆದ್ದರಿಂದ ಭೂಮಿಮೇಲೆ ಭಗವಂತನನ್ನು ಯಾರೂ ಸಾಧಾರಣವಾಗಿ ಗುರುತಿಸಲಾರರು. ದೇವರು ಭಗವಂತನಾಗಿ ಹುಟ್ಟಿ, ಮನುಷ್ಯನಂತೆ ಕೆಲಸಗಳು ಮಾಡುತ್ತಾ ಜೀವಿಸಿದ್ದಾನೆಂದು ಹೇಳುತ್ತಿದ್ದೇವೆ. ಈಗ ದೇವರು, ಭಗವಂತನು, ಮನುಷ್ಯ ಎನ್ನುವ ಮೂವರಲ್ಲಿ ದೇವರು ಕಾಣಿಸುವುದಿಲ್ಲ, ಭಗವಂತನು, ಮನುಷ್ಯ ಇಬ್ಬರು ಕಾಣಿಸುತ್ತಾರೆ. ಆದರೆ ಮನುಷ್ಯರಲ್ಲಿ ಭಗವಂತನು ಯಾರೊ ತಿಳಿಯುವುದಿಲ್ಲ, ಆದ್ದರಿಂದ ಭಗವಂತನು ಕಾಣಿಸಿದರೂ ಕಾಣಿಸದಂತೆ. ಮನುಷ್ಯ ಮಾತ್ರ ಯಾವಾಗಲೂ ಕಾಣಿಸುತ್ತಾನೆ. ಕಾಣಿಸುವ **ಮನುಷ್ಯನಿಗೆ ಮನನ ಇರುವವನು ಮನುಷ್ಯ ಎನ್ನುವ ನಿರ್ವಚನವಿದೆ. ಹಾಗೆಯೇ ದೇವರಿಗೆ ದೇವುಲಾಡಲ್ಪಡುವವನು (ಹುಡುಕಲ್ಪಡುವವನು) ದೇವರು ಎನ್ನುವ ನಿರ್ವಚನೆ ಇದೆ.** ಭಗವಂತನಿಗೆ ಏನು ನಿರ್ವಚನೆ ಇದೆಯೆಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರವಾಗಿ ದೇವರಿಗು, ಮನುಷ್ಯನಿಗು ನಿರ್ವಚನೆ ಇದ್ದಂತೆ ಭಗವಂತನಿಗು ಸಹ ನಿರ್ವಚನೆ ಇದೆಯೆಂದು ಹೇಳಬಹುದು. ಅದೇನೆಂದರೆ! **ಭಗದಿಂದ ಹುಟ್ಟಿದವನು ಭಗವಂತನು ಎನ್ನುವುದೇ ನಿರ್ವಚನೆ.** ಈ ನಮ್ಮ ಮಾತನ್ನು ಕೇಳಿದ ಕನ್ನಡ ಭಾಷಾ ಪಂಡಿತನು ಭಗವಂತನು ಎಂದರೆ ಭಗದಿಂದ ಹುಟ್ಟಿದವನು ಎನ್ನುವ ಅರ್ಥ ತಪ್ಪು ಎಂದಿದ್ದಾನೆ. ಹೇಗೆ

ತಪ್ಪು ಎಂದು ವಿವರಕೇಳಿದಾಗ! “ಬಲವಂತನು ಎಂದಾಗ ಬಲ ಇರುವವನೆಂದು ಅರ್ಥ ಅಲ್ಲವೆ! ಹಾಗೆಯೇ ಭಗವಂತನು ಎಂದಾಗ ಭಗ ಇರುವವನೆಂದು ಅರ್ಥ” ಎಂದಿದ್ದಾನೆ ಅದಕ್ಕೆ ತಕ್ಷಣ ನಾವು ಈ ವಿಧವಾಗಿ ಕೇಳಿದ್ದೇವೆ. ಹಿಂದಿ ಭಾಷೆಯಲ್ಲಿ “ದವಾಖಾನಾ” ಎನ್ನುವ ಪದದಲ್ಲಿ ‘ದವಾ’ ಎಂದರೆ ಔಷಧಿ ಎಂದು ‘ಖಾನಾ’ ಎಂದರೆ ತಿನ್ನುವುದು ಎಂದು ಅರ್ಥ. ಅದರ ಪೂರ್ತಿ ಅರ್ಥವನ್ನು ತೆಗೆದುಕೊಂಡು ನೋಡಿದರೆ ದವಾಖಾನಾ ಎಂದರೆ ಔಷಧಿಗಳನ್ನು ತಿನ್ನಿಸುವ ವೈದ್ಯಶಾಲ (ಆಸ್ಪತ್ರೆ) ಎಂದು ಅರ್ಥ. ಅದರ ಪ್ರಕಾರ “ಪಾಯಖಾನಾ” ಎಂಬ ಪದವನ್ನು ನೋಡಿದರೆ ಪಾಯ ಎಂದರೆ ಮಲ ಎಂದು ಖಾನಾ ಎಂದರೆ ತಿನ್ನುವುದೆಂದು, ಮಲವನ್ನು ತಿನ್ನಿಸುವುದು ಪಾಯಖಾನಾ ಅಥವಾ ಶೌಚಾಲಯ ಎಂದು ಕರೆಯಬೇಕು. ಆದರೆ ಹಾಗೆ ಕರೆಯುವುದಕ್ಕೆ ಸಾಧ್ಯವಿಲ್ಲ. ದವಾಖಾನಾ, ಪಾಯಖಾನಾ ಎನ್ನುವ ಎರಡು ಪದಗಳು ಒಂದೇ ವಿಧವಾಗಿದ್ದರೂ ಅವುಗಳ ಭಾವ ಬೇರೆ, ಅವುಗಳ ಅರ್ಥಗಳು ಬೇರೆ. ದವಾಖಾನಾ ಎಂದರೆ ಆಸ್ಪತ್ರೆ, ಪಾಯಖಾನಾ ಎಂದರೆ ಶೌಚಾಲಯ ಎಂದು ಬೇರೆ ಬೇರೆ ಭಾವಗಳ ಅರ್ಥಗಳಿರುವಂತೆ ಭಗವಂತನು, ಬಲವಂತನು ಎನ್ನುವ ಎರಡು ಪದಗಳು ಒಂದೇ ವಿಧವಾಗಿ ಇದ್ದರೂ ಅವುಗಳ ಭಾವಗಳು ಬೇರಬೇರೆಯಾಗಿವೆ. ಹಾಗಲ್ಲದೆ ಭಗವಂತನು ಎಂದರೆ ಭಗ ಹೊಂದಿದವನು ಎಂದರೆ ಪೂರ್ತಿ ತಪ್ಪಾಗುತ್ತದೆ. ಪುರುಷರಿಗೆ ಭಗ (ಗರ್ಭ) ಇರುವುದಿಲ್ಲ. ಆದ್ದರಿಂದ ಸಂದರ್ಭಾನುಸಾರ ಪಾಯಖಾನಾ, ದವಾಖಾನಾ ಬೇರೆಬೇರೆ ಭಾವಗಳಾದಂತೆ, ಬಲವಂತನು, ಭಗವಂತನು ಬೇರಬೇರೆ ಭಾವಗಳು ಹೊಂದಿವೆ.

ಭಗವಂತನು ಎಂದರೆ ಭಗದಿಂದ ಹುಟ್ಟಿದವನೆಂದು ಅರ್ಥ. ಹಾಗಿರುವಾಗ ನಾವೆಲ್ಲರೂ ತಾಯಿ ಭಗದಿಂದಲೇ ಹುಟ್ಟಿದ್ದೇವೆ. ಅದರಿಂದ ನಮ್ಮನ್ನೆಲ್ಲಾ ಭಗವಂತರೆಂದೇ ಕರೆಯಬೇಕಲ್ಲವೆ! ಎಂದು ಯಾರಾದರೂ ಪ್ರಶ್ನಿಸಬಹುದು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವುದು ಏನೆಂದರೆ! ದೇವರು ತನ್ನನ್ನು ತಾನು ಸೃಷ್ಟಿಸಿಕೊಂಡು ಮಾನವಶರೀರದಿಂದ ತಾಯಿಗರ್ಭ

ದಿಂದ ಹುಟ್ಟುತ್ತಿದ್ದಾನೆ. ಆದರೆ **ಪ್ರಪಂಚದಲ್ಲಿ ಯಾವ ಜೀವರಾಶಿಯಾಗಲಿ, ಯಾವ ಮನುಷ್ಯನಾಗಲಿ ತಾಯಿ ಗರ್ಭದಿಂದ ಹುಟ್ಟಲಿಲ್ಲ.** ಇದೇನು ಇಷ್ಟು ವಿರುದ್ಧವಾಗಿ, ಇಷ್ಟು ಕುರುಡರಂತೆ ಹೇಳುತ್ತಿದ್ದಾರೇ ಎಂದು ನೀವೆಂದುಕೊಳ್ಳಬಹುದು. ಯಾರೇನಂದುಕೊಂಡರೂ ನಾನು ಹೇಳುವುದು ನೂರಕ್ಕೆ ನೂರುಪಾಲು ನಿಜವೆ. ಒಬ್ಬ ಭಗವಂತನು ಹೊರತು ಉಳಿದವರೆಲ್ಲರೂ ಗರ್ಭದ ಹೊರಗೆ ಶರೀರವನ್ನು ಧರಿಸುತ್ತಿದ್ದಾರೆ. ಮನುಷ್ಯನ ಶರೀರ ತಾಯಿ ಗರ್ಭದಲ್ಲಿ ತಯಾರಾಗುತ್ತಿದೆ. ತಾಯಿಗರ್ಭದಲ್ಲಿ ತಯಾರಾದ ಶರೀರ ಗರ್ಭದಿಂದ ಹೊರಗೆ ಬಂದ ನಂತರ ಆ ಶರೀರದೊಳಗೆ ಜೀವಿಯು ಸೇರುತ್ತಿದ್ದಾನೆ. ಗರ್ಭದಿಂದ ಹೊರಬಿದ್ದ ಶರೀರದೊಳಗೆ ಜೀವಿಯು ಸೇರುತ್ತಿದ್ದಾನೆ. ಆದ್ದರಿಂದ ಯಾರೂ ಭಗದಿಂದ ಹುಟ್ಟಲಿಲ್ಲ. ಆದಕಾರಣ ಯಾರೂ ಭಗವಂತರು ಅಲ್ಲ.

ಸರ್ವವ್ಯಾಪಿ ಅದವನು ದೇವರು, ಒಂದುಕಡೆ ಮಾತ್ರ ಇರುವವನು ಮನುಷ್ಯ. ಮನುಷ್ಯ ಮರಣದಲ್ಲಿ ಒಂದುಕಡೆಯಿಂದ, ಜನ್ಮಿಸಬೇಕಾದ ಮತ್ತೊಂದು ಕಡೆಗೆ ಹೋಗಿ ಗರ್ಭದಿಂದ ಹೊರಗೆ ಬಂದ ಶಿಶುಶರೀರದಲ್ಲಿ ಸೇರುತ್ತಿದ್ದಾನೆ. ಹಾಗೆ ಜೀವಿಯು ಬಂದು ಸೇರಿ ಇರುವುದನ್ನು ಜನ್ಮ ಎನ್ನುತ್ತಿದ್ದೇವೆ. ಎಲ್ಲಿಂದಲೊ ಬಂದು ಶಿಶುಶರೀರದಲ್ಲಿ ಪ್ರವೇಶಿಸುವ ಮನುಷ್ಯನಿಗೆ ಜನ್ಮವಿದೆ, ಜಾತಕವು ಇದೆ. ಆದರೆ ಎಲ್ಲಕಡೆ ವ್ಯಾಪಿಸಿದ್ದು ಎಲ್ಲಿಂದಲೋ ಬಂದಿದ್ದಾನೆನ್ನುವುದಕ್ಕೆ ಸಾಧ್ಯವಿಲ್ಲದವನು ದೇವರು. ಅಂತಹ ದೇವರು ಅಥವಾ ದೇವರ ಅಂಶ ಭಗವಂತನಾಗಿ ಬದಲಾದಾಗ ತಾಯಿಗರ್ಭದಿಂದ ಸಜೀವವಾಗಿ ಹೊರಗೆ ಬರುತ್ತಾನೆ. ಹಾಗೆ ದೈವಾಂಶ ಭಗದಿಂದ ಸಜೀವವಾಗಿ ಬರುತ್ತಿದೆ. ಆದ್ದರಿಂದ ಅದನ್ನು ಜನ್ಮ ಎನ್ನಲಾರೆವು, ಅದಕ್ಕೆ ಜಾತಕ ಇಲ್ಲ. ಜನ್ಮಿಸಿದ ಮನುಷ್ಯನಿಗೆ ಜಾತಕ ಇರಬಹುದು. ಆದರೆ ಜನ್ಮವಿಲ್ಲದ ಭಗವಂತನಿಗೆ ಜಾತಕ ಇರುವುದಿಲ್ಲ. ಭಗವಂತನು ತನ್ನ ಕರ್ಮವನ್ನು ತಾನೇ ಸೃಷ್ಟಿಸಿಕೊಂಡು ಬರುತ್ತಾನೆ. ಆದ್ದರಿಂದ ಆತನ ಕರ್ಮವನ್ನು ಯಾವ ಜ್ಯೋತಿಷ್ಯವೂ ಹೇಳಲಿಲ್ಲ. ಮನುಷ್ಯನಿಗೆ ಆತನು ಮಾಡಿಕೊಂಡ ಕರ್ಮದ ಪ್ರಕಾರ ಶರೀರ ಲಭಿಸುತ್ತದೆ. ಭಗವಂತನಿಗೆ ಆತನು ಬರೆದುಕೊಂಡ ಕರ್ಮ ಪ್ರಕಾರ ಗರ್ಭದಲ್ಲಿಯೇ ಶರೀರವನ್ನು ಧರಿಸಬಹುದು.

**ಗರ್ಭದಲ್ಲಿಯೇ ಜೀವದಿಂದಿರುವವನು ಒಬ್ಬನೇ ಒಬ್ಬ ಭಗವಂತನು.** ಇಂದಿನ ಕಾಲದಲ್ಲಿ ವಿಜ್ಞಾನ ಎನ್ನುವ ಹೆಸರಿನಿಂದ ಜ್ಞಾನ ಅಲ್ಲದಿರುವುದನ್ನು ಕೆಲವರು ತಿಳಿದುಕೊಂಡು, ಭೌತಶಾಸ್ತ್ರವೊಂದರ ಪೂರ್ತಿ ಸಾರಾಂಶವನ್ನು ತಿಳಿಯದೆ, ತಮಗೆ ತಿಳಿದಿರುವುದೆ ಮಹತ್ವವಾದುದೆಂದುಕೊಂಡು ಪ್ರತಿ ಗರ್ಭದಲ್ಲಿನ ಶಿಶುವಿಗೆ ಪ್ರಾಣವಿದೆಯೆಂದು ಹೇಳುತ್ತಿದ್ದಾರೆ. ಗರ್ಭಸ್ಥ ಶಿಶುವಿಗೆ ಪ್ರಾಣ ಇದೆಯೆಂಬ ಮಾತನ್ನು ಡಾಕ್ಟರೆಲ್ಲರೂ ಹೇಳುತ್ತಿದ್ದಾರೆ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲವೆನ್ನುವ ಮಾತು ವೈದ್ಯರಂಗದಲ್ಲಿ ಪೂರ್ತಿ ವಿರುದ್ಧವೆಂದು ನಮಗೆ ತಿಳಿದರೂ ಅವರಿಗೆ ತಿಳಿದಿರುವುದು ಅಸತ್ಯವೆಂದು, ನಮಗೆ ತಿಳಿದಿರುವುದು ಸತ್ಯವಾದ್ದರಿಂದ ಗರ್ಭದಲ್ಲಿನ ಯಾವ ಶಿಶುವಿಗು ಪ್ರಾಣ ಇಲ್ಲವೆಂದು ಧೈರ್ಯವಾಗಿ ಹೇಳುತ್ತಿದ್ದೇವೆ. ಹಾಗೆಯೇ ದೈವಾಂಶ ಜನ್ಮಿಸುವಾಗ ಮಾತ್ರವೇ ಗರ್ಭದಲ್ಲಿನ ಶಿಶುವಿಗೆ ಜೀವವಿರುತ್ತದೆಂದು ಹೇಳುತ್ತಿದ್ದೇವೆ. ಹಾಗೆ ಜೀವದಿಂದ ಹುಟ್ಟಿದ ಶಿಶುವನ್ನೇ ಭಗವಂತನು ಎಂದು ಕರೆಯಬಹುದು.

ಜಗತ್ತಿನಲ್ಲಿ ಧರ್ಮಗಳಿಗೆ ಹಾನಿ ಏರ್ಪಟ್ಟು ಅಧರ್ಮಗಳು ವ್ಯಾಪಿಸಿದಾಗ, ತಿಳಿಯದ ಧರ್ಮಗಳನ್ನು ತಿಳಿಸುವುದಕ್ಕೆ ದೈವಾಂಶ ಭಗವಂತನಾಗಿ ಕೆಲವು ಸಾವಿರಾರುವರ್ಷಗಳಿಗೊ, ಅಥವಾ ಕೆಲವು ಲಕ್ಷಗಳ ವರ್ಷಗಳಿಗೊ ಭೂಮಿಮೇಲಕ್ಕೆ ಬರುತ್ತಾನೆ. ಹಾಗೆ ಬಂದಿರುವ ದೇವರ ಅಂಶವೇ ಶ್ರೀಕೃಷ್ಣನು. ಕೃಷ್ಣನು ಸಾಧಾರಣ ಮನುಷ್ಯ ಆದರೂ ಆತನ ಜನ್ಮದಲ್ಲಿ ಭಗವಂತನು. ಕೃಷ್ಣನು ಗರ್ಭದಲ್ಲಿಯೇ ಜೀವ ಹೊಂದಿದ್ದಾನೆನ್ನುವುದಕ್ಕೆ ಆಧಾರವೇನು ಎಂದು ಭವಿಷ್ಯತ್ತಿನಲ್ಲಿ ಯಾರೂ ಪ್ರಶ್ನಿಸದಂತೆ ಕೃಷ್ಣನು ತಾಯಿ ಗರ್ಭದಿಂದ ಎದುರು ಕಾಲುಗಳಿಂದ ಹುಟ್ಟಿದ್ದಾನೆ. ಹಾಗೆ ಕಾಲು ಹೊರಗೆ ಬರುತ್ತಲೇ, ಶರೀರವೆಲ್ಲ ಗರ್ಭದಲ್ಲಿರುವಾಗಲೇ ಆತನು ಗರ್ಭದಲ್ಲಿ ಸಜೀವವಾಗಿ ಇದ್ದಾನೆನ್ನುವುದಕ್ಕೆ ನಿದರ್ಶನವಾಗಿ ಕಾಲುಗಳನ್ನು ಕದಲಿಸಿದ್ದಾನೆ. ಆ ದಿನ ಆತನು ಎದುರು ಕಾಲುಗಳಿಂದ ಹುಟ್ಟಿ ಕಾಲುಗಳು ಅಲ್ಲಾಡಿಸುವುದರಿಂದ ಆತನು ಭಗವಂತನೆಂದು ಹೇಳುವುದಕ್ಕೆ ಪೂರ್ತಿ ಆಧಾರ ಏರ್ಪಟ್ಟಿದೆ. ಸಾಧಾರಣ ಮನುಷ್ಯನಿಗೆ ಗರ್ಭದ

ಹೊರಗೆ ಜನ್ಮ ಉಂಟಾಗುತ್ತಿದೆ ಎನ್ನುವ ಪೂರ್ತಿ ವಿವರವನ್ನು ನಾವು 1980ನೇ ವರ್ಷದಲ್ಲಿ ರಚಿಸಿದ **"ಜನನ ಮರಣ ಸಿದ್ಧಾಂತ"** ಎನ್ನುವ ಗ್ರಂಥದಲ್ಲಿ ಇದೆ.

ಕೃಷ್ಣನು ತಾಯಿಗರ್ಭದಿಂದ ಹೊರಗೆ ಬಂದಾಗ ಒಂದು ಕಾಲು ಎರಡುಸಲ, ಒಂದು ಕಾಲು ಒಂದು ಸಲ ಅಲ್ಲಾಡಿಸಿದ್ದಾನೆಂದು ನಾವು ಕೃಷ್ಣಾಷ್ಟಮಿ ಸಂದರ್ಭದಲ್ಲಿ ಉಪನ್ಯಾಸದಲ್ಲಿಯೂ ಸಹ ಹೇಳಿದ್ದೇವೆ. ಅಷ್ಟೇ ಅಲ್ಲದೆ ಆತನು ಹುಟ್ಟಿದಾಗ ನೀವು ನೋಡಿದ್ದೀರಾ? ಎಂದು ಯಾರಾದರೂ ಪ್ರಶ್ನಿಸಿದರೂ ಅದಕ್ಕೆ ಉತ್ತರವನ್ನು ಸಹ ಅಲ್ಲಿ ಹೇಳಿದ್ದೇವೆ. ಹೀಗೆ ಎಲ್ಲಾ ಆಧಾರಗಳಿಂದ ಕೃಷ್ಣನು ಭಗವಂತನೆಂದು ಹೇಳುತ್ತಿದ್ದೇವೆ. ಅಷ್ಟೇ ಅಲ್ಲದೆ ಇಲ್ಲಿಯವರೆಗು ಯಾರಿಗೂ ತಿಳಿಯದ ರಹಸ್ಯವನ್ನು ಸಹ ಈಗ ಹೇಳಿಕೊಳ್ಳೋಣ. ಕೃಷ್ಣನು ಹುಟ್ಟಿದಾಗ ಕಾಲುಗಳಿಂದ ಹುಟ್ಟಿದ್ದಾನೆಂದು ಭಾರತದಲ್ಲಿ ಬರೆದಿದ್ದಾರೆ. ಆದರೆ ಕಾಲು ಅಲ್ಲಾಡಿಸಿದ್ದಾನೆಂದು ಯಾರೂ ಹೇಳಲಿಲ್ಲ. ಆದರೆ ಕಾಲುಗಳು ಅಲ್ಲಾಡಿಸಿರುವುದು ನಿಜವೇ, ಆದರೂ ಆ ಮಾತು ಈದಿನ ದೊಡ್ಡ ರಹಸ್ಯ. ಅಂತಹದ್ದೇ ಭಾರತದಲ್ಲಿ ಸಹ ಹೇಳದ ರಹಸ್ಯ ಒಂದು ಇದೆ. ಅದೇನೆಂದರೆ! ಕೃಷ್ಣನು ಕಾಲುಗಳಿಂದ ಹುಟ್ಟಿದ್ದಾನೆ, ಆತನು ಎರಡು ಕಾಲುಗಳಿಗು ಎರಡು ಗೆರೆಗಳಿದ್ದವು (ಲೈನು). ಆ ವಿಧವಾಗಿ ಕಾಲುಗಳಿಗೆ ಗೆರೆಗಳಿರುವವರು ಭೂಮಿ ಮೇಲೆ ಬಹಳ ಅಪರೂಪವಾಗಿರುತ್ತಾರೆ. ಬಹುಶಃ ಕೋಟಿಗೊಬ್ಬರು ಸಹ ಇರುವುದಿಲ್ಲ ಎಂದುಕೊಳ್ಳುತ್ತೇವೆ. ಹಾಗೆ ಗೆರೆಗಳಿರುವ ಶರೀರ ಬಹಳ ಪ್ರತ್ಯೇಕವಾದುದು. ಆ ಪ್ರತ್ಯೇಕತೆ ಏನೆಂದರೆ! ಕಾಲುಗಳಿಗೆ ಗೆರೆಗಳಿರುವ ಮನುಷ್ಯನೊಂದಿಗೆ ಶತ್ರುತ್ವ ಮಾಡಿದರೂ, ಆತನಿಗೆ ವಿರುದ್ಧವಾಗಿ ಪ್ರವರ್ತಿಸಿದರೂ ಅಂತಹವನು ಆ ಜನ್ಮದಲ್ಲಿಯೇ ಕ್ಷೀಣಿಸಿ ಹೋಗುತ್ತಾನೆ. ಅಂತಹವನು ಯಾರೂ ಬದುಕಿ ಬಟ್ಟೆಕಟ್ಟಲಾರನು. ಹಾಗಾದರೆ ದೋಷ ಆ ಜನ್ಮದಲ್ಲಿಯೇ ಮುಗಿದುಹೋಗುತ್ತದೆ. ಆ ಜನ್ಮದಲ್ಲಿ ಏನು ಆಗದಂತೆ ಯಾರಾದರೂ ತಪ್ಪಿಸಿಕೊಂಡರೆ ನಂತರ ಕೆಲವು ಜನ್ಮಗಳವರೆಗು ಪಾಪವನ್ನು ಅನುಭವಿಸಬೇಕಾಗಿ ಬರುತ್ತದೆ. ಇದೆಲ್ಲ ನೀವೇ ಸೃಷ್ಟಿಸಿ ಹೇಳುತ್ತಿದ್ದೀರೆಂದು ತಿಳಿದುಕೊಳ್ಳಬೇಡಿ,

ಕೃಷ್ಣನ ಶರೀರದಲ್ಲಿ ಕಾಲುಗಳಿಗೆ ಗೆರೆಗಳಿರುವ ಮಾತು ನಿಜವೆ. ಆತನಿಗೆ ವಿರುದ್ಧವಾದವರು ಯಾರೂ ಉಳಿಯದಂತೆ ನಾಶವಾಗಿಹೋದ ಮಾತು ನಿಜವೆ. ಇದೆಲ್ಲ ನಿಮಗೆ ಹೊಸದಾಗಿ ಕಾಣಿಸಿದರೂ ಕೃಷ್ಣನ ಜನ್ಮದಲ್ಲಿ ನಡೆದ ಸತ್ಯವೇ.

ಪ್ರತ್ಯೇಕವಾದ ಶರೀರದೊಂದಿಗೆ ತಾಯಿಗರ್ಭದಿಂದ ಸಜೀವವಾಗಿ ಹುಟ್ಟಿದವನು ಕೃಷ್ಣನು. ಆದ್ದರಿಂದ ಆತನು ಭಗವಂತನು. ಕೃಷ್ಣನು ಭಗವಂತನಾದರೂ ಆ ವಿಷಯ ಯಾರಿಗೂ ತಿಳಿದಿಲ್ಲ. ಕೃಷ್ಣನು ಭಗವಂತನೆಂದು ಗುರುತಿಸುವುದಕ್ಕೆ ಆಧಾರವಾದ ದೈವಜ್ಞಾನವನ್ನು, ತನಗೆ 90 ವರ್ಷಗಳ ವಯಸ್ಸು ಬರುವವರೆಗು ಕೃಷ್ಣನು ಯಾರಿಗೂ ಹೇಳಿರಲಿಲ್ಲ. ಕೃಷ್ಣನಿಗೆ 90 ವರ್ಷಗಳ ವಯಸ್ಸಿನಲ್ಲಿ ಭಾರತಯುದ್ಧ ನಡೆದಿದೆ. ಆಗಲೇ ಆತನು ಭಗವದ್ಗೀತಾ ಜ್ಞಾನವನ್ನು ಹೇಳಿದ್ದಾನೆ. ಆಗ ಹೇಳಿದ "ಗೀತೆ" ವೊಂದರ ಆಧಾರದಿಂದ ಕೃಷ್ಣನು ಭಗವಂತನೆಂದು ಕೆಲವರು ಗುರುತಿಸುವುದಕ್ಕೆ ಸಾಧ್ಯವಾಗಿದೆ. ಇಲ್ಲಿ ಯಾರಿಗೂ ತಿಳಿಯದ ಮತ್ತೊಂದು ವಿಚಿತ್ರ ಇದೆ! ಅದೇನೆಂದರೆ! ಕೃಷ್ಣನು ಹುಟ್ಟುವಾಗ ಕಾಲುಗಳು ಅಲ್ಲಾಡಿಸಿರುವುದು, ಆತನ ಕಾಲುಗಳಿಗೆ ಗೆರೆಗಳಿರುವುದು, ಕೃಷ್ಣನು ಹುಟ್ಟಿನಿಂದಲೇ ಭಗವಂತನೆನ್ನುವುದು ಒಬ್ಬೇ ಒಬ್ಬ ಭೀಷ್ಮನಿಗೆ ಮಾತ್ರ ತಿಳಿದಿದೆ. ಆ ಕಾಲದಲ್ಲಿ ಭೀಷ್ಮನನ್ನು ಎಲ್ಲರೂ ಗೌರವಿಸಿದರೂ ಭೀಷ್ಮನು ಮಾತ್ರ ಕೃಷ್ಣನನ್ನು ಭಗವಂತನನ್ನಾಗಿ ಲೆಕ್ಕಿಸಿ ಗೌರವಿಸುತ್ತಿದ್ದನು. ಭೀಷ್ಮನು ಕೃಷ್ಣನನ್ನು ಭಗವಂತನನ್ನಾಗಿ ಗುರುತಿಸಿದ್ದಾನೆ, ಆದ್ದರಿಂದ ಭೀಷ್ಮನು ತನ್ನ ಅವಸಾನದಶೆಯಲ್ಲಿ ಕೃಷ್ಣನನ್ನು ಕೇಳಿ ಮೋಕ್ಷವನ್ನು ಹೊಂದಿದ್ದಾನೆ. ಈ ವಿಧವಾಗಿ ಆ ಕಾಲದಲ್ಲಾಗಲಿ, ಈ ಕಾಲದಲ್ಲಾಗಲಿ ನಮಗೆ ತಿಳಿದರೂ, ತಿಳಿಯದಿದ್ದರೂ ಕೃಷ್ಣನು ಭಗವಂತನೆ. ಕೃಷ್ಣನು ಭಗವಂತನೆ ಹೊರತು ದೇವರಲ್ಲ. ಕೃಷ್ಣನು ಭಗವದ್ಗೀತೆಯನ್ನು ಹೇಳಿದ ನಂತರ 36 ವರ್ಷಗಳು ಬದುಕಿದ್ದಾನೆ. ತನ್ನ 126 ವರ್ಷಗಳ ವಯಸ್ಸಿನಲ್ಲಿ ಕೃಷ್ಣನು ಮರಣಿಸಿದ್ದಾನೆ. ಹುಟ್ಟುವುದಕ್ಕಿಂತ ಮೊದಲು ಕೃಷ್ಣನು ದೇವರು, ಹುಟ್ಟಿದ ನಂತರ ಭಗವಂತನು. 126 ವರ್ಷಗಳು ಜೀವಿಸಿ ಮರಣಿಸಿದ ನಂತರ ಪುನಃ ದೇವರಾಗಿ ಬದಲಾಗಿಹೋಗಿದ್ದಾನೆ. ಈ ವಿಧವಾಗಿ ಕೃಷ್ಣನು ಬದುಕಿರುವಾಗ

ಭಗವಂತನು, ಮರಣಿಸಿದ ನಂತರ ದೇವರು. ಬದುಕಿರುವ ಭಗವಂತನನ್ನು ದೇವರು ಎಂದು ಕರೆಯಬಾರದು. ಹಾಗೆಯೇ ಮರಣಿಸಿದ ನಂತರ ಭಗವಂತನು ಎನ್ನಬಾರದು. ಈ ವಿವರವೆಲ್ಲವನ್ನು ನೋಡಿದರೆ ಕೃಷ್ಣನು ಭಗವಂತನೆಂದು, ಭಗವಂತನಾದ ಕೃಷ್ಣನು ಪುನಃ ದೇವರಾಗಿ ಬದಲಾಗಿಹೋಗಿದ್ದಾನೆಂದು ತಿಳಿಯುತ್ತಿದೆ. ಆದ್ದರಿಂದ ದೇವರಿಗೂ ಭಗವಂತನಿಗೂ ಎಷ್ಟೋ ವ್ಯತ್ಯಾಸ ಇದೆಯೆಂದು ತಿಳಿಯುತ್ತಿದೆ. ವ್ಯತ್ಯಾಸ ತಿಳಿಯದಂತೆ ಯಾರಾದರೂ ಮಾತ ನಾಡಿದರೆ SP ನನ್ನು SI ಎಂದಂತೆ, SI ನನ್ನು SP ಎಂದು ಕರೆದಂತಿರುತ್ತದೆ.

# ಕೃಷ್ಣನು ಸುಂದರಗಾರನಾ?

ಕೃಷ್ಣನ ಜನ್ಮ ತಂದೆ ವೀರ್ಯಕಣದಿಂದ ಉಂಟಾಗಿರುವುದು ಅಲ್ಲ. ಪ್ರತಿ ಮನುಷ್ಯ ಹುಟ್ಟುವುದಕ್ಕೆ ಆತನ ಭೌತಿಕ ತಂದೆಯೊಂದರ ವೀರ್ಯಕಣ ಅಗತ್ಯವಾದರೆ, ಭಗವಂತನು ಹುಟ್ಟುವುದಕ್ಕೆ ಭೌತಿಕ ತಂದೆ ಅಗತ್ಯವೇ ಇಲ್ಲ. ಸಾಧಾರಣ ಮನುಷ್ಯನ ಹುಟ್ಟುವಿಕೆಯಲ್ಲಿ ತಂದೆ ವೀರ್ಯಕಣ ತಾಯಿ ರಜೋಕಣದೊಂದಿಗೆ ಸೇರಿ ರಜೋಕಣ, ವೀರ್ಯಕಣ ಬದಲಾವಣೆ ಹೊಂದುತ್ತಾ ಗರ್ಭದಲ್ಲಿ ಶಿಶುಶರೀರ ತಯಾರಾಗುತ್ತಿದೆ. ವೀರ್ಯ, ರಜೋಕಣ ಸೇರುವಿಕೆಯಿಂದ ತಯಾರಾದ ಶರೀರ ಭೌತಿಕ ತಾಯಿ, ತಂದೆ ಹೋಲಿಕೆಗಳು ಹೊಂದಿರುತ್ತಾನೆ. ಆದರೆ ಭಗವಂತನ ಶರೀರ ದೇವರ ಅಂಶದಿಂದ ಹುಟ್ಟಿರುವುದು ಆದ್ದರಿಂದ ಆ ಶರೀರಕ್ಕೆ ತಂದೆ ಹೋಲಿಕೆಗಳಿರುತ್ತವೆಂಬ ನಂಬಿಕೆ ಇಲ್ಲ. ಸ್ವಲ್ಪಮಟ್ಟಿಗೆ ತಾಯಿ ಹೋಲಿಕೆಗಳಿರಬಹುದು. ಕೃಷ್ಣನ ವಿಷಯಕ್ಕೆ ಬಂದರೆ ಆತನ ಭೌತಿಕ ತಂದೆತಾಯಿಯರಾದ ದೇವಕಿ, ವಸುದೇವರ ಹೋಲಿಕೆಗಳು ಕೃಷ್ಣನಿಗೆ ಸ್ವಲ್ಪವೂ ಇಲ್ಲ. ಅಷ್ಟೇ ಅಲ್ಲದೆ ದೇವಕಿ, ವಸುದೇವರು ಇಬ್ಬರು ಬಿಳಿ ಬಣ್ಣ ಶರೀರ ಛಾಯೆ ಹೊಂದಿರುವಾಗ, ಕೃಷ್ಣನು ಕಪ್ಪನೆ ಛಹರೆಯಿಂದ ಹುಟ್ಟಿದ್ದಾನೆ. ಉತ್ತರ ಭಾರತದೇಶದಲ್ಲಿ ಕಪ್ಪಗೆ ಹುಟ್ಟುವವರು ಬಹಳ ಅಪರೂಪವಾಗಿ ಇರುತ್ತಾರೆ. ಆದರೆ ಉತ್ತರಪ್ರದೇಶ ರಾಜ್ಯದಲ್ಲಿರುವ ಮಧುರ ಪಟ್ಟಣದಲ್ಲಿ ಹುಟ್ಟಿದ ಕೃಷ್ಣ

ಕಪ್ಪಗೆ ಹುಟ್ಟುವುದು ಒಂದು ವಿಚಿತ್ರವೇಯೆಂದು ಹೇಳಬಹುದು. ತಾಯಿ ತಂದೆಯರು ಬೆಳ್ಳಗೆ ಇರುವಾಗ ಅವರ ಮಗನಾದ ಕೃಷ್ಣನು ಕಪ್ಪುಬಣ್ಣದಿಂದ ಹುಟ್ಟುವುದು ವಿಚಿತ್ರವೇ ಅಲ್ಲವೆ! ಕೃಷ್ಣನ ಶರೀರವಾಗಲಿ, ಆ ಶರೀರಕ್ಕೆ ಕಾರಣವಾದ ಕರ್ಮವಾಗಲಿ, ದೇವರ ಅಂಶದಿಂದ ತಯಾರಾಗಿರುವವೇ ಎಂದು ಹೇಳಿದರೂ, ಅದರಲ್ಲಿಯೂ ಸಹ ಒಂದು ರಹಸ್ಯ ಇದೆ. ಅದೇನೆಂದರೆ ತಾಯಿಯಾದ ದೇವಕೀದೇವಿ ಗರ್ಭದಲ್ಲಿ ಕೃಷ್ಣನೊಂದರ ಶರೀರ ತಯಾರಾಗುವುದಕ್ಕೆ ಮೊದಲಾದಾಗ ಆ ಶರೀರದಲ್ಲಿ ಆ ಸಮಯದಿಂದಲೇ ಕೃಷ್ಣನು ಇದ್ದಾನೆ. ಆಗಿನಿಂದ ಶರೀರದಲ್ಲಿರುವ ಕೃಷ್ಣನು ತನ್ನ ಶರೀರ ಹೇಗೆ ಇರಬೇಕೊ, ಆ ಶರೀರದಿಂದ ಯಾವಯಾವ ಕರ್ಮಗಳನ್ನು ಆಚರಿಸಬೇಕೊ, ಅವುಗಳನ್ನು ತಾನೇ ಸ್ವತಃವಾಗಿ ನಿರ್ಣಯಿಸಿಕೊಂಡು ಹಾಗೆಯೇ ಶರೀರವನ್ನು ತಯಾರು ಮಾಡಿಕೊಂಡಿದ್ದಾನೆ. ಆ ಶರೀರದಲ್ಲಿನ ಕರ್ಮಚಕ್ರದಲ್ಲಿನ ಕರ್ಮಗಳನ್ನು, ಗುಣಚಕ್ರದಲ್ಲಿನ ಗುಣಗಳನ್ನು, ಕಾಲಚಕ್ರದಲ್ಲಿನ ಕಾಲವನ್ನು ನಿರ್ಣಯಿಸಿಕೊಂಡು ಇಟ್ಟಿದ್ದಾನೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವುದು ಏನೆಂದರೆ! ಹುಟ್ಟಿರುವುದು ದೇವರ ಅಂಶವೇ ಆದರೂ ಕೃಷ್ಣನ ಜೀವನವನ್ನು ಕುರಿತಾಗಲಿ, ಕೃಷ್ಣನ ಶರೀರವನ್ನು ಕುರಿತಾಗಲಿ ದೇವರು ಏನು ನಿರ್ಣಯಿಸುವುದಿಲ್ಲ, ದೇವರಿಗೆ ಕೃಷ್ಣನ ಜನ್ಮ ವಿಷಯದಲ್ಲಿ ಏನು ಸಂಬಂಧವಿಲ್ಲ. ಭೂಮಿಮೇಲೆ ಅಧರ್ಮಗಳು ಒಂದು ಸ್ಥಾಯಿಗೆ ಬೆಳೆದಾಗ ದೇವರ ಅಂಶ ತನಗೆ ತಾನಾಗಿ ತಾಯಿಗರ್ಭದಲ್ಲಿ ಶಿಶುವಾಗಿ ತಯಾರಾಗುವುದಕ್ಕೆ ಮೊದಲು ಮಾಡುತ್ತದೆ. ಚೆನ್ನಾಗಿ ಗಮನಿಸಬೇಕಾಗಿರುವುದು ಏನೆಂದರೆ! ದೇವರು ತಾನು ಭೂಮಿಮೇಲೆ ಈ ಸಮಯದಲ್ಲಿ, ಈ ಸ್ಥಳದಲ್ಲಿ, ಈ ಗರ್ಭದಲ್ಲಿ ಹುಟ್ಟಿ ಈ ವಿಧವಾಗಿ ಪ್ರವರ್ತಿಸಿ, ಈ ವಿಧವಾಗಿ ಧರ್ಮಗಳನ್ನು ನೆಲೆಗೊಳಿಸಬೇಕೆಂದು ಅಂದುಕೊಳ್ಳುವುದಿಲ್ಲ. ದೇವರಿಗೆ ತಾನು ಭಗವಂತನಾಗಿ ಹುಟ್ಟಬೇಕೆನ್ನುವ ಸಂಕಲ್ಪವು ಸಹ ಇಲ್ಲ. ಅಧರ್ಮಗಳು ಮುಗಿಲು ಮುಟ್ಟಿದಾಗ ತನಗೆ ತಾನಾಗಿ ಹುಟ್ಟುವುದಕ್ಕೆ ಸೃಷ್ಟಿ ಇಲ್ಲದಮೊದಲೆ ದೇವರು ನಿರ್ಣಯಿಸಿದ್ದಾನೆ. ಆದ್ದರಿಂದ ಅಧರ್ಮಗಳು ತಾರಾಸ್ಥಾಯಿಗೆ ಸೇರಿದಾಗ ದೇವರ ಸಂಕಲ್ಪ ಇಲ್ಲದೆಯೇ, ದೇವರ ಅಂಶ ಭೂಮಿಮೇಲೆ ಬರುತ್ತದೆ. ಈ

ವಿಷಯ ಚೆನ್ನಾಗಿ ಅರ್ಥವಾಗುವುದಕ್ಕೆ ಒಂದು ಚಿಕ್ಕ ಉದಾಹರಣೆಯನ್ನು ವಿವರಿಸುತ್ತೇವೆ ನೋಡಿರಿ.

ಈ ಕಾಲದಲ್ಲಿ ದೊಡ್ಡ ಷಾಪ್‌ಗಳಲ್ಲಾಗಲಿ, ದೊಡ್ಡ ಹಾಸ್ಪಿಟಲ್ಸ್‌ಗಳಲ್ಲಾಗಲಿ ಸೆನ್ಸಾರ್ ಡೋರ್‌ಗಳನ್ನು ಆಳವಡಿಸಿದ್ದಾರೆ. ಆ ಡೋರ್‌ಗಳು ಯಾವಾಗಲೂ ಮುಚ್ಚಿಕೊಂಡಿರುತ್ತವೆ. ನಾವು ಒಳಗೆ ಹೋಗಬೇಕೆಂದರೂ, ಹೊರಗೆ ಬರಬೇಕೆಂದರೂ ಅವುಗಳನ್ನು ನಾವು ತೆರೆಯಬೇಕಾದ ಕೆಲಸವಿಲ್ಲದೆ ತನ್ನಷ್ಟಕ್ಕೆ ತಾನೇ ತೆರೆದುಕೊಳ್ಳುತ್ತವೆ. ಆ ಬಾಗಲಿಗೆ ನಾಲ್ಕು ಅಡಿಗಳ ದೂರದೊಳಗೆ ಮನುಷ್ಯ ಬರುತ್ತಲೇ ಸ್ವಯಂಚಾಲಿತವಾಗಿ ಬಾಗಿಲು ತೆರೆದುಕೊಳ್ಳುವಂತೆ ಅವುಗಳಿಗೆ ಸೆನ್ಸಾರ್ ಎನ್ನುವ ಪರಿಕರ ಆಳವಡಿಸಲ್ಪಟ್ಟಿರುತ್ತದೆ. ಆದ್ದರಿಂದ ನಾಲ್ಕು ಅಡಿಗಳ ದೂರದೊಳಗೆ ಬಾಗಿಲ ಕಡೆ ಮನುಷ್ಯ ಬರುತ್ತಲೇ, ಸೆನ್ಸಾರ್ ಗ್ರಾಹಿತಶಕ್ತಿಯಿಂದ ಬಾಗಿಲು ಅವಷ್ಟಕ್ಕವೆ ತೆಗೆದುಕೊಳ್ಳುತ್ತವೆ. ಹಾಗೆಯೇ ಮನುಷ್ಯ ನಾಲ್ಕು ಅಡಿಗಳ ದೂರಹೋಗುತ್ತಲೇ ಮುಚ್ಚಿಕೊಳ್ಳುತ್ತವೆ. ಮೊದಲೆ ಸೆನ್ಸಾರ್‌ನಲ್ಲಿ ನಿರ್ಣಯಿಸಿದ ಪ್ರಕಾರ ಮನುಷ್ಯ ನಾಲ್ಕು ಅಡಿಗಳೊಳಗೆ ಬಂದರೆ ಬಾಗಿಲು ತೆರೆದುಕೊಂಡಂತೆ ಭೂಮಿಮೇಲೆ ಧರ್ಮಗಳು ಕ್ಷೀಣಿಸಿ ಹೋಗಿ, ಅಧರ್ಮಗಳು 90 ರಷ್ಟು ಬೆಳೆದು ಧರ್ಮಗಳು ಕೇವಲ 10 ರಷ್ಟು ಉಳಿದಾಗ, ದೈವಾಂಶ ಅದಷ್ಟಕ್ಕದೆ ಭಗವಂತನ ರೂಪದಿಂದ ಭೂಮಿಮೇಲಕ್ಕೆ ಬರುತ್ತಿದೆ. ನಾಲ್ಕು ಅಡಿಗಳೊಳಗೆ ಮನುಷ್ಯ ಒಂದು ಹೆಜ್ಜೆ ಇಟ್ಟ ತಕ್ಷಣ ಮೊದಲೆ ನಿರ್ಣಯಿಸಿದ ಸೆನ್ಸಾರ್ ತನಗೆ ತಾನಾಗಿ ಬಾಗಿಲು ತೆರೆದಂತೆ, ಭೂಮಿಮೇಲೆ ಅಧರ್ಮಗಳು 89 ರಷ್ಟು ದಾಟಿ 90 ಶಾತದೊಳಗೆ ಹೆಜ್ಜೆ ಇಟ್ಟ ತಕ್ಷಣ ಸೃಷ್ಟಿ ಪೂರ್ವದಲ್ಲಿ ನಿರ್ಣಯಿಸಿದ ಪ್ರಕಾರ ದೈವಾಂಶ ತನಗೆ ತಾನಾಗಿ ಭಗವಂತನ ಅವತಾರ ತಾಳುತ್ತಿದೆ. ಭೂಮಿಮೇಲೆ ಧರ್ಮಗಳ ಸಾಂಧ್ರತೆ ಕಡಿಮೆಯಾಗಿ, ಅಧರ್ಮಗಳ ಸಾಂಧ್ರತೆ 90 ರಷ್ಟಕ್ಕೆ ಬರುತ್ತಲೇ ಯಾರ ಪ್ರಮೇಯವು ಇಲ್ಲದೆ, ಕೊನೆಗೆ ದೇವರ ಪ್ರಮೇಯವು ಸಹ ಇಲ್ಲದಂತೆ ಭಗವಂತನ ಬರುವಿಕೆ ತನಗೆ ತಾನಾಗಿ ನಡೆದುಹೋಗುತ್ತಿದೆ.

ಇಲ್ಲಿ ಕೆಲವರಿಗೆ ಕೆಲವು ಪ್ರಶ್ನೆಗಳನ್ನು ಕೇಳುವುದಕ್ಕೆ ಅವಕಾಶವಿದೆ. ಕೇಳಿದರೆ ಆ ಪ್ರಶ್ನೆಗಳು ಹೀಗೆ ಇರುತ್ತವೆ. ಕೃಷ್ಣನ ಎರಡು ಕಾಲುಗಳಿಗೆ ಗೆರೆಗಳಿವೆಯೆಂದು ಇದು ಭಾರತದಲ್ಲಿ ಸಹ ಹೇಳದ ರಹಸ್ಯ ಎಂದಿದ್ದೀರಾ. ಕೃಷ್ಣನಿರುವ ಆ ಕಾಲದಲ್ಲಿ ನೀವು ಇಲ್ಲವಲ್ಲ! ಕೃಷ್ಣನ ಕಾಲಿನ ಗೆರೆಗಳ ರಹಸ್ಯ ನೀವು ಹೇಗೆ ಹೇಳುತ್ತಿದ್ದೀರಾ? ಎರಡನೆ ಪ್ರಶ್ನೆ ಕೃಷ್ಣನು ಭಗವಂತನೆನ್ನುವ ವಿಷಯ ಯಾರಿಗೂ ತಿಳಿಯದ ರಹಸ್ಯ ಎಂದಿದ್ದೀರ. ಆದರೆ ಆ ರಹಸ್ಯ ಭೀಷ್ಮನಿಗೊಬ್ಬನಿಗೆ ತಿಳಿದಿದೆ ಎಂದಿದ್ದೀರ. ಕೃಷ್ಣನು 90 ವರ್ಷಗಳ ವಯಸ್ಸಿನಲ್ಲಿ ಗೀತೆಯನ್ನು ಹೇಳಿದರೆ ಅದಕ್ಕಿಂತ ಮೊದಲು ಭೀಷ್ಮನಿಗೆ ಕೃಷ್ಣನು ಭಗವಂತನೆಂದು ತಿಳಿದ ವಿಷಯ ನಿಮಗೆ ಹೇಗೆ ತಿಳಿದಿದೆ? ಎಂದು ಕೇಳಬಹದು. ಮೂರನೆ ಪ್ರಶ್ನೆ ಭಗವಂತನು ತಂದೆ ವೀರ್ಯಕಣದಿಂದ ಹುಟ್ಟುವುದಿಲ್ಲ ದೇವರ ಅಂಶದಿಂದ ಹುಟ್ಟುತ್ತಾನೆಂದಿದ್ದೀರ. ಆ ಮಾತನ್ನು ನೀವು ಹೇಗೆ ಹೇಳುತ್ತಿದ್ದೀರಾ? ಇನ್ನು ನಾಲ್ಕನೆ ಪ್ರಶ್ನೆ ಧರ್ಮಗಳಿಗೆ ಹಾನಿ ಏರ್ಪಟ್ಟು ಅಧರ್ಮಗಳು ಶೇ.90 ರಷ್ಟು ಬೆಳೆದ ತಕ್ಷಣ ದೈವಾಂಶ ಭಗವಂತನಾಗಿ ತನಗೆ ತಾನಾಗಿ ಹುಟ್ಟುತ್ತಿದ್ದಾನೆಂದು, ಆಗ ದೇವರ ಸಂಕಲ್ಪವಾಗಲಿ, ದೇವರ ಪ್ರಮೇಯವಾಗಲಿ ಏನು ಇಲ್ಲವೆಂದು ಹೇಳುತ್ತಿದ್ದಿರ! ಯಾರಿಗೂ ತಿಳಿಯದ ಈ ರಹಸ್ಯ ನಿಮಗೆ ಹೇಗೆ ತಿಳಿದಿದೆ? ಎಂದು ಕೇಳಬಹುದು. ಈ ಪ್ರಶ್ನೆಗಳೆಲ್ಲ ಸಮಂಜಸವಾದವೆ, ಆದರೆ ನಾನು ಒಂದುಮಾತು ಹೇಳುತ್ತೇನೆ. **ನಾನು ನಿಮಗೆ ಹೇಗೆ ತಿಳಿದಿಲ್ಲವೊ, ನನಗೂ ಅವು ಹಾಗೆ ತಿಳಿದಿವೆಯೆಂದು** ಹೇಳುತ್ತೇನೆ. ಈ ಪ್ರಶ್ನೆಗಳಿಗೆ ನಾನು ಉತ್ತರಗಳು ಹೇಳಬಾರದು, ಆದರೆ ನೀವು ಸ್ವತಃವಾಗಿ ಉತ್ತರಗಳನ್ನು ತಿಳಿದುಕೊಳ್ಳಬಹುದು, ಮುಂದೆ ತಿಳಿಯಬಲ್ಲವು.

ಶ್ರೀಕೃಷ್ಣನು ಹುಟ್ಟಿದ ದಿನಾಂಕ 19, ಜೂಲೈ ತಿಂಗಳು, ಕ್ರಿ॥ ಪೂರ್ವ 3228 ವರ್ಷ 19–07–3228 B.C ದಿನದಂದು ವೃಷಭಲಗ್ನದಲ್ಲಿ ಬಹುಳ ಅಷ್ಟಮಿಯಲ್ಲಿ ಕೃಷ್ಣನು ಹುಟ್ಟಿದ್ದಾನೆ. ಆತನ ವಯಸ್ಸು 30 ವರ್ಷಗಳು ನಡೆಯುತ್ತಿರುವಾಗ ಜರಾಸಂಧನ ಕೈಯಲ್ಲಿ ಸೋತುಹೋಗಿ ಮಧುರೆಯನ್ನು

ಬಿಟ್ಟು ದ್ವಾರಕಕ್ಕೆ ಹೋಗಿದ್ದಾನೆ. ಕ್ರಿಸ್ತ ಪೂರ್ವದಲ್ಲಿ 3138ನೇ ವರ್ಷ ಕುರುಕ್ಷೇತ್ರದಲ್ಲಿ ಭಾರತ ಯುದ್ಧದಲ್ಲಿ ಅಂದರೆ 90 ವರ್ಷಗಳ ವಯಸ್ಸಿನಲ್ಲಿ "ಗೀತೆ"ಯನ್ನು ಬೋಧಿಸಿದ್ದಾನೆ. ನಂತರ 36 ವರ್ಷಗಳು ಬದುಕಿ ಕ್ರಿಸ್ತಪೂರ್ವ 3102 ವರ್ಷದಲ್ಲಿ ಮರಣಿಸಿದ್ದಾನೆ. ಒಟ್ಟಾರೆ 126 ವರ್ಷಗಳು ಬದುಕಿದ್ದಾನೆ. ಭೀಷ್ಮನು ಕೃಷ್ಣನಿಗಿಂತ ಸುಮಾರು 260 ಸಂ॥ ಹಿರಿಯ (ದೊಡ್ಡ) ವಯಸ್ಸು ಇರುವವನು. ಭೀಷ್ಮನು ಸುಮಾರು 350 ವರ್ಷಗಳ ವಯಸ್ಸಿನ ಮೇಲೆಯೇ ಮರಣಿಸಿರುತ್ತಾನೆ. ಕೃಷ್ಣನನ್ನು ಸಾಕ್ಷಾತ್ತು ದೇವರಾಗಿ ಗುರುತಿಸಿದ ಏಕೈಕ ವ್ಯಕ್ತಿ ಒಬ್ಬ ಭೀಷ್ಮನೆ, ಕೃಷ್ಣನು ಕಾಲುಗಳಿಂದ ಹುಟ್ಟಿದ್ದಾನೆಂದು ತಿಳಿದ ಭೀಷ್ಮನು ಕೃಷ್ಣನ ಕಾಲುಗಳ ಕಡೆಯೇ ಹೆಚ್ಚಾಗಿ ನೋಡುತ್ತಿದ್ದನು. ಕೃಷ್ಣನ ಕಾಲುಗಳಿಗೆ ಗೆರೆಗಳನ್ನು ಗ್ರಹಿಸಿದ ಭೀಷ್ಮನು ತನ್ನ ಸಂಸ್ಕಾರ ಬಲದಿಂದ ಕೃಷ್ಣನನ್ನು ದೈವಾಂಶವಾದ ಭಗವಂತನಾಗಿ ಗುರುತಿ ಸಲ್ಪಟ್ಟಿದ್ದಾನೆ. ಈ ವಿಷಯವನ್ನೇ ಭಗವದ್ಗೀತೆ ವಿಜ್ಞಾನ ಯೋಗದಲ್ಲಿ 19ನೇ ಶ್ಲೋಕದಲ್ಲಿ ಈ ವಿಧವಾಗಿ ಶ್ರೀಕೃಷ್ಣನೆ ಹೇಳಿದ್ದಾನೆ.

**ಶ್ಲೋ॥ ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥**

ಈ ಶ್ಲೋಕ ಭೀಷ್ಮನಿಗಾಗಲಿ, ಭೀಷ್ಮನಂತಹವರಿಗಾಗಲಿ ಚೆನ್ನಾಗಿ ಸರಿಹೋಗುತ್ತದೆ. ಎಷ್ಟೋ ಜನ್ಮಗಳು ಜ್ಞಾನಿಯಾಗಿ ಹುಟ್ಟಿದ ವ್ಯಕ್ತಿ ಜನ್ಮಜನ್ಮಕ್ಕು ಜ್ಞಾನವನ್ನು ಅಭಿವೃದ್ಧಿಮಾಡಿಕೊಂಡು, ದೇವರೊಬ್ಬನೆಂಬ ಜ್ಞಾನದಿಂದ ಪರಮಾತ್ಮನನ್ನು ಹೊರತು ಇತರರನ್ನು ಆರಾಧಿಸುವುದಿಲ್ಲ. ಅವನನ್ನು ಮಹಾತ್ಮನೆಂದು ಹೇಳಬಹುದು. ಅಂತಹವನು ಸಾವಿರ ವರ್ಷಗಳಿಗೊ, ಲಕ್ಷ ವರ್ಷಗಳಿಗೊ ಬಹು ಅಪರೂಪವಾಗಿ ಭೂಮಿಮೇಲಕ್ಕೆ ಬರುವ ಭಗವಂತನನ್ನು ತನ್ನ ಜ್ಞಾನ ಸಂಸ್ಕಾರ ಬಲದಿಂದ ಗುರುತಿಸಬಲ್ಲನು. ವಾಸುದೇವನೇ ಅಂದರೆ ಕೃಷ್ಣನೇ ಸರ್ವಜೀವಿಗಳಿಗು ಅಧಿಪತಿಯಾದ ಭಗವಂತನೆಂದು ಗುರುತಿಸುತ್ತಾನೆ. ಆ ವಿಧವಾಗಿ ಭೂಮಿಮೇಲೆ ಭಗವಂತನನ್ನು ಗುರುತಿಸುವವರು ಬಹಳ ಅಪರೂಪವಾಗಿರುತ್ತಾರೆ. ಮನುಷ್ಯನಂತಹ ಭಗವಂತನನ್ನು ಯಾರಾದರೂ

ಮನುಷ್ಯನಾಗಿಯೇ ಗುರುತಿಸುತ್ತಾರೆ. ಆದರೆ ಮನುಷ್ಯನನ್ನು ಭಗವಂತನಾಗಿ ಗುರುತಿಸುವುದಕ್ಕೆ ಕೋಟ್ಯಾಂತರ ಅನುಮಾನಗಳ ಆತಂಕಗಳು ಬರುತ್ತವೆ. ಕೃಷ್ಣನು ಭಗವಂತನು ಅಲ್ಲ ಎಂದು ಬರುವ ಕೋಟ್ಯಾಂತರ ಮಾಯಾ ಪ್ರಶ್ನೆಗಳಿಗೆ ಕೋಟಿ ಜ್ಞಾನ ಸಮಾಧಾನಗಳು ಹೇಳಬೇಕಾಗಿರುತ್ತವೆ. ಮಾಯೆಯಿಂದ ಬರುವ ಪ್ರಶ್ನೆಗಳಿಗೆ ಉತ್ತರಗಳು ಹೇಳುವುದಕ್ಕೆ ಮನುಷ್ಯನಿಗೆ ಎಷ್ಟೋ ಜ್ಞಾನವಿರಬೇಕು. ಅಂತಹ ಜ್ಞಾನ ಇಲ್ಲದಿರುವಾಗ ಭಗವಂತನು ನಮ್ಮ ಮುಂದೆಯೇ ಇದ್ದರೂ ಗುರುತಿಸಲಾರೆವು. ಅಧರ್ಮಗಳು ಮಿತಿಮೀರಿದ ಕಾಲದಲ್ಲಿ ಕೃಷ್ಣನು ಹುಟ್ಟಿದ್ದಾನೆ. ಕೃಷ್ಣನು ಭಗವಂತನೆಂದು ಯಾರಿಗೂ ತಿಳಿಯದ ರಹಸ್ಯವನ್ನು ಒಬ್ಬೆ ಒಬ್ಬ ಭೀಷ್ಮನು ಛೇದಿಸಿದ್ದಾನೆ. ತನ್ನ ಜೀವನದಲ್ಲಿ ಎಷ್ಟೋ ಸಲ ಕೃಷ್ಣನು ದೊಡ್ಡವನೆಂದು ಕೌರವರಿಗೂ ಸಹ ಹೇಳಿದ್ದಾನೆ. ಆದರೂ ಆತನ ಮಾತನ್ನು ಯಾರೂ ಕೇಳಲಿಲ್ಲ. ಭೀಷ್ಮನು ಕನಿಷ್ಟ ಜ್ಞಾನಿ ಎಂದು ಕೂಡ ಯಾರಿಂದಲೂ ಗುರುತುಪಡೆಯಲಿಲ್ಲ. ಆದರೂ ನಿಜಕ್ಕೆ ಆ ಕಾಲದಲ್ಲಿ ಅತ್ಯುನ್ನತ ಜ್ಞಾನಿ ಎಂದು ನಾವು ಈದಿನ ಹೇಳುತ್ತಿದ್ದೇವೆ. ಭೀಷ್ಮನು ಉನ್ನತವಾದ ಜ್ಞಾನಿ ಎನ್ನುವುದಕ್ಕೆ ಆತನು ಕೃಷ್ಣನನ್ನು ಭಗವಂತನಾಗಿ ಗುರುತಿಸುವುದೆ ನಿದರ್ಶನ.

ಕೃಷ್ಣನು ಮಧುರೆಯಲ್ಲಿ ಕಾರಾಗಾರದಲ್ಲಿ ಜನ್ಮಿಸಿದ್ದಾನೆ. ಜ್ಞಾನಕ್ಕೆ ಅಜ್ಞಾನ ನಿತ್ಯ ಶತ್ರುತ್ವ ಹೊಂದಿದೆ ಎನ್ನುವುದಕ್ಕೆ ನಿದರ್ಶನವಾಗಿ ಜ್ಞಾನ ನಿಧಿಯಾಗಿ ಹುಟ್ಟಿದ ಕೃಷ್ಣನಿಗೆ ಹುಟ್ಟಿದಾಗಿನಿಂದಲೇ ಅಜ್ಞಾನಿಗಳಾದವರಿಂದ ಪ್ರಾಣಹಾನಿ ಇತ್ತು. ಆದ್ದರಿಂದ ಕೃಷ್ಣನು ಶಿಶುವಾಗಿ ಹುಟ್ಟಿದ ಗಂಟೆಗೆ ಮಧುರೆ ಪಕ್ಕದಲ್ಲಿಯೇ ಇರುವ "ಗೋಕುಲ್" ಎನ್ನುವ ಚಿಕ್ಕ ಗ್ರಾಮದೊಳಗೆ ಸೇರಿಸಲ್ಪಟ್ಟು ಅಲ್ಲಿ ಯಶೋದ ಸಂರಕ್ಷಣೆಯಲ್ಲಿ ಮೂರು ವರ್ಷಗಳ ನಾಲ್ಕು ತಿಂಗಳು ಇದ್ದಾನೆ. ನಂತರ ಪಕ್ಕದಲ್ಲಿನ "ನಂದಗಾವ್" ನಲ್ಲಿ ಆರು ವರ್ಷಗಳ ಎಂಟು ತಿಂಗಳು ಇದ್ದಾನೆ. ಹಾಗೆ ಹತ್ತು ವರ್ಷಗಳು ಬೆಳೆದ ನಂತರ ಹನ್ನೊಂದನೆ ವರ್ಷ ತನ್ನ ಜನ್ಮ ಸ್ಥಳವಾದ ಮಧುರೆಗೆ ಕೃಷ್ಣನು ಬಂದಿರುವುದು ನಡೆದಿದೆ. ತನ್ನ ಹನ್ನೊಂದನೆ ವಯಸ್ಸಿನಲ್ಲಿ ಸೋದರಮಾವನಾದ ಕಂಸನನ್ನು ಸಾಯಿಸಿದ್ದಾನೆ. ಆಗಿನಿಂದ ಸುಮಾರು ಮೂವತ್ತು ವರ್ಷಗಳ ವಯಸ್ಸಿನವರೆಗು ಮಧುರೆಯಲ್ಲಿಯೇ

ನಿವಾಸವಿದ್ದಾನೆ. ಆ ಸಮಯದಲ್ಲಿ 15 ವರ್ಷಗಳಿಂದ 30 ವರ್ಷಗಳವರೆಗು ಮಧುರೆಗೆ ಪ್ರಕ್ಕದಲ್ಲಿಯೇ ಇರುವ ಬೃಂದಾವನದಲ್ಲಿ ಗೋಪಿಕೆಗಳೊಂದಿಗೆ ಕಳೆದಿದ್ದಾನೆ. ನಂತರ ಜರಾಸಂಧನ ಕೈಯ್ಯಲ್ಲಿ ಸೋತುಹೋಗಿ ಮಧುರೆಯನ್ನು ಬಿಟ್ಟು, ಗುಜರಾತ್ ರಾಜ್ಯದಲ್ಲಿ ಸಮುದ್ರ ತೀರದಲ್ಲಿ ದ್ವಾರಕಾಪಟ್ಟಣವನ್ನು ನಿರ್ಮಿಸಿಕೊಂಡು ಕೊನೆಯವರೆಗು ಅಲ್ಲಿಯೇ ಕಾಲ ಕಳೆದು ಮರಣಿಸಿರುವುದು ನಡೆದಿದೆ. ನಂತರ ದ್ವಾರಕ ಸಮುದ್ರದೊಳಗೆ ಬೆರೆತುಹೋಗಿದೆ. ಈ ವಿಧವಾಗಿ ಸಾಗಿದ ಕೃಷ್ಣನ ಜೀವನವನ್ನು ನೋಡಿ ಯಾರೂ ಆತನನ್ನು ಭಗವಂತನೆಂದು ಕರೆಯಲಾರರು.

ಕೃಷ್ಣನ ಬಾಲ್ಯದಲ್ಲಿ ಪೂತನ, ಶಕಟಾಸುರನು ಮೊದಲಾದವರಿಂದ ಪ್ರಮಾದ ಏರ್ಪಟ್ಟರೂ ಅವು ಆತನನ್ನು ಏನೂ ಮಾಡಲಾರದೆ ಹೋಗಿವೆ. ಹನ್ನೊಂದು ವರ್ಷಗಳಿಗೆ ಸೋದರ ಮಾವನನ್ನು ಹತಮಾಡಿದ ಕೃಷ್ಣನು ಮಧುರೆ ರಾಜ್ಯಭಾರವನ್ನು ಅಣ್ಣನಾದ ಬಲರಾಮನಿಗೆ ಅರ್ಪಿಸಿ, ತನ್ನ ಹದಿನೇಳನೆ ವರ್ಷದಿಂದ ಸುಮಾರು ಮೂವತ್ತು ವರ್ಷಗಳು ವಯಸ್ಸು ಬರುವವರೆಗು ಪ್ರಕ್ಕದಲ್ಲಿಯೇ ಇರುವ ಬೃಂದಾವನದಲ್ಲಿ ಗೋಪಿಕೆಗಳೊಂದಿಗೆ ಕಾಲ ಕಳೆದಿದ್ದಾನೆ. ಕೃಷ್ಣನು ಕಪ್ಪನೆ ಶರೀರಛಾಯೆ ಹೊಂದಿ ಆರು ಅಡಿಗಳು ಎತ್ತರವಿರುವವನು. ಎಲ್ಲಿಯಾದರೂ ಕೃಷ್ಣನ ಚಿತ್ರಪಟ ಕಾಣಿಸಿದರೆ ಅದು ಬೃಂದಾವ ನದೊಳಗಿನ ದಾಗಿರುತ್ತದೆ. ಆತನ ಚಿತ್ರಪಟಗಳೆಲ್ಲ ಇತ್ತ ಗೋಪಿಕೆಗಳೊಂದಿಗಾಗಲಿ, ಅತ್ತ ರಾಧೆಯೊಂದಿಗಾಗಲಿ ಇರುವವಾಗಿವೆ. ಅವು ಅಲ್ಲದಿದ್ದರೆ ಚಿಕ್ಕ ವಯಸ್ಸಿನಲ್ಲಿ ನಂದಗಾವ್‌ನಲ್ಲಿ ತನ್ನ ಸ್ನೇಹಿತರೊಂದಿಗೆ ಬೆರೆತು ಬೆಣ್ಣೆ, ಹಾಲು ಕಳ್ಳತನ ಮಾಡಿದ ಚಿತ್ರಗಳು ಇರುತ್ತವೆ. ನಂದಗಾವ್‌ನಲ್ಲಿನವು, ಬೃಂದಾವನದಲ್ಲಿನ ಚಿತ್ರಪಟಗಳು ಅನೇಕ ವಿಧಗಳಾಗಿ ಇದ್ದರೂ ಅವೆಲ್ಲವೂ ಕೃಷ್ಣನ ಯುಕ್ತವಯಸ್ಸಿನಲ್ಲಿನವೇ. 30 ವರ್ಷಗಳ ವಯಸ್ಸಿನವರೆಗು ಇರುವ ಚಿತ್ರಪಟಗಳು ಬಿಟ್ಟರೆ ನಂತರ 90 ಸಂ॥ ವಯಸ್ಸಿನವರೆಗು ಯಾವ ಫೋಟೋಗಳು ಇಲ್ಲ. ಆತನಿಗೆ 90 ವರ್ಷಗಳ ವಯಸ್ಸಿನಲ್ಲಿ ಕುರುಕ್ಷೇತ್ರ ಯುದ್ಧದಲ್ಲಿನ ಚಿತ್ರಗಳು ಎರಡೇ

ಇವೆ. ಅದರಲ್ಲಿ ಒಂದು ಕೃಷ್ಣನು ಅರ್ಜುನನ ರಥಸಾರಥಿಯಾಗಿದ್ದು ಗೀತೆಯನ್ನು ಬೋಧಿಸಿರುವುದು, ಎರಡನೆಯದು ಯುದ್ಧದ ಮಧ್ಯದಲ್ಲಿ ಭೀಷ್ಮನ ಮೇಲೆ ಕೋಪದಿಂದ ಚಕ್ರಧಾರಿಯಾಗಿ ರಥ ಇಳಿದು ಹೋಗುತ್ತಿರುವಾಗ ಅರ್ಜುನನು ತಡೆಯುತ್ತಿರುವುದು. ವಿಶೇಷವೇನೆಂದರೆ ಈ ಎರಡು ಚಿತ್ರಪಟಗಳಲ್ಲಿ ಕೃಷ್ಣನನ್ನು 90 ಸಂ॥ ವೃದ್ಧ ವಯಸ್ಸಿನಲ್ಲಿ ಇರುವಂತೆ ತೋರಿಸದೆ, ಮೂವತ್ತು ವರ್ಷಗಳ ಯುಕ್ತವಯಸ್ಸಿನಲ್ಲಿ ಇದ್ದಂತೆ ತೋರಿಸಿದ್ದಾರೆ. ಯುದ್ಧರಂಗದಲ್ಲಿ ಕೃಷ್ಣನ ವಯಸ್ಸು ದೊಡ್ಡದಾದರೂ ಚಿಕ್ಕ ವಯಸ್ಸಾಗಿ ಚಿತ್ರಕಾರರು ಚಿತ್ರಿಸುವುದರಿಂದ ಎಲ್ಲರಿಗೂ ಕೃಷ್ಣನ ಯುಕ್ತವಯಸ್ಸೆ ಕಾಣಿಸುತ್ತದೆ. ಕೃಷ್ಣನ ಮಧ್ಯವಯಸ್ಸಾಗಲಿ, ವೃದ್ಧ ವಯಸ್ಸಾಗಲಿ ಯಾರಿಗೂ ತಿಳಿಯದಂತೆ ಹೋಗಿದೆ.

ಹೆಚ್ಚಾಗಿ ಬೃಂದಾವನದಲ್ಲಿ ಗೋಪಿಕೆಗಳೊಂದಿಗೂ ಏಕಕಾಂತ ರಾಧ ದೊಂದಿಗೂ ಕಳೆದ ಚಿತ್ರಪಟಗಳು ಕಾಣಿಸುವುದರಿಂದ ಕೃಷ್ಣನ ಹೆಸರು ಕೇಳುತ್ತಲೇ ಆತನ ಯುಕ್ತವಯಸ್ಸಿನಲ್ಲಿ ತುಂಟನಂತೆ ತಿರುಗಿದವನೆಂದು ಪ್ರಜೆಗಳು ಅಂದು ಕೊಳ್ಳುವುದು ನಡೆಯುತ್ತಿದೆ. ಕೆಲವು ಲಕ್ಷಗಳ ವರ್ಷಗಳ ನಂತರ ಭೂಮಿ ಮೇಲಕ್ಕೆ ಇಳಿದುಬಂದ ದೇವರ ಅಂಶವಾದ ಭಗವಂತನೇ ಕೃಷ್ಣನೆಂದು ಯಾರೂ ಅಂದುಕೊಳ್ಳುತ್ತಿಲ್ಲ. ಕೃಷ್ಣನನ್ನು ಹಾಗೆ ಅಂದುಕೊಳ್ಳುವುದು ಈಗಿನ ಪ್ರಜೆಗಳ ದೌರ್ಭಾಗ್ಯ, ಅಜ್ಞಾನ ಎಂದು ಹೇಳಬಹುದು. ಕೃಷ್ಣನು ಮಧುರಾನಗರವನ್ನು ಬಿಟ್ಟುಹೋದ ನಂತರ ಪುನಃ ಬೃಂದಾವನಕ್ಕೆ ಬಂದಿರುವ ಸಮಾಚಾರ ಇಲ್ಲ. ಆತನು ದ್ವಾರಕಕ್ಕೆ ಹೋದ ನಂತರ ಎಂಟುಜನ ಹೆಂಡತಿಯರನ್ನು ಮಾಡಿಕೊಂಡಿದ್ದಾನೆ. ಕೃಷ್ಣನಿಗೆ ಅಷ್ಟ ಪತ್ನಿಯರು ಎನ್ನುವ ಮಾತು ಕೇಳಿದರೂ, ಆತನ ವಿಧಾನ ತಿಳಿಯದ ಪ್ರಜೆಗಳು ಕೃಷ್ಣನನ್ನು ಕಡಿಮೆಯಾಗಿ ಭಾವಿಸಿ ಕೊಳ್ಳುತ್ತಿದ್ದಾರೆ. ಕೆಲವರಾದರೆ ಹದಿನಾರು ನೂರುಮಂದಿ ಸ್ತ್ರೀಯರೊಂದಿಗೆ ಸಹವಾಸ ಮಾಡಿದ್ದಾನೆಂದು ಕೆಲವರನ್ನುತ್ತಿರುವಾಗ, ಹದಿನಾರು ಸಾವಿರ ಮಂದಿ ಸ್ತ್ರೀಯರೊಂದಿಗೆ ಇದ್ದಾನೆಂದು ಹೇಳುವವರು ಕೆಲವರಿದ್ದಾರೆ. ಈ ವಿಧವಾಗಿ ಭಗವಂತನಾದ ಕೃಷ್ಣನನ್ನು ಕಡಿಮೆ ಭಾವನೆಯಿಂದ ಮಾತನಾಡುವವರೇ

ಭೂಮಿಮೇಲೆ ಹೆಚ್ಚಾಗಿ ಇದ್ದಾರೆ. ಇಷ್ಟುಜನ ಸ್ತ್ರೀಯರ ಮನಸ್ಸನ್ನು ದೋಚಿದ್ದಾನೆ ಎಂದರೆ ಕೃಷ್ಣನು ಅಷ್ಟು ಸುಂದರಾಂಗನಾ? (ಅಂದಗಾರನಾ) ಎನ್ನುವ ಪ್ರಶ್ನೆ ಬರುತ್ತದೆ. ಎಲ್ಲರಿಗೂ ತಿಳಿದಂತೆ ಆತನು ಕಪ್ಪಗಿದ್ದಾನೆ. ಉತ್ತರ ದೇಶದಲ್ಲಿ ಪುರುಷರೆಲ್ಲರೂ ಬೆಳ್ಳಗೆ ಇರುತ್ತಾರೆ. ಕಪ್ಪಗೆ ಇರುವವನನ್ನು ಯಾರೂ ಇಷ್ಟಪಡುವುದಿಲ್ಲ. ಹಾಗೆಯೇ ಸ್ತ್ರೀಯರು ಸಹ ಬೆಳ್ಳಗಿರುವ ಪುರುಷನನ್ನು ಕೋರಿಕೊಳ್ಳುತ್ತಾರೆ, ಆದರೆ ಕಪ್ಪಗಿರುವವನನ್ನು ಕೋರಿಕೊಳ್ಳುವುದಿಲ್ಲ. ಮೇಲಾಗಿ ಕೃಷ್ಣನು ಕಪ್ಪಗಿದ್ದರೂ ಅಂದಗಾರನಾ ಎಂದರೆ ಅಷ್ಟು ಅಂದಗಾರನು ಸಹ ಅಲ್ಲ. ಚೂಪಾದ ಮೂಗಿರುವವನಾ ಎಂದರೆ ಹಾಗೆ ಸಹ ಅಲ್ಲದೆ ಮೊಂಡು ಮೂಗು ಇರುವವನು. ನಿಜಕ್ಕೆ ದೊಡ್ಡ ಅಂದಗಾರನೇನೂ ಅಲ್ಲ. ಕೃಷ್ಣನಿಗೆ ಬಿಳಿಯ ಶರೀರ ಛಾಯ ಇಲ್ಲದಿದ್ದರೂ, ಕಪ್ಪಗಿದ್ದರೂ, ಮೊಂಡು ಮೂಗು ಇರುವವನಾದರೂ, ಹೇಳಿಕೊಳ್ಳುವಂತಹ ಅಂದ ಇಲ್ಲದಿದ್ದರೂ ಆತನನ್ನು ಒಂದು ಸಲ ನೋಡಿದರೆ ಎರಡನೆ ಸಲ ನೋಡಬೇಕೆನ್ನುವಂತೆ ಮುಖದಲ್ಲಿ ಆಕರ್ಷಣೆ ಕಳೆ ಇರುತ್ತಿತ್ತೆಂದು ಹೇಳಬಹುದು. ಆತನ ಕಳೆ ಆತನಿಗೆ ಪ್ರತ್ಯೇಕವಾದ ಅಂದವನ್ನು ಕೈಗೂಡಿಸಿದೆ. ಮುಖದಲ್ಲಿ ಕಳೆಯಿಲ್ಲದ ಮನುಷ್ಯರಿಗಿಂತ ಕೃಷ್ಣನು ಅಂದವಾದ ವರ್ಚಸ್ಸು ಇರುವವನೆಂದು ಹೇಳಬಹುದು.

# ಬೃಂದಾವನವು - ಶೃಂಗಾರವನವಾ?

ಕೃಷ್ಣನ ಜೀವನದಲ್ಲಿ 15 ರಿಂದ 30 ವರ್ಷಗಳ ವಯಸ್ಸಿನವರೆಗೂ ಬೃಂದಾವನ ಜೀವನ ಒಂದು ಅಂದವಾದ ಅನುಭೂತಿಯೇ ಅಲ್ಲದೆ, ಚಂದವಾದ ಅವಗಾಹನೆ ಎಂದು ಸಹ ಹೇಳಬಹುದು. ಆದಿನ ಬೃಂದಾವನದಲ್ಲಿ ಕೃಷ್ಣನ ಸನ್ನಿಧಿಯಲ್ಲಿ ಅಂದ ಚಂದ ಎರಡೂ ಇರುತ್ತಿದ್ದವು. ಮಾಯಾ ಗುಣಗಳಿಂದ ಕೂಡಿಕೊಂಡ ಮನುಷ್ಯರಿಗೆ ಬೃಂದಾವನದಲ್ಲಿ ಗೋಪಿಕೆಯರ ಅಂದ, ಕೃಷ್ಣನ ಶೃಂಗಾರ ಕಾಣಿಸಿತು. ಅಷ್ಟು ಹೊರತು ಇತ್ತ ಗೋಪಿಕೆಗಳಾಗಲಿ, ಅತ್ತ ಕೃಷ್ಣನಾಗಲಿ ಪ್ರಜೆಗಳಿಗೆ ಅರ್ಥ ಆಗಿಲ್ಲವೆಂದೇ ಹೇಳಬಹುದು. ಈದಿನ ಪ್ರಜೆಗಳಲ್ಲಿರುವ

ಅಜ್ಞಾನ ತೊಲಗಿಹೋಗಿ ಕೃಷ್ಣನು ಭಗವಂತನಾಗಿ ತಿಳಿಯಬೇಕೆಂದರೂ ಅಥವಾ ಶ್ರೇಷ್ಠನೆಂದು ತಿಳಿಯಬೇಕೆಂದರೂ ಕೃಷ್ಣನ ಬೃಂದಾವನ ಜೀವನವೊಂದರ ವಿಶೇಷವೇನು ಎಂದು ವಿಶ್ಲೇಷಿಸಿ ನೋಡಬೇಕಾಗಿದ್ದೆ. ಆ ವಿಶ್ಲೇಷಣೆಯಲ್ಲಿ ಕೃಷ್ಣನ ಹತ್ತಿರಕ್ಕೆ ಬಂದಿರುವ ಗೋಪಿಕರೆಷ್ಟು ಜನ? ಬಂದಿರುವವರು ಆತನಿಗಿಂತ ವಯಸ್ಸಿನಲ್ಲಿ ಚಿಕ್ಕವರೇನಾ? ರಾಧಾದೇವಿ ಕೃಷ್ಣನಿಗಿಂತ ಚಿಕ್ಕವಳಾ, ದೊಡ್ಡವಳಾ? ರಾಧಯೊಂದರ ಪ್ರಣಯವೇನು? ಕೃಷ್ಣನ ಹತ್ತಿರಕ್ಕೆ ಬಂದಿರುವ ಸ್ತ್ರೀಯರೆಲ್ಲ ಗೊಲ್ಲರೇನಾ? ಬೃಂದಾವನದಲ್ಲಿ ಕೃಷ್ಣನ ಹತ್ತಿರ ಮನುಷ್ಯರಾಗಲಿ, ಪ್ರಾಣಿಗಳಾಗಲಿ, ಪಕ್ಷಿಗಳಾಗಲಿ ಎಲ್ಲಾ ಸ್ತ್ರೀ ಜಾತಿಯವೇ ಏತಕ್ಕಿವೆ? ಕೃಷ್ಣನು ಶೃಂಗಾರ ಪ್ರೀಯನಾ? ಇಷ್ಟು ಪ್ರಶ್ನೆಗಳಿಗೆ ಸರಿಯಾದ ಸಮಾಧಾನ ದೊರೆತಾಗ ಕೃಷ್ಣನ ಬೃಂದಾವನ ಜೀವನ ನಮಗೆ ಅರ್ಥವಾಗುತ್ತದೆ. ಕೃಷ್ಣನಿಗೆ ಅಷ್ಟ ಪತ್ನಿಯರಿದ್ದರೂ ಆತನ ಪಕ್ಕದಲ್ಲಿ ಯಾವ ಹೆಂಡತಿ ಕಾಣಿಸದೆ ಕೇವಲ ರಾಧ ಮಾತ್ರವೇ ಕಾಣಿಸುತ್ತಿದ್ದಾಳೆ. ಎಲ್ಲಿಯಾದರೂ ರಾಧಾಕೃಷ್ಣ ಎನ್ನುವ ಹೆಸರಿದೆ, ಆದರೆ ಸತ್ಯಭಾಮ ಕೃಷ್ಣ ಎಂದಾಗಲಿ, ರುಕ್ಮಿಣಿ ಕೃಷ್ಣ ಎಂದಾಗಲಿ ಯಾರೂ ಕರೆಯುವುದಿಲ್ಲ. ಕೃಷ್ಣನ ಯಾವ ಚಿತ್ರಪಟದಲ್ಲಾಗಲಿ ಕೃಷ್ಣನ ಪತ್ನಿಯರಲ್ಲಿ ಒಬ್ಬರು ಸಹ ಕಾಣಿಸುವುದಿಲ್ಲ. ಎಷ್ಟು ಚಿತ್ರಗಳಲ್ಲಾಗಲಿ ರಾಧಾಕೃಷ್ಣರೇ ಇರುತ್ತಾರೆ. ರಾಧ, ಕೃಷ್ಣನ ಜೀವನದಲ್ಲಿ ಮರೆಯಲಾರದ ಘಟ್ಟವಾದುದೆಂದು ಹೇಳಬಹುದು.

ಬೃಂದಾವನದಲ್ಲಿ ರಾಧೆಗೆ ಕೃಷ್ಣನೊಂದಿಗೆ ಪರಿಚಯ ಏರ್ಪಟ್ಟಿದೆ. ಆಗ ಕೃಷ್ಣನ ವಯಸ್ಸು 15 ವರ್ಷಗಳ 9 ತಿಂಗಳ 7 ದಿನಗಳು ಆಗಿದ್ದು, ರಾಧೆಯ ವಯಸ್ಸು 14 ವರ್ಷಗಳ 2 ತಿಂಗಳ 15 ದಿನಗಳು. ಇದನ್ನನುಸರಿಸಿ ರಾಧಾದೇವಿ ಕೃಷ್ಣನಿಗಿಂತ 1ವರ್ಷ 6 ತಿಂಗಳ 22 ದಿನಗಳು ಚಿಕ್ಕವಳೆಂದು ಹೇಳಬಹುದು. ಬೃಂದಾವನದಲ್ಲಿ ಮೊದಲು ರಾಧಯೊಂದಿಗೆ ಪರಿಚಯ ಏರ್ಪಟ್ಟ ನಂತರ ಕಾಲಕಳೆದಂತೆಲ್ಲ, ಒಬ್ಬೊಬ್ಬರು ಕೃಷ್ಣನ ಹತ್ತಿರಕ್ಕೆ ಆತನೊಂದಿಗೆ ಬೃಂದಾವನದಲ್ಲಿ ಸ್ವಲ್ಪ ಸಮಯ ಕಾಲಕಳೆದು ಹೋಗುತ್ತಿದ್ದರು. ಕೃಷ್ಣನು ಪ್ರತಿ ದಿನವಾಗಲಿ, ದಿನ ಬಿಟ್ಟು ದಿನವಾಗಲಿ, ಒಂದೊಂದು ಸಲ ಮೂರು ದಿನಗಳಿಗೆ

ಒಂದು ಸಲ ಆದರೂ ಬೃಂದಾವನಕ್ಕೆ ಹೋಗಿ ಒಂದುದಿನ ಇಲ್ಲವೆ ಎರಡು ದಿನಗಳು ಇದ್ದು ಪುನಃ ಮಧುರೆಗೆ ಬರುತ್ತಿದ್ದನು. ಮಧುರೆಯಲ್ಲಿದ್ದಷ್ಟು ಕಾಲ ಕೃಷ್ಣನು ಮದುವೆ ಮಾಡಿಕೊಳ್ಳಲಿಲ್ಲ. ಕೃಷ್ಣನು ದ್ವಾರಕೆಗೆ ಹೋದ ನಂತರ ಮೊದಲು ರುಕ್ಮಿಣಿದೇವಿಯನ್ನು ವಿವಾಹವಾಗಿದ್ದಾರೆ. ನಂತರ ಉಳಿದ ಏಳು ಜನರನ್ನು ಪತ್ನಿಯರನ್ನಾಗಿ ಮಾಡಿಕೊಂಡಿದ್ದಾನೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವುದು ಏನೆಂದರೆ! ಆತನಿಗೆ ಹತ್ತಿರವಾಗಿ ಕಾಲ ಕಳೆದವರಲ್ಲಿ ರಾಧ ಎಲ್ಲರಿಗೂ ಗೊತ್ತು, ಹಾಗೆಯೇ ಎಂಟುಜನ ಪತ್ನಿಯರು ಎಲ್ಲರಿಗೂ ತಿಳಿದವರೆ. ಇನ್ನು ಗೋಪಿಕೆಯರು ಎಷ್ಟುಜನ ಎನ್ನುವುದು ತಿಳಿಯದ ಸಂಖ್ಯೆ. ಆದರೆ ಕೆಲವರು 16 ನೂರು ಜನ ಗೋಪಿಕೆಯರೊಂದಿಗೆ ಕೃಷ್ಣನು ಬೃಂದಾವನದಲ್ಲಿ ತಿರುಗಿದ್ದಾನೆಂದರೆ, ಕೆಲವರೇನೊ 16 ಸಾವಿರ ಜನ ಗೋಪಿಕೆಯರೊಂದಿಗೆ ತಿರುಗಿದ್ದಾನೆಂದು ಹೇಳುತ್ತಿದ್ದಾರೆ. ಇತಿಹಾಸಕಾರರು ಬರೆದಿರುವುದು ತಪ್ಪಾ? ಒಪ್ಪಾ? ಎಂದು ನೋಡಬೇಕಾದ ಅಗತ್ಯವಿದೆ. ಹಾಗೆ ನೋಡಿದರೆ 16 ನೂರುಜನ ಎನ್ನುವ ಮಾತಾಗಲಿ, 16 ಸಾವಿರಜನ ಎನ್ನುವ ಮಾತಾಗಲಿ ಪೂರ್ತಿಯಾಗಿ ಅವಾಸ್ತವವೆಂದು ತಿಳಿಯುತ್ತಿದೆ.

ಬೃಂದಾವನದಲ್ಲಿ ಮೊದಲು ರಾಧೆ ಭಗವಂತನಾದ ಕೃಷ್ಣನ ಹತ್ತಿರಕ್ಕೆ ಬಂದರೆ ನಂತರ ಒಬ್ಬರ ನಂತರ ಒಬ್ಬರು ಗೋಪಿಕೆಯರು ಬರುವುದು ನಡೆದಿದೆ. ಹಾಗೆ ಬರುತ್ತಾ 15 ವರ್ಷಗಳ ಬೃಂದಾವನ ಕಾಲದಲ್ಲಿ ಒಟ್ಟು 99 ಜನ ಗೋಪಿಕೆಯರು ಬಂದಿದ್ದಾರೆ. ಮೊದಲು ಒಬ್ಬ ರಾಧೆ ನಂತರ 99 ಗೋಪಿಕೆಯರು ಒಟ್ಟಾರೆ 100 ಜನ ಬೃಂದಾವನ ಜೀವನದಲ್ಲಿ ಕೃಷ್ಣನೊಂದಿಗೆ ಕಾಲ ಕಳೆದಿದ್ದಾರೆ. ಹಾಗೆ ಬಂದವರಲ್ಲಿ ಕೃಷ್ಣನಿಗಿಂತ ದೊಡ್ಡವಯಸ್ಸಿನವರು ಸಹ ಕೆಲವರಿದ್ದಾರೆ. ಮೊದಲು ಬಂದ ರಾಧ ಆಗಲಿ ನಂತರ ಬಂದವರಾಗಲಿ ಕೃಷ್ಣನ ಹತ್ತಿರಕ್ಕೆ ಶೃಂಗಾರಕ್ಕೋಸ್ಕರ ಬಂದಿದ್ದಾರೆನ್ನುವುದಕ್ಕೆ ಸಹ ಸಾಧ್ಯವಿಲ್ಲ. ಏಕೆಂದರೆ ಕೃಷ್ಣನು ಕಪ್ಪಗಿರುವವನು ಮತ್ತು ಹೇಳಿಕೊಳ್ಳುವಂತಹ ಸುಂದಗಾರನೂ ಅಲ್ಲ. ಆದ್ದರಿಂದ ಶೃಂಗಾರಕ್ಕೋಸ್ಕರ ಯಾರು ಬಂದಿರಲಿಲ್ಲ. ಹಾಗಾದರೆ ಏಕೆ ಬಂದಿದ್ದಾರೆಂದು

ಕೇಳಿದರೆ ಅದಕ್ಕೆ ಬಲವಾದ ಕಾರಣವಿದೆ. ಅದೇನೆಂದರೆ! ಭೂಮಿಮೇಲೆ ಧರ್ಮಗಳು ಒಂದೇಸಲವೇ ನಶಿಸಿಹೋಗುವುದಿಲ್ಲ. ನೂರಾರೂ, ಸಾವಿರಾರು ವರ್ಷಗಳಿಂದ ಧರ್ಮಗಳ ಸ್ಥಾನದಲ್ಲಿ ಅಧರ್ಮಗಳು ಸೇರುತ್ತಾ ಬರುತ್ತವೆ. ಹಾಗೆ ನಡೆಯುತ್ತಾ ಬಂದು ಅಧರ್ಮಗಳು 90 ರಷ್ಟು ಬೆಳೆಯುತ್ತಲೇ ಭಗವಂತನಾದ ಕೃಷ್ಣನು ಭೂಮಿ ಮೇಲಕ್ಕೆ ಬಂದಿದ್ದಾನೆ. ಕೃಷ್ಣನ ಜನ್ಮಕ್ಕಿಂತ ಕೆಲವು ಸಾವಿರ, ಲಕ್ಷಗಳ ವರ್ಷಗಳಿಂದ ಅಧರ್ಮಗಳು ಬೆಳೆಯುತ್ತಾ ಬಂದರೂ, ಅಧರ್ಮಗಳಿಗೆ ಒಳಗಾಗದೆ ಧರ್ಮಗಳನ್ನೇ ಆಶ್ರಯಿಸಿ, ಪೂರ್ತಿ ಶ್ರದ್ಧೆಯಿಂದ ಜ್ಞಾನವನ್ನು ತಿಳಿದುಕೊಳ್ಳುತ್ತಾ, ದೇವರನ್ನು ದರ್ಶಿಸಿಕೊಳ್ಳಬೇಕೆಂದು ಆತನಲ್ಲಿ ಬೆರತು ಹೋಗಬೇಕೆಂದು ಪರಿತಪಿಸುವವರು ಕೆಲವರಿರಬಹುದು. ಹಾಗೆ ಜನ್ಮ ಜನ್ಮಕ್ಕು ದೇವರ ಮೇಲೆ ಇಷ್ಟತೆಯನ್ನು ಬೆಳೆಸಿಕೊಂಡವರಾಗಿ ದೈವಸನ್ನಿಧಿಗೆ ಸೇರಬೇಕೆಂದು, ದೇವರನ್ನು ದರ್ಶಿಸಬೇಕೆಂದು ತಪಿಸುವವರು ಒಟ್ಟು 108 ಜನರು ಇರುತ್ತಿದ್ದರು. ಆ ನೂರಎಂಟುಜನರಲ್ಲಿ ಶ್ರದ್ಧೆವೊಂದರ ಮತ್ತು ವಿಶ್ವಾಸವೊಂದರ ತೀವ್ರತೆಯನ್ನು ಅನುಸರಿಸಿ ಅವರನ್ನು ಮೂರು ಭಾಗಗಳಾಗಿ ವಿಭಜಿಸುವುದು ನಡೆದಿದೆ. ಮೂರು ಭಾಗಗಳ ಶ್ರದ್ಧೆಯಲ್ಲಿ ಮೊಟ್ಟಮೊದಲ ಶ್ರದ್ಧೆಯನ್ನನುಸರಿಸಿದವರು ರಾಧ ಒಬ್ಬಳೆ. ನಂತರ ಶ್ರದ್ಧೆಯನ್ನನುಸರಿಸಿ 99ಜನ ಇದ್ದಾರೆ. ಆ ನಂತರ ಶ್ರದ್ಧೆಯನ್ನು ಅನುಸರಿಸಿ ಮೂರನೆ ಗುಂಪಾಗಿ ಎಂಟು ಜನ ಇದ್ದಾರೆ. ಈ ನೂರ ಎಂಟುಜನ 1+99+8 = 108. ಅಧರ್ಮಗಳು ಅಭಿವೃದ್ಧಿ ಆಗುವ ಕಾಲದಲ್ಲಿಯೇ ಧರ್ಮಗಳನ್ನು ಬಿಡದಂತೆ, ದೇವರನ್ನು ಸೇರಬೇಕೆಂದು ದೈವ ದರ್ಶನ ಬೇಕೆನ್ನುವ ಛಲದಿಂದ ಇರುವುದರಿಂದ ಅವರ ಉದ್ದೇಶ ಸ್ವಲ್ಪಮಟ್ಟಿಗೆ ನೇರವೇರುವುದಕ್ಕೆ ಅವಕಾಶ ಬಂದಿದೆ.

ಇಲ್ಲಿ ಸ್ವಲ್ಪ ವಿವರವಾಗಿ ಅರ್ಥ ಮಾಡಿಕೊಳ್ಳಬೇಕಾದ ಕೆಲಸ ಇದೆ. ಅದೇನೆಂದರೆ, ಭಕ್ತಿಹೊಂದಿದವರು ಅವರ ವಿಶ್ವಾಸ ಇದ್ದಷ್ಟು ದೇವರನ್ನು ಸೇರಬೇಕೆಂದು, ದೇವರನ್ನು ದರ್ಶಿಸಿಕೊಳ್ಳಬೇಕೆಂದು ಅಂದುಕೊಳ್ಳುವುದು ಸಹಜವೇ. ಆದರೆ ದೇವರು ಕಾಣಿಸುವುದಿಲ್ಲ! ಹಾಗೆಯೇ ದೇವರ ಹತ್ತಿರಕ್ಕೆ

ಸೇರುವುದಕ್ಕೆ ದೇವರು ಒಂದುಕಡೆ ಇರುವವನು ಅಲ್ಲ! ಆದ್ದರಿಂದ ಆ ಎರಡು ಕೋರಿಕೆಗಳು ಒಳ್ಳೆಯವೇ ಆದರೂ ನೇರವೇರುವುದಕ್ಕೆ ಸಾಧ್ಯವಿಲ್ಲ. ಅಧರ್ಮಗಳು ಅಭಿವೃದ್ಧಿಯಾಗುವ ಕಾಲದಲ್ಲಿಯೇ ದೇವರ ಮೇಲೆ ವಿಶ್ವಾಸದಿಂದ ಮಾಯೆಕಡೆ ಹೋಗದಂತೆ, ದೇವರಕಡೆ ಬರಬೇಕೆಂದು ಗಟ್ಟಿ ಉದ್ದೇಶದಿಂದ ಕೆಲವು ಜನ್ಮಗಳಿಂದ ಬರುವುದರಿಂದ, ಅವರ ಭಾವವು ಧರ್ಮಯುಕ್ತವೇ ಆಗಿರುವುದರಿಂದ, ಅವರ ಉದ್ದೇಶ ನೆರವೇರುವುದಕ್ಕೆ ದೇವರ ನಿಯಮವು ಸಹಕರಿಸಿದೆ. ಆದ್ದರಿಂದ ದೇವರ ಅಂಶ ಭಗವಂತನಾಗಿ ಭೂಮಿಮೇಲಕ್ಕೆ ಬಂದಿರುವ ಕಾಲದಲ್ಲಿಯೇ ಆ ನೂರ ಎಂಟುಜನರನ್ನು ಭಗವಂತನ ಹತ್ತಿರಕ್ಕೆ ಸೇರಿಸಿದೆ, ಭಗವಂತನ ದರ್ಶನ ಲಭಿಸುವಂತೆ ಮಾಡಿದೆ. **(ಮುಖ್ಯ ಸೂಚನೆ) :– ಇಲ್ಲಿ ದೈವ ನಿಯಮ (ದೇವರ ಕಾನೂನು) ಎನ್ನುವ ಹೊಸ ಪದವನ್ನು ಉಪಯೋಗಿಸಲ್ಪಟ್ಟಿದೆ. ಅದನ್ನು ತಿಳಿಯಬೇಕೆಂದರೆ "ದೆವ್ವಗಳ, ಭೂತಗಳ ಯಥಾರ್ಥ ಸಂಘಟನೆಗಳು" ಎಂಬ ಗ್ರಂಥವನ್ನು ಓದಬೇಕಾಗಿರುತ್ತದೆ. ಪ್ರಸ್ತುತಕ್ಕೆ ದೈವ ನಿಯಮ (ದೇವರ ಕಾನೂನು) ಎನ್ನುವ ಮಾತನ್ನು ಪ್ರಕೃತಿ ಅಥವಾ ದೈವಪರಿಪಾಲನೆ ಎಂದು ಅರ್ಥಮಾಡಿಕೊಳ್ಳಿ.** ಎಷ್ಟೋ ಜನ್ಮಗಳಿಂದ ದೇವರನ್ನು ಆರಾಧಿಸುತ್ತಾ, ಅನೇಕ ಜನ್ಮಗಳ ಸಂಸ್ಕಾರ ಇರುವವರಾಗಿ ಇರುವುದರಿಂದ, ಅವರಲ್ಲಿನ ಸಂಸ್ಕಾರ ಬಲವನ್ನು ಅನುಸರಿಸಿ ಮೂರು ಗುಂಪುಗಳಾಗಿ ಅವರಿಗೆ ಅವರ ಉದ್ದೇಶ ನೆರವೇರಿದೆ. ಇಲ್ಲಿ ಒಂದು ಮುಖ್ಯವಾದ ಪ್ರಶ್ನೆಯನ್ನು ಕೆಲವರು ಜ್ಞಾನಿಗಳು ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೆ! ಭೀಷ್ಮನು ಸಹ ಅನೇಕ ಜನ್ಮಗಳ ಸಂಸ್ಕಾರದಿಂದಲೇ ಹುಟ್ಟಿದ್ದಾನೆಂದು, ಆದ್ದರಿಂದ ಆ ಜನ್ಮದಲ್ಲಿಯೇ ದೇವರಲ್ಲಿ ಐಕ್ಯವಾಗಿ ಮುಕ್ತಿ ಹೊಂದಿದ್ದಾನೆಂದು ಹೇಳಿದ್ದಾರೆ! ಪೂರ್ವಜನ್ಮಗಳಿಂದ ಭೀಷ್ಮನು ಸಹ ದೇವರನ್ನು ಸೇರಬೇಕೆನ್ನುವ ಉದ್ದೇಶದಿಂದಲೇ ಬಂದಿದ್ದಾನೆ! ಅಂತಹದರಲ್ಲಿ ಈತನೊಂದಿಗೆ ಸೇರಿಸಿಕೊಂಡು ಹೇಳಿದರೆ 109 ಜನ ಸಂಖ್ಯೆ ಆಗುತ್ತದೆ! 108 ಜನ ಸ್ತ್ರೀಯರಾಗಿ ಹುಟ್ಟಿ ಕೃಷ್ಣನ ಹತ್ತಿರಕ್ಕೆ ಸೇರಿದಾಗ, ಭೀಷ್ಮನು ಮಾತ್ರ ಪುರುಷನಾಗಿ ಹುಟ್ಟಿ ಕೃಷ್ಣನಿಗೆ ದೂರವಾಗಿಯೇ ಇರುತ್ತಾ ಕೊನೆಯಲ್ಲಿ ಮೋಕ್ಷವನ್ನು ಹೊಂದಿ ದೇವರಲ್ಲಿ ಸೇರಿಹೋಗಿದ್ದಾನೆಂದು ಹೇಳಿದ್ದಾರೆ! ಇಲ್ಲಿ

ಭೀಷ್ಮನಿಗು ಉಳಿದ 108 ಜನರಿಗು ವ್ಯತ್ಯಾಸ ಇದೆಯಾ! ಎಂದು ಕೇಳಬಹುದು. ಅದಕ್ಕೆ ಉತ್ತರ ಈ ವಿಧವಾಗಿ ಇದೆ.

ಕೃಷ್ಣನು ಹುಟ್ಟಿದ ಕಾಲದಲ್ಲಿಯೇ ಗತಜನ್ಮಗಳ ಸಂಸ್ಕಾರಗಳಿಂದ ಹುಟ್ಟಿದವರು ಒಟ್ಟು 109 ಎನ್ನುವ ಮಾತು ಸತ್ಯವೇ, ಆದರೆ ಅವರಲ್ಲಿನ ಉದ್ದೇಶದಲ್ಲಿ ಸ್ವಲ್ಪ ವ್ಯತ್ಯಾಸ ಇರುವುದರಿಂದ ಭೀಷ್ಮನನ್ನು ಮಾತ್ರ 108 ಜನರಲ್ಲಿ ಸೇರಿಸದಂತೆ ವಿಭಜಿಸಬೇಕಾಗಿ ಬಂದಿದೆ. ಆ ವಿಭಜನೆಯಲ್ಲಿಯೇ ಭೀಷ್ಮನಿಗೆ ಪುರುಷ ಶರೀರಬಂದಾಗ ಉಳಿದ 108 ಜನರಿಗೆ ಸ್ತ್ರೀ ಶರೀರಗಳು ಲಭಿಸಿವೆ. ಭೀಷ್ಮನು ದೇವರೊಳಗೆ ಐಕ್ಯವಾಗಬೇಕೆಂದು ಅಂದುಕೊಂಡಿದ್ದಾನೆ. ಉಳಿದ 108 ಜನರು ದೇವರ ಹತ್ತಿರಕ್ಕೆ ಸೇರಬೇಕೆಂದು, ದೇವರನ್ನು ದರ್ಶಿಸಿಕೊಳ್ಳಬೇಕೆಂದು ಅಂದುಕೊಂಡಿದ್ದಾರೆ. ಅವರ ಉದ್ದೇಶಗಳಲ್ಲಿ ವ್ಯತ್ಯಾಸ ಇರುವುದರಿಂದ ಅವರಿಗೆ ಹಾಗೆಯೇ ನೆರವೇರಿಸಲ್ಪಟ್ಟಿದೆ. **ಭೀಷ್ಮನು ಮೋಕ್ಷವನ್ನು ಸೇರಿದವರಿಗೆ ಜ್ಞಾನಗುರುತಾಗಿ ಉಳಿದಿದ್ದಾನೆ. ಉಳಿದ 108 ಜನರು ಮೋಕ್ಷವನ್ನು ಸೇರಬೇಕಾದವರಿಗೆ ಜ್ಞಾನಗುರುತಾಗಿ ಉಳಿದಿದ್ದಾರೆ.** ನಾವು ಸಹ ಪ್ರಯತ್ನಮಾಡಿ ಕೊನೆಗೆ ಮೋಕ್ಷವನ್ನು ಸೇರಬೇಕಾದವರೆ, ಆದ್ದರಿಂದ ಮುಖ್ಯವಾಗಿ 108 ಜನರನ್ನು ನೋಡಿ ಕಲೆತುಕೊಳ್ಳಬೇಕಾದ ಜ್ಞಾನ ಎಷ್ಟೋ ಇದೆ. 108 ಜನರಲ್ಲಿ ಗತ ಜನ್ಮಗಳಲ್ಲಿ 100 ಜನ ಪುರುಷರಾಗಿ 8 ಜನ ಸ್ತ್ರೀಯರಾಗಿ ಹುಟ್ಟಿದ್ದಾರೆ. ಕೃಷ್ಣನು ಭೂಮಿ ಮೇಲಕ್ಕೆ ಬಂದಾಗ ಒಟ್ಟು 108 ಜನ ಸ್ತ್ರೀಯರಾಗಿ ಹುಟ್ಟುವುದರಲ್ಲಿ ಒಂದು ವಿಶೇಷವಾದ ಅರ್ಥವಿದೆ. ಆ ಅರ್ಥ ನಮಗೆ ಎಷ್ಟೋ ಮುಖ್ಯವಾದ ಜ್ಞಾನ ಆಗುತ್ತದೆ. ಆದ್ದರಿಂದ 108 ಮಂದಿ ಮೋಕ್ಷವನ್ನು ಸೇರಬೇಕಾದವರಿಗೆ ಜ್ಞಾನ ಗುರುತು ಎಂದು ಹೇಳಿದ್ದೇವೆ. ಗತ ಜನ್ಮಗಳಲ್ಲಿ ಜ್ಞಾನಿಗಳಾದ 108 ಜನ ಸ್ತ್ರೀಯರಾಗಿ ಹುಟ್ಟುವುದು, ಅವರು ಮೂರು ಗುಂಪುಗಳಾಗಿ ವಿಭಜಿಸಲ್ಪಡುವುದು ನಡೆದಿದೆಯೆಂದು ಹೇಳಿಕೊಂಡಿದ್ದೇವೆ. ಮೊದಲ ಗುಂಪಿನಲ್ಲಿ ಒಬ್ಬರೇ ಉಳಿದಿದ್ದಾರೆ. ಆಕೆಯೇ ರಾಧಾದೇವಿ. ಎರಡನೇ ಗುಂಪಿನಲ್ಲಿ 99 ಜನ ಉಳಿದಿದ್ದಾರೆ, ಅವರೆ ಬೃಂದಾವನದಲ್ಲಿನ ಗೋಪಿಕೆಯರು. ಮೂರನೇ ಗುಂಪಿನಲ್ಲಿ

8 ಜನ ಇದ್ದಾರೆ, ಅವರೆ ಕೃಷ್ಣನಿಗೆ ಪತ್ನಿಯರಾಗಿ ಇದ್ದಾರೆ. ಹೀಗೆ ಮೂರು ಭಾಗಗಳಾಗಿ ಮಾಡುವುದಕ್ಕೂ ಕೂಡ ಸ್ವಲ್ಪ ಕಾರಣವಿದೆ. ಅವರಲ್ಲಿ ಇರುವ ಉದ್ದೇಶ ಒಂದೇಯಾದರೂ ಅವರಲ್ಲಿರುವ ಶ್ರದ್ಧೆಯಲ್ಲಿ ಚಿಕ್ಕ ವ್ಯತ್ಯಾಸದಿಂದ ಆ ವಿಧವಾಗಿ ವಿಭಜಿಸಬೇಕಾಗಿ ಬಂದಿದೆ. ಮೊದಲ ಶ್ರೇಣಿಯಲ್ಲಿರುವ ರಾಧೆ ಗತ ಜನ್ಮಗಳಲ್ಲಿ ಪುರುಷ ಶರೀರವನ್ನೇ ಧರಿಸಿದರೂ, ದೇವರ ಮೇಲೆ ಉನ್ನತವಾದ ವಿಶ್ವಾಸ ಹೊಂದಿದ್ದರೂ, ಆ ಜೀವಿಯ ಮನಸ್ಸಿನಲ್ಲಿ ಒಂದು ಗಾಢವಾದ ಕೋರಿಕೆ ಇತ್ತು. ಅದೇನೆಂದರೆ! ದೇವರ ಹೆಸರು ಎಲ್ಲಿದ್ದರೂ ಆತನ ಸೇವಕಿಯಾಗಿ ನನ್ನ ಹೆಸರು ಅಲ್ಲಿರಬೇಕು ಎನ್ನುವುದು ಆಕೆಯ ವಾಂಛೆ (ಬಯಕೆ). ದೇವರ ಮೇಲೆ ಅಮಿತವಾದ ವಿಶ್ವಾಸ, ಬಲವಾದ ಶ್ರದ್ಧೆ ಇರುವುದರಿಂದ ಆಕೆಯ ಕೋರಿಕೆ ದೇವರ ಪರಿಪಾಲನೆಯಲ್ಲಿ ಆಮೋದಯೋಗ್ಯವಾಗಿದೆ. ಆದರೆ ದೇವರಿಗೆ ಹೆಸರಿರುವುದಿಲ್ಲ, ದೇವರ ಅಂಶವಾದ ಭಗವಂತನಿಗೆ ಹೆಸರಿರುತ್ತದೆ. ಆದ್ದರಿಂದ ಆಕೆಯ ಕೋರಿಕೆಯ ಪ್ರಕಾರ ಭಗವಂತನ ಹೆಸರಿನ ಪಕ್ಕದಲ್ಲಿ ಆಕೆ ನಿಂತಿರುವಂತೆ ನಡೆದಿದೆ. ರಾಧೆ ದೇವರ ದರ್ಶನ ಬೇಕೆಂದು ಸಹ ಕೋರಿಕೊಂಡಿದ್ದಾಳೆ. ಹಾಗೆಯೇ ದೇವರ ಹತ್ತಿರ ಸ್ವಲ್ಪಕಾಲವಾದರೂ ಇರಬೇಕೆಂದುಕೊಂಡಿದ್ದಾಳೆ. ಗತ ಜನ್ಮಗಳಲ್ಲಿ ರಾಧೆ ಪುರುಷ ಶರೀರದಲ್ಲಿ ಇರುವುದರಿಂದ ಭೌತಿಕವಾದ ಯಾವ ವಾಂಛೆಗಳನ್ನು ಕೋರಲಿಲ್ಲ. ಆದ್ದರಿಂದ ರಾಧೆ ಭಗವಂತನ ಸನ್ನಿಧಾನದೊಳಗೆ ಸೇರಿದ್ದಾಳೆ. ಆದರೆ ರಾಧೆಗೆ ಕೃಷ್ಣನೊಂದಿಗೆ ಮಾನಸಿಕ ಸಂಬಂಧ ಹೊರತು ಶರೀರ ಸಂಬಂಧ ಏನು ಇಲ್ಲ. ರಾಧೆ ಕೋರಿಕೆಗಳೆಲ್ಲ ದೈವಪಾಲನೆಗೆ ಆಮೊದಯೋಗ್ಯ ಆಗಿರುವುದರಿಂದ ಆಕೆಯ ಕೋರಿಕೆಗಳೆಲ್ಲ ದೈವಾಂಶ ಭೂಮಿ ಮೇಲಕ್ಕೆ ಬಂದಾಗ ನೆರವೇರಿವೆ. ಭಗವಂತನು ದೇವರು ಬೇರೇಯಲ್ಲ, ಆದ್ದರಿಂದ ಭಗವಂತನು ಕೃಷ್ಣನ ರೂಪದಲ್ಲಿ ಇದ್ದಾಗ ತನ್ನ ಹದಿನೈದನೆ ವರ್ಷದಲ್ಲಿಯೇ ಆತನ ಹತ್ತಿರಕ್ಕೆ ಸೇರಲ್ಪಟ್ಟಿದ್ದಾಳೆ. ಆತನಿಗೆ ಸೇವ ಮಾಡಲ್ಪಟ್ಟಿದ್ದಾಳೆ. ಕೃಷ್ಣನಿಗೆ ಹತ್ತಿರವಾಗಿರುವ ಭಾಗ್ಯ ರಾಧಗೆ ಸಿಕ್ಕಿದೆ. ರಾಧಯೊಂದಿಗೆ ಕೃಷ್ಣನ ಹತ್ತಿರ ಎಷ್ಟುಜನ ಗೋಪಿಕೆಯರಿದ್ದರೂ ಅವರ ಹೆಸರು ಕೃಷ್ಣನ ಪಕ್ಕದಲ್ಲಿ ನಿಲ್ಲಲಿಲ್ಲ. ರಾಧಾಕೃಷ್ಣ ಎಂಬ ಹೆಸರು ಶಾಶ್ವತವಾಗಿ ಈದಿನಕ್ಕೂ ನಿಂತುಹೋಗಿದೆ, ಭವಿಷ್ಯತ್ತಿನಲ್ಲಿಯೂ ಸಹ ಇರುತ್ತದೆ.

ರಾಧಾದೇವಿ ಮೊಟ್ಟಮೊದಲು ಬೃಂದಾವನದಲ್ಲಿ ಕೃಷ್ಣನ ಹತ್ತಿರಕ್ಕೆ ಬಂದರೆ ನಂತರ ಗೋಪಿಕೆಯರೆಲ್ಲರೂ ಒಬ್ಬೊಬ್ಬರಾಗಿ ಬಂದಿದ್ದಾರೆ. ರಾಧಾದೇವಿ ಮೊದಲುಗೊಂಡು ಗೋಪಿಕೆಗಳೆಲ್ಲರೂ ಕೃಷ್ಣನ ಹತ್ತಿರಕ್ಕೆ ಸುಮಾರು ನಾಲ್ಕು ಅಥವಾ ಐದು ವರ್ಷಗಳ ಕಾಲದಲ್ಲಿ ಬಂದಿದ್ದಾರೆ. ಇದನ್ನನುಸರಿಸಿ ಎಲ್ಲರೂ ಒಂದೇ ಸಲ ಬರಲಿಲ್ಲವೆಂದು ತಿಳಿಯುತ್ತಿದೆ. ಯಾವ ಗೋಪಿಕೆ ಆತನ ಹತ್ತಿರಕ್ಕೆ ಬಂದರೂ, ಯಾವ ಗೋಪಿಕೆ ಆತನನ್ನು ಮೊದಲ ಸಲ ನೋಡಿದರೂ, ಅವರಿಗೆ ತಿಳಿಯದೆಯೇ ಅವರ ಕಣ್ಣುಗಳಲ್ಲಿ ನೀರು ಬರುತ್ತಿದ್ದವು. ಅವರಿಗೆ ತಿಳಿಯದೆಯೇ ಅವರಲ್ಲಿ ಯಾವುದೊ ಬಾಧೆಯಿಂದ ಆಳುತ್ತಿದ್ದರು. ಅವರನ್ನು ಮೌನವಾಗಿ ಕೃಷ್ಣನು ನೋಡುತ್ತಿದ್ದನು, ಯಾವಮಾತ್ರ ನಿವಾರಿಸುವವನು ಅಲ್ಲ. ಆ ವಿಧವಾಗಿ ಆತನ ಹತ್ತಿರಕ್ಕೆ ಬಂದಿರುವ ನೂರುಜನರಿಗು ರಾಧೆಯೊಂದಿಗೂ ಸಹ ಎಲ್ಲರಿಗೂ ನಡೆದಿದೆ. ಯಾರಾದರೂ ದುಃಖದಿಂದ ಅಳಬಹುದು ಅಥವಾ ಸಂತೋಷದಿಂದಾದರೂ ಅಳಬಹುದು. ಆದರೆ ಆ ದಿನದ ಗೋಪಿಕೆಯರಿಗೆ ಸಂತೋಷವಾಗಲಿ, ದುಃಖವಾಗಲಿ ಇಲ್ಲದೆಯೇ ಅಳುತ್ತಿದ್ದರು. ಹಾಗೆ ಅಳುವುದರಲ್ಲಿ ಅನುಭೂತಿ ಸುಖದುಃಖಗಳಿಗೆ ಅತೀತವಾದುದಾಗಿ ಇರುತ್ತಿತ್ತು. ಹಾಗೆ ಮೊದಲ ದರ್ಶನದಲ್ಲಿ ಎಲ್ಲರಿಗೂ ನಡೆದಿದೆ. ನಂತರ ಯಾವಾಗಾದರೂ ಕೃಷ್ಣನ ಜ್ಞಾಪಕ ಅವರ ಮನಸ್ಸಿನಲ್ಲಿ ಬಂದಾಗ ಅವರ ಗುಂಡಿಗೆಯ ಸ್ಥಾನದಿಂದ ರೋಮಾಂಚನ  ಮೊದಲಾಗಿ ಶರೀರವೆಲ್ಲ ವ್ಯಾಪಿಸುತ್ತಿತ್ತು. ಕೃಷ್ಣನ ದರ್ಶನ ಎಲ್ಲರಿಗೂ ಎಲ್ಲಾ ದಿನಗಳಲ್ಲಿ ದೊರಕುತ್ತಿರಲಿಲ್ಲ. ಗೋಪಿಕೆಗಳೆಲ್ಲರೂ ಸೇರಿ ಬೃಂದಾವನದೊಳಗೆ ಬರುವುದು ನಡೆಯುತ್ತಿರಲಿಲ್ಲ. ಯಾರ ಅನುಕೂಲದ ಪ್ರಕಾರ ಅವರು ಬೃಂದಾವನದೊಳಗೆ ಕೃಷ್ಣನ ದರ್ಶನಕ್ಕೋಸ್ಕರ ಬರುತ್ತಿದ್ದರು. ಪ್ರತಿದಿನ ಬಂದವರಿದ್ದಾರೆ, ದಿನ ಬಿಟ್ಟು ದಿನ ಬಂದವರಿದ್ದಾರೆ. ಹಾಗೆಯೇ ಮೂರುದಿನಗಳಿಗೊಂದು ಸಲ, ನಾಲ್ಕು ದಿನಗಳಿಗೊಂದು ಸಲವೂ ಬಂದವರಿದ್ದಾರೆ. ಒಂದೊಂದುಸಲ ಎಷ್ಟು ಅನುಕೂಲ ಇಲ್ಲದಿದ್ದರೂ ಯಾವುದೊ ಒಂದು ವಿಧವಾಗಿ ಅವಕಾಶ ಕಲ್ಪಿಸಿಕೊಂಡು ಕನಿಷ್ಟ ಹತ್ತುದಿನಗಳಿಗೊಮ್ಮೆಯಾದರೂ ಬಂದವರಿದ್ದಾರೆ. ಹಾಗೆ ಬಂದವರಿಗೆ ಕೃಷ್ಣನು ಕಾಣಿಸಬಹುದು ಅಥವಾ

ಕಾಣಿಸದಿರಬಹುದು. ಏಕೆಂದರೆ! ಕೃಷ್ಣನು ಪ್ರತಿ ದಿನ ಬೃಂದಾವನಕ್ಕೆ ಬರುವವನಲ್ಲ. ಎರಡು ಮೂರು ದಿನಗಳಲ್ಲಿ ಬೃಂದಾವನಕ್ಕೆ ಬಂದರೂ ವಿಶಾಲವಾದ ಬೃಂದಾವನದಲ್ಲಿ ಕೃಷ್ಣನು ಎಲ್ಲಿರುತ್ತಿದ್ದನೋ ಕೆಲವರಿಗೆ ತಿಳಿಯುತ್ತಿರಲಿಲ್ಲ. ಕೆಲವು ದಿನಗಳಿಗೆ ಒಬ್ಬೊಬ್ಬರಿಗೆ ಮಾತ್ರವೆ ಆತನ ದರ್ಶನ ದೊರೆಯುತ್ತಿತ್ತು. ಕೆಲವು ದಿನಗಳಲ್ಲಿ ಐದಾರುಜನ ಗೋಪಿಕೆಗಳೊಂದಿಗೆ ಕಲಿತು ಇರುತ್ತಿದ್ದನು. ಕೆಲವು ದಿನಗಳಲ್ಲಿ ರಾಧೆಯೊಂದಿಗೆ ಮಾತ್ರ ಸೇರಿ ಇರುವಾಗ, ಕೆಲವು ದಿನಗಳಲ್ಲಿ ರಾಧೆಗೂ ಸಹ ಕಾಣಿಸುತ್ತಿರಲಿಲ್ಲ. ಬೃಂದಾವನದಲ್ಲಿ ಕೃಷ್ಣನು ಎಲ್ಲಿದ್ದಾನೊ ಎಂದು ಕೆಲವರು ಗೋಪಿಕೆಯರು ಒಡಗೂಡಿ ಹುಡುಕುತ್ತಿದ್ದರು. ಕೃಷ್ಣನು ಎಲ್ಲಿಯೋ ಒಂದುಕಡೆ ಕುಳಿತುಕೊಂಡು ಮುರಳಿಯನ್ನು ಊದುತ್ತಿರುವಾಗ ಆ ಶಬ್ದವನ್ನು ಅನುಸರಿಸಿ ಆತನನ್ನು ಕಂಡುಕೊಳ್ಳುತ್ತಿದ್ದರು. ಕೆಲವರು ಗೋಪಿ ಕೆಗಳಾದರೆ ಕೃಷ್ಣನನ್ನು ಬೃಂದಾವನಕ್ಕೆ ಯಾವಾಗ ಬರುವೆ ಎಂದು, ಬಂದರೆ ಎಲ್ಲಿರುವೆ ಎಂದು ಕೇಳುತ್ತಿದ್ದರು. ಕೃಷ್ಣನು ಇಂತಹ ಸಮಯಕ್ಕೆ ಬರುತ್ತೇನೆಂದು, ಇಂತಹ ಕಡೆ ಇರುತ್ತೇನೆಂದು ಹೇಳುತ್ತಿದ್ದನು. ಆದರೆ ಕೃಷ್ಣನು ಹಾಗೆ ಬರುತ್ತಿರಲಿಲ್ಲ, ಒಂದುವೇಳೆ ಬಂದರೂ ಹೇಳಿದ ಕಡೆ ಇರುವವನಲ್ಲ. ಈ ವಿಧವಾಗಿ ಅವರನ್ನು ಆಟಆಡಿಸುತ್ತಿದ್ದನು. ಹಾಗೆ ಆತನು ಕಾಣಿಸದೆ ಹೋಗುವುದರಿಂದ ಅವರು ಬೇಸತ್ತು, ಆತನು ದೊರೆತರೆ ಗಟ್ಟಿಯಾಗಿ ಕೇಳಬೇಕೆಂದುಕೊಳ್ಳುತ್ತಿದ್ದರು. ಆತನು ದೊರೆತಾಗ, ಆತನ ದರ್ಶನವಾದಾಗ ತಮ್ಮನ್ನು ತಾವು ಮರೆತು ಹೋಗುತ್ತಿದ್ದರು. ಕೆಲವರು ಕೃಷ್ಣನೊಂದಿಗೆ ಇಂತಹ ಸಮಯದಲ್ಲಿ ಇಂತಹಕಡೆ ನಾನು ಇಲ್ಲಯೇ ಇರುತ್ತೇನೆಂದು ಪ್ರಮಾಣ ಮಾಡಿಸಿಕೊಳ್ಳುತ್ತಿದ್ದರು. ಆದರೂ ಕೃಷ್ಣನ ಮಾತುಗಳು ಅಸತ್ಯಗಳೆ, ಕೃಷ್ಣನ ಪ್ರಮಾಣಗಳು ಅಸತ್ಯಗಳೆ. ಅವರಿಗೆ ಹೇಳಿದಂತೆ ಯಾವ ದಿನ ದೊರೆಯುತ್ತಿರಲಿಲ್ಲ. ಒಂದೊಂದುಸಲ ಕೃಷ್ಣನ ಮೇಲೆ ಕೋಪಬಂದು ರೋಧಿಸಿರುವ ಗೋಪಿಕೆಯರು ಎಷ್ಟೋ ಜನ ಇದ್ದಾರೆ. ಹಾಗೆ ಅವರನ್ನು ಅದೇ ಕೆಲಸವಾಗಿ ಆಳಿಸುತ್ತಿದ್ದನು. ಕೃಷ್ಣನು ಹಾಗೆ ಮಾಡಿದಂತೆಲ್ಲ ಆತನ ದರ್ಶನಕ್ಕೋಸ್ಕರ ಗೋಪಿಕೆಗಳು ಹೆಚ್ಚಾಗಿ ಪರಿತಪಿಸುತ್ತಿದ್ದರು.

ಈ ದಿನ ಬಹಳ ಜನ ಕೃಷ್ಣನು ಶೃಂಗಾರಪುರುಷನೆಂದು ತಿಳಿದುಕೊಳ್ಳು ವುದು ನಡೆಯುತ್ತಿದೆ. ಎಷ್ಟೋ ಜನ ಆತನನ್ನು ಎಷ್ಟೋ ವಿಧಗಳಲ್ಲಿ ಕಡಿಮೆಯಾಗಿ ತಿಳಿದುಕೊಳ್ಳುವುದು ನಡೆಯುತ್ತಿದೆ. ಆದರೆ ನಿಜಕ್ಕೆ ಕೃಷ್ಣನಿಗೆ ರಾಧೆಯೊಂದಿಗಾಗಲಿ, 99 ಮಂದಿ ಗೋಪಿಕೆಯರೊಂದಿಗಾಗಲಿ ಶರೀರ ಸಂಬಂಧ ಯಾವಮಾತ್ರ ಇಲ್ಲ. ಆದಿನದ ಗೋಪಿಕೆಯರಲ್ಲಿ ವಿವಾಹವಾದವರು ಸಹ ಕೆಲವರಿದ್ದಾರೆ. ಅವರೆಲ್ಲರೂ ಕೃಷ್ಣನ ಸನ್ನಿಧಾನದಲ್ಲಿ ಹೊಂದಿದ ಸುಖ ವರ್ಣನಾತೀತವಾದುದು. ಅದರಮುಂದೆ  ಶರೀರ ಸಂಬಂಧ ಸುಖ ಬಹಳ ಚಿಕ್ಕದು. ಮದುವೆಯಾದ ಗೋಪಿಕೆಯರು ತಮ್ಮ ಪತಿಯಹತ್ತಿರ ಹೊಂದಿದ ಶರೀರ ಸುಖಗಳಿಗಿಂತ ಎಷ್ಟೋ ಹಂತಗಳು ಅಧಿಕ ಮಾನಸಿಕ ಸುಖವನ್ನು ಕೃಷ್ಣನ ಹತ್ತಿರ ಹೊಂದಿದ್ದಾರೆ. ಕೃಷ್ಣನ ಹತ್ತಿರ ಹೊಂದಿದ ಮಾನಸಿಕ ಸುಖವನ್ನು, ಶರೀರ ಸುಖಕ್ಕೆ ಹೋಲಿಸಿ ನೋಡಿದರೆ ಭಗವಂತನ ಹತ್ತಿರ ಅನುಭವಿಸಿದ ಆನಂದ ಪರ್ವತದೊಂದಿಗೆ ಸಮಾನವಾದರೆ, ತಮ್ಮ ಪತಿಯರ ಹತ್ತಿರ ಅನುಭವಿಸಿದ ಶರೀರಸುಖ ಚಿಕ್ಕ ಕಲ್ಲಿನಂತಹದ್ದು. ಕೃಷ್ಣನು ಗೋಪಿಕೆಯನ್ನು ತಾಕಿದರೆ ಆತನ ಕೈ ಸ್ಪರ್ಶದಿಂದ ಶರೀರದಲ್ಲಿ ಹೃದಯದಲ್ಲಿ ಒಂದು ವಿಧವಾದ ಅಲೆಯಂತಹ ರೋಮಾಂಚನ ಮೊದಲಾಗಿ ಶರೀರವೆಲ್ಲ ವ್ಯಾಪಿಸುತ್ತಿತ್ತು. ಆ ಹೃದಯ ಸ್ಪಂದನ ಅವರು ಆ ಜನ್ಮದಲ್ಲಾಗಲಿ, ಯಾವ ಜನ್ಮದಲ್ಲಾಗಲಿ ಅನುಭವಿಸಲ್ಪಟ್ಟಿರಲಿಲ್ಲ. ಅಷ್ಟು ದೊಡ್ಡ ಆನಂದ ಆತನನ್ನು ಇವರು ತಾಕಿದರೂ, ಆತನು ಅವರನ್ನು ತಾಕಿದರೂ ಹೊಂದುತ್ತಿದ್ದರು. ಗತಜನ್ಮಗಳಲ್ಲಿ ಅವರು ದೇವರನ್ನು ಆರಾಧಿಸಿದ ಆರಾಧನೆ ಫಲಿತ ದೇವರ ಅಂಶವಾದ ಭಗವಂತನ ಹತ್ತಿರ ನೇರವೇರಿದೆ. ಅದು ಅಳತೆ ಮಾಡಿದಂತೆ ಯಾರಿಗೆ ಎಷ್ಟು ಲಭಿಸಬೇಕೊ ಅಷ್ಟೇ ಲಭಿಸಿದೆ. ಅವರ ಆರಾಧನೆ ಫಲಿತವಾಗಿಯೇ ಸ್ವಲ್ಪ ಜನರಿಗೆ ಬಹಳಸಲ, ಸ್ವಲ್ಪ ಜನರಿಗೆ ಕೆಲವು ಸಲವೆ ಆತನ ದರ್ಶನ ದೊರೆತಿದೆ. ನೂರುಜನರಲ್ಲಿ ಎಲ್ಲರಿಗಿಂತ ಹೆಚ್ಚಾಗಿ ದರ್ಶನ, ಆನಂದ ಹೊಂದಿರುವುದು ಒಂದು ರಾಧಾದೇವಿ ಮಾತ್ರವೆ. ಅಷ್ಟೇ ಅಲ್ಲದೆ ಆಕೆಯ ಭಾಗ್ಯಕ್ಕಿಂತ ಭಕ್ತಿಭಾವ ಮಿಗಿಲಾದದ್ದು,  ಸ್ಥಿರಸ್ಥಾಯಿಯಾಗಿ ಕೃಷ್ಣನ ಹೆಸರಿನ ಮುಂದೆ ರಾಧೆಯ ಹೆಸರು ನಿಂತುಹೋಗಿದೆ. ರಾಧಾಕೃಷ್ಣ ಎಂಬ

ಹೆಸರು ಭಕ್ತರೆಲ್ಲರ ಹತ್ತಿರ ನಿಂತುಹೋಗಿದೆ. ಈ ದಿನ ಬೃಂದಾವನದಲ್ಲಿ ರಾಧಾಕೃಷ್ಣ ಎನ್ನುವ ವಾಕ್ಯ ಎಲ್ಲರಬಾಯಲ್ಲಿ ನಿತ್ಯ ಭಜಿಸಲ್ಪಡುತ್ತಿದೆ. ಬೃಂದಾವನ ಗೋಡೆಗಳ ಮೇಲೆ ಅವರ ಹೆಸರು ಎಲ್ಲಿ ನೋಡಿದರು ಬರೆಯಲ್ಪಟ್ಟಿದೆ. ಕೃಷ್ಣನ ಚಿತ್ರಪಟ ಎಲ್ಲಿದ್ದರೂ ಅದರಲ್ಲಿ ರಾಧೆಯ ಆಕಾರವೂ ಸಹ ಇದೆ. ರಾಧಾದೇವಿ ಭಾಗ್ಯ ಸೌಭಾಗ್ಯ ಅಲ್ಲ. ಆಕೆಯ ಭಾಗ್ಯ ಭಕ್ತಿಭಾಗ್ಯ ಎಂದು ತಿಳಿಯಬೇಕು. ಶರೀರಪತಿಯ ಹತ್ತಿರ ಹೊಂದುವುದು ಸೌಭಾಗ್ಯ. ಸೌಭಾಗ್ಯ ಎಂದರೆ! ಪತಿಯರಿಂದ ಹೊಂದುವ ಶರೀರಸುಖ, ಭಕ್ತಿ ಭಾಗ್ಯ ಎಂದರೆ! ಶರೀರಗಳಿಗೆಲ್ಲ ಅಧಿಪತಿಯಾದ ಭಗವಂತನ ಹತ್ತಿರ ಹೊಂದುವ ಮಾನಸಿಕ ಸುಖ ಎಂದು ಅರ್ಥ ಮಾಡಿಕೊಳ್ಳಬೇಕು. ಸಜೀವ ಶರೀರಗಳಿಗೆಲ್ಲ ಅಂದರೆ ಜಗತ್ತಿಗೆಲ್ಲ ಅಧಿಪತಿಯಾದ ಭಗವಂತನು ಭೂಮಿಮೇಲಕ್ಕೆ ಬಂದಿರುವುದು ಅಪರೂಪವಾಗಿ ನಡೆಯುತ್ತದೆ. ಆ ಸಮಯದಲ್ಲಿ ಭಗವಂತನ ಸನ್ನಿಧಾನಕ್ಕೆ ಭಕ್ತಿಯಿಂದ ಸೇರಿದವರ ಭಾಗ್ಯ ದೊಡ್ಡದೇ ಅಲ್ಲವೆ!

ಅವರ ಭಾಗ್ಯ ಸೌಭಾಗ್ಯ ಅಲ್ಲ, ಅವರ ಭಾಗ್ಯ ಭಕ್ತಿ ಭಾಗ್ಯ. ಆದ್ದರಿಂದ ಅವರನ್ನು ಆ ದಿನಗಳಲ್ಲಿ ಗೋಪಿಕೆಯರು ಎಂದಿದ್ದೇವೆ. ಬೃಂದಾವನದಲ್ಲಿ ಕೃಷ್ಣನ ಹತ್ತಿರಕ್ಕೆ ಸೇರಿದವರು ಎಲ್ಲಾ ಜಾತಿಗಳಿಗೂ ಸೇರಿದವರಿದ್ದಾರೆ. ಆದರೆ ಈದಿನ ಕೆಲವರು ಗೋಪಿಕೆಯರೆಲ್ಲರನ್ನು ಗೊಲ್ಲರನ್ನಾಗಿ ತಿಳಿದುಕೊಳ್ಳುವುದು ನಡೆಯುತ್ತಿದೆ. ಅವರು ತಿಳಿದುಕೊಂಡಂತೆ ಗೋಪಿಕೆಯರೆಲ್ಲ ಗೊಲ್ಲರಲ್ಲ. ಈಗ ನಾವು ಕರೆದುಕೊಳ್ಳುವ ಗೊಲ್ಲಕುಲ ನಿಜಕ್ಕೆ ದೇಶವೆಲ್ಲಾ 'ಯಾದವ ಕುಲ' ಎನ್ನುವ ಹೆಸರಿನಿಂದ ಇದೆ. ಈಗ ಗೊಲ್ಲ, ಯಾದವ ಎನ್ನುವ ಹೆಸರುಗಳು ಬಿಟ್ಟು ಕುಲಕ್ಕೆ ಸಂಬಂಧ ಇಲ್ಲದಿರುವುದು 'ಗೋಪಿಕ' ಎನ್ನುವ ಪದ ಎಂದು ತಿಳಿಯಬೇಕು. ಯಾವ ಕುಲದಲ್ಲಾದರೂ ಗೋಪಿಕೆಯರಿರಬಹುದು. ಇದಕ್ಕು ಮೊದಲು ಗೋವಿಂದ ಎನ್ನುವ ಪದವನ್ನು ಉಚ್ಛರಿಸುವ ವಿಧಾನವನ್ನು ಕುರಿತು, ಗೋವಿಂದ ಎನ್ನುವ ಪದದಲ್ಲಿನ ಅರ್ಥವನ್ನು ಕುರಿತು ಹೇಳಿಕೊಳ್ಳೋಣ. ಗೋವಿಂದದಲ್ಲಿನ ಸಾರಾಂಶ ಕೊನೆಯದಾದ ದೇವರೆಂದು ತಿಳಿದುಕೊಂಡಿದ್ದೇವೆ. ಆ ದೈವವನ್ನು ಕೋರುವವರು ಸ್ತ್ರೀ ಆದರೆ ಗೋಪಿಕೆ ಎಂಬ ಶಬ್ದದಿಂದಲೇ

ಕರೆಯಲ್ಪಡುತ್ತಾರೆ. ಪುರುಷನಾದರೆ ಗೋಪಿ ಎಂದು ಕರೆಯಲ್ಪಡುತ್ತಾರೆ. ಗೋಪಿಕೆಯಾಗಲಿ, ಗೋಪಿಯಾಗಲಿ ಇಬ್ಬರು ಒಂದೇ ಉದ್ದೇಶ ಇರುವವರಾಗಿರುತ್ತಾರೆ. ಕೃಷ್ಣನು ಭಗವಂತನಾಗಿ ಇರುವಾಗ ಸ್ತ್ರೀಯರಾದ ಗೋಪಿಕೆಯರೇ ಅಲ್ಲದೆ, ಪುರುಷರಾದ ಗೋಪಿಗಳು ಸಹ ಎಷ್ಟೋಜನ ಇದ್ದಂತೆ ಹೇಳಬಹುದು. ಆ ಲೆಕ್ಕದ ಪ್ರಕಾರ ಆದಿನದ ವಿದುರನನ್ನು ಗೋಪಿ ಎಂದು ಹೇಳಬಹುದು. ಭಗವಂತನು ಭೂಮಿಮೇಲೆ ಇಲ್ಲದಿರುವಾಗಾಗಲಿ ದೇವರ ಮೇಲೆ ಇಷ್ಟವನ್ನು ಬೆಳೆಸಿಕೊಂಡವರೆಲ್ಲರೂ ಗೋಪಿ, ಗೋಪಿಕೆಯರೇ ಎಂದು ಹೇಳಬಹುದು. ಕೃಷ್ಣನ ಕಾಲದಲ್ಲಿ ಸಾಕ್ಷಾತ್ತು ಭಗವಂತನರೂಪದಲ್ಲಿ ದೈವದರ್ಶನವನ್ನು ಹೊಂದಿದ ಗೋಪಿಕೆಯರು ಈಗಿನ ಗೋಪಿಕೆಯರಿಗಿಂತ ಎಷ್ಟೋ ಅದೃಷ್ಟವಂತರು, ಎಷ್ಟೋ ಉನ್ನತವಾದವರು. ನಮಗೆ ಭಗವಂತನ ದರ್ಶನ ದೊರೆಯಬೇಕೆಂದರೆ ಭೂಮಿಮೇಲಕ್ಕೆ ದೇವರ ಅಂಶ ಭಗವಂತನಾಗಿ ಬರುವವರೆಗು ಆ ಕೋರಿಕೆ ನೇರವೇರುವುದಿಲ್ಲ.

ದೇವರನ್ನು ಸೇರಬೇಕೆನ್ನುವ ಉದ್ದೇಶದಿಂದ ದೈವವನ್ನು ಕೋರುವ ಗೋಪಿ, ಗೋಪಿಕೆಯರು ಇರುವಾಗ ದ್ವಾಪರಯುಗದಲ್ಲಿ ಕೃಷ್ಣನ ಹತ್ತಿರ ಒಬ್ಬ ಪುರುಷಗೋಪಿ ಸಹ ಕಾಣಿಸದಂತೆ, ಎಲ್ಲರೂ ಹೆಣ್ಣು ಗೋಪಿಕೆಯರೆ ಏಕೆ ಕಾಣಿಸಿದ್ದಾರೆಂದು ಕೆಲವರು ಕೇಳಬಹುದು. ಗೋವಿಂದನಾದ ಕೃಷ್ಣನು ಪುರುಷನಾಗಿದ್ದು ಸ್ತ್ರೀಯರಾದ ಗೋಪಿಕರನ್ನೇ ತನ್ನ ಹತ್ತಿರ ಕಾಣಿಸುವಂತೆ ಮಾಡುವುದು ಸಹ ದೊಡ್ಡ ಜ್ಞಾನಸಂದೇಶವೇ ಎಂದು ಅರ್ಥವಾಗುತ್ತಿದೆ.

ಇದಕ್ಕಿಂತ ಮೊದಲು ಕೃಷ್ಣನಿಗೆ ಎಂಟುಜನ ಪತ್ನಿಯರೇಕೆ ಇದ್ದಾರೊ ತಿಳಿದುಕೊಳ್ಳೋಣ. ಬೃಂದಾವನದಲ್ಲಿ ಕೃಷ್ಣನಿಗೆ ರಾಧಾದೇವಿಯೊಂದಿಗೆ ಒಟ್ಟು 100ಜನ ಗೋಪಿಕೆಯರಿದ್ದಾರೆ. ಈ ನೂರು ಜನ ಪೂರ್ವಜನ್ಮಗಳಲ್ಲಿ ಪುರುಷರಾಗಿ ಇದ್ದವರೆಂದು ಹೇಳಿಕೊಂಡಿದ್ದೇವೆ. ದೇವರ ಸನ್ನಿಧಾನದೊಳಗೆ ಸೇರಬೇಕೆನ್ನುವ ಅವರ ಕೋರಿಕೆ ದೇವರ ಅಂಶವಾದ ಭಗವಂತನ ಹತ್ತಿರ ನೇರವೇರಿದೆ. ಗತಜನ್ಮದಲ್ಲಿ ಪುರುಷರಾದ ನೂರುಜನ ಭಗವಂತನ ಹತ್ತಿರಕ್ಕೆ ಸ್ತ್ರೀಯರಾಗಿಯೇ

ಬಂದಿದ್ದಾರೆ. ಈ ವಿಷಯ ಹೀಗಿರುವಾಗ ಗತಜನ್ಮಗಳಲ್ಲಿ ಸ್ತ್ರೀಯರಾಗಿ ಹುಟ್ಟಿದ 8ಜನ ದೇವರೇ ತಮ್ಮ ಪತಿಯಾಗಿರಬೇಕೆಂದು ಕೋರಿಕೊಂಡಿದ್ದಾರೆ. ಅವರಿಗಿರುವ ಭಕ್ತಿಯಿಂದ ಅವರು ಕೋರಿಕೊಂಡ ಕೋರಿಕೆ ನೆರವೇರಬೇಕೆಂದರೆ ಅದು ಭಗವಂತನ ಹತ್ತಿರ ಮಾತ್ರವೇ ನೆರವೇರಬೇಕು. ಭಗವಂತನಿಗೆ ಪತ್ನಿಯರಾದರೆ ದೇವರಿಗೆ ಪತ್ನಿಯರಾದಂತೆ, ಹಾಗೆ ಹೊರತು ಬೇರೆ ವಿಧಾನ ಇಲ್ಲ. ಕೃಷ್ಣನಿಗೆ ಮೊದಲು ರಾಧಾದೇವಿ ಪರಿಚಯವಾಗಿ ನಂತರ ಒಬ್ಬೊಬ್ಬರು ಗೋಪಿಕೆಯರು ಪರಿಚಯವಾಗಿದ್ದಾರೆ. ಒಟ್ಟು ನೂರುಜನ ಬೃಂದಾವನದಲ್ಲಿ ಸೇರಿದ ನಂತರ, ಕೃಷ್ಣನು ಬೃಂದಾವನವನ್ನು ಬಿಟ್ಟು ದ್ವಾರಕೆಯನ್ನು ಸೇರಿದ ನಂತರ, ಆತನಿಗೆ ಪತ್ನಿಯರಾಗಿ ಎಂಟುಜನ ಬಂದಿದ್ದಾರೆ. ಮೊದಲು ಕೃಷ್ಣನ ಹತ್ತಿರಕ್ಕೆ ಭಕ್ತರಾಗಿ ಬರಬೇಕೆಂಬ ಅವರ ಕೋರಿಕೆ ನೇರವೇರಿದೆ, ನಂತರ ಪತ್ನಿಯರಾಗಿ ಬರಬೇಕೆಂಬ ಕೋರಿಕೆ ನೇರವೇರಿದೆ. ಎಂಟುಜನ ಪತ್ನಿಯರಲ್ಲಿ ಹೆಚ್ಚು ಭಕ್ತಿ ಭಾವವಿರುವ ರುಕ್ಮಿಣಿದೇವಿ ಉಳಿದವರಿಗಿಂತ ಮೊದಲು ಪತ್ನಿಯಾಗಿ ಬಂದಿರುವುದು ನಡೆದಿದೆ. ಈ ವಿಧವಾಗಿ ಕೃಷ್ಣನ ಹತ್ತಿರಕ್ಕೆ ಬಂದವರ ಸಂಖ್ಯೆ ಒಟ್ಟು 108ಕ್ಕೆ ಸೇರಿದೆ. ಸೃಷ್ಟಿಯಲ್ಲಿ ದೇವರ ಪರಿಪಾಲನೆ ನಡೆಯುವ ಕಾಲ 108 ಕೋಟಿ ವರ್ಷಗಳು. ಕಾಣಿಸದ ದೇವರ ಪಾಲನೆ 108 ಕೋಟಿ ವರ್ಷಗಳಿಗೆ ಗುರುತಾಗಿ, ಕಾಣಿಸುವ ಭಗವಂತನು 108 ಜನ ಸ್ತ್ರೀಯರೊಂದಿಗೆ ಕಾಲ ಕಳೆದಿದ್ದಾನೆಂದು ತಿಳಿಯುತ್ತಿದೆ. 108 ಕೋಟಿ ವರ್ಷಗಳು ಕಾಣಿಸುವ ಪ್ರಕೃತಿ ಇರುತ್ತದೆ. ಕಾಣಿಸದ ದೇವರು ಆ ಪ್ರಕೃತಿಗಿಂತ ಅಧಿಪತಿ ಎಂದು ಸೂಕ್ಷ್ಮಜ್ಞಾನ ತಿಳಿಯುವುದಕ್ಕೆ 108 ಕೋಟಿ ವರ್ಷಗಳ ಪ್ರಕೃತಿಯನ್ನು 108 ಸ್ತ್ರೀಯರನ್ನಾಗಿ ಮಾಡಿ, ಅವರೆಲ್ಲರಿಗೂ ಪತಿ, ಅಧಿಪತಿ ಪುರುಷನು ನಾನೇ ಎಂದು ಸ್ಥೂಲಜ್ಞಾನ ತಿಳಿಯುವಂತೆ, ದೇವರು ಕಾಣಿಸುವ ಭಗವಂತನಾಗಿ ಕೃಷ್ಣನ ಹೆಸರಿನಿಂದ ಬಂದಿದ್ದಾನೆಂದು ತಿಳಿಯುತ್ತಿದೆ. ಇದರಿಂದ ಕಾಣಿಸದ ದೇವರು 108 ಕೋಟಿ ವರ್ಷಗಳ ಆಯಸ್ಸಾಗಿರುವ ಪ್ರಕೃತಿಯನ್ನು ಪಾಲಿಸಿದಾಗ! ಅದೇ ಪದ್ಧತಿಯನ್ನು ಹೊರಗೆ ತಿಳಿಯುವಂತೆ 108 ಕೋಟಿ ವರ್ಷಗಳ ಪ್ರಕೃತಿಯನ್ನು 108 ಜನ ಪ್ರಕೃತಿ ಸ್ವರೂಪವಾದ ಸ್ತ್ರೀಯರಾಗಿ ಕಾಣಿಸುವಂತೆ ಮಾಡಿ, ಕಾಣಿಸದ ಪುರುಷೋತ್ತಮನು

ಪುರುಷತ್ತ್ವವಿರುವ ಕಾಣಿಸುವ ಭಗವಂತನಾಗಿ ಬಂದಿದ್ದಾನೆಂದು ತಿಳಿಯುತ್ತಿದೆ. **ಕಾಣಿಸದ ದೇವರ ಪ್ರಕೃತಿಪಾಲನೆ ಕಾಣಿಸುವ ಭಗವಂತನ ಸ್ತ್ರೀಯರ ಆಲನೆ ತಿಳಿದವನು ಸಂಪೂರ್ಣ ಜ್ಞಾನಿ ಆಗುತ್ತಾನೆ.**

ಪ್ರಕೃತಿ ಸ್ತ್ರೀತತ್ತ್ವ ಇರುವುದೆಂದು, ದೇವರು ಪುರುಷತತ್ತ್ವ ಇರುವ ಪುರುಷೋತ್ತಮನೆಂದು, ಭಗವದ್ಗೀತೆಯಲ್ಲಿ ಹೇಳಲ್ಪಟ್ಟಿದೆ. ಪ್ರಕೃತಿಗೆಲ್ಲ ಯಜಮಾನ ಮತ್ತು ಪತಿ ದೇವರೇಯೆಂದು, ಪ್ರಕೃತಿಯೆಲ್ಲ ಕೊನೆಗೆ ತನ್ನೊಳಗೆ ಬೆರೆತುಹೋಗುತ್ತ ದೆಂದು ಸಹ ಹೇಳಿರುವುದಾಗಿದೆ. ಪ್ರಕೃತಿಯಲ್ಲಿ ಹುಟ್ಟಿದ ಜೀವರಾಶಿಗಳೆಲ್ಲ ಕೊನೆಗೆ ತನ್ನನ್ನು ಆಶ್ರಯಿಸಿ, ತನ್ನೊಳಗೆ ಐಕ್ಯ ಆಗಬೇಕಾಗಿದ್ದೆ ಯೆಂದು ದೇವರು ತಿಳಿಸಿದ್ದಾನೆ. ಸೃಷ್ಟಿಯಲ್ಲಿ ಸ್ತ್ರೀತತ್ತ್ವಕ್ಕೆಲ್ಲ ತಾನೇ ಗತಿ ಮತ್ತು ಪತಿ ಎಂದು ತಿಳಿಸುವುದಕ್ಕೆ ಗುರುತಾಗಿ ಭಗವಂತನಾಗಿ ಬಂದಾಗ ತನ್ನಸುತ್ತಾ ಸ್ತ್ರೀತತ್ತ್ವ ಇದ್ದಂತೆ, ತನ್ನನ್ನೇ ಸ್ತ್ರೀತತ್ತ್ವ ಆಶ್ರಯಿಸಿದಂತೆ, ಎಲ್ಲರಿಗೂ ತಾನೆ ಗತಿ ಎಂದು ತಿಳಿಯುವಂತೆ, ಕೃಷ್ಣನ ಸುತ್ತಾ ಕೆಲವರು ಮನುಷ್ಯರಾದ ಸ್ತ್ರೀಯರು, ಪ್ರಾಣಿಜಾತಿ ಯಲ್ಲಿ ಸ್ತ್ರೀ ಆದಂತಹ ಹಸು, ಪಕ್ಷಿ ಜಾತಿಯಲ್ಲಿ ಸ್ತ್ರೀ ನವಿಲು ಇರುವಂತಹ ಚಿತ್ರಪಟಗಳು ಎಷ್ಟೋ ಕಾಣಿಸುತ್ತಿರುತ್ತವೆ. ಆದಿನ ಬೃಂದಾವನ ವೊಂದರ ಚಿತ್ರಪಟದಲ್ಲಿಯೇ ಅಲ್ಲದೆ ದ್ವಾಪರಯುಗದಲ್ಲಿ ಆದಿನವಾಗಲಿ, ಕಲಿಯುಗದಲ್ಲಿನ ಈದಿನವಾಗಲಿ ಕೃಷ್ಣನು ಪುರುಷರ ಮನಸ್ಸಿಗಿಂತ, ಹೆಚ್ಚಾಗಿ ಸ್ತ್ರೀಯರ ಮನಸ್ಸಿನಲ್ಲಿಯೇ ಸ್ಥಾನವನ್ನು ಸಂಪಾದಿಸಿಕೊಂಡಿದ್ದಾರೆ. ಈಗ ಕೃಷ್ಣನು ಇಲ್ಲದಿದ್ದರೂ ಪುರುಷರಲ್ಲಿ ಇಲ್ಲದ ಭಕ್ತಿ ಭಾವ ಸ್ತ್ರೀಯರಲ್ಲಿ ಹೆಚ್ಚಾಗಿ ಇದೆಯೆಂದು ಹೇಳಬಹುದು. ಸ್ತ್ರೀಯರಲ್ಲಿಯೇ ಹೆಚ್ಚು ಭಕ್ತಿಭಾವ ಇದೆಯೆಂದು ನೀವು ಯಾವ ಆಧಾರದಿಂದ ಹೇಳುತ್ತಿದ್ದೀರೆಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಪ್ರಕೃತಿ, ಪರಮಾತ್ಮ ಜ್ಞಾನ ತಿಳಿದವರ್ಯಾರಾದರೂ ಈ ಪ್ರಶ್ನೆಗೆ ಸುಲಭವಾಗಿ ಉತ್ತರವನ್ನು ಹೇಳಬಹುದು. ನಾನು ಪುರುಷನು ಎಂಬ ಭಾವ ಗಂಡಸರಲ್ಲಿ ಇದೆ. ನಾನು ಸ್ತ್ರೀ ಎನ್ನುವ ಭಾವನೆ ಹೆಂಗಸರಲ್ಲಿ ಇದೆ. ನಾನು ಸ್ತ್ರೀ ಎನ್ನುವ ಭಾವನೆ ಒಂದೇ ಪುರುಷರಿಗೆಲ್ಲ ಉತ್ತಮ ಪುರುಷನಾದ

ಪುರುಷೋತ್ತಮನ ಕಡೆ ಮನಸ್ಸನ್ನು ಮರಳಿಸುತ್ತಿದೆ. ಆದ್ದರಿಂದ ಪುರುಷರಿಗಿಂತ ಸ್ತ್ರೀಯರಲ್ಲಿಯೇ ದೈವಭಕ್ತಿ ಹೆಚ್ಚಾಗಿರುತ್ತದೆ. ಅಂತಹ ದೈವಭಕ್ತಿ ಇರುವವರಲ್ಲಿ ಕೃಷ್ಣನ ಮೇಲೆ ಭಕ್ತಿ ಇರುವವರು ಹೆಚ್ಚಾಗಿ ಇರುತ್ತಾರೆ.

ಕೃಷ್ಣನ ಮೇಲೆ ಭಕ್ತಿ ಇರುವವರಲ್ಲಿ ಕೆಲವರು ಪುರುಷರು ಸಹ ಇದ್ದಾರೆ. ಆದರೂ ಪುರುಷರಿಗಿಂತ ಸ್ತ್ರೀಯರ ಸಂಖ್ಯೆ ಹೆಚ್ಚೆಂದು ಹೇಳುತ್ತಿದ್ದೇವೆ. ನಾನು ಪುರುಷನೆ ಆದರೂ, ನನಗಿಂತ ಉತ್ತಮ ಪುರುಷನು ಕೃಷ್ಣನೆಂದು ತಿಳಿದ ಗಂಡಸರಲ್ಲಿ ಕೃಷ್ಣಭಕ್ತಿ ಇದೆ. ನಾನು ಸ್ತ್ರೀ ಎನ್ನುವ ಭಾವವಿರುವ ಹೆಂಗಸರಲ್ಲಿಯು ಕೃಷ್ಣಭಕ್ತಿ ಇದೆ. ನಿಜಕ್ಕೆ ಈ ಕಾಲದಲ್ಲಿ ಭೂಮಿಮೇಲೆ ಕೃಷ್ಣಭಕ್ತಿ ಇತರ ದೇವತೆಗಳ ಮೇಲಿನ ಭಕ್ತಿಗಿಂತ ಬಹಳ ಕಡಿಮೆಯಾಗಿ ಇದೆಯೆಂದು ಹೇಳಬಹುದು. ಅದಕ್ಕೆ ಕಾರಣ ಕೃಷ್ಣನೊಂದರ ಹಿರಿಮೆಯನ್ನು ತಿಳಿಯದಿರುವುದು, ಕೃಷ್ಣನ ಬೃಂದಾವನ ಜೀವನವನ್ನು ತಪ್ಪಾಗಿ ಅರ್ಥ ಮಾಡಿಕೊಂಡಿರುವುದು, ಮೂರನೆಯದು ದೈವಜ್ಞಾನ ತಿಳಿಯದಿರುವುದು. ದೈವಜ್ಞಾನದ ಪ್ರಕಾರ ಸಕಲ ಜೀವರಾಶಿಗಳಿಗು, ಮಾನವರಿಗು ತಾಯಿ ಪ್ರಕೃತಿ, ತಂದೆ ಪರಮಾತ್ಮ. ಪ್ರಕೃತಿ ಪರಮಾತ್ಮರಿಗೆ ಹುಟ್ಟಿದವನು ಮನುಷ್ಯ. ಒಬ್ಬ ಮನುಷ್ಯ ಹುಟ್ಟುತ್ತಲೇ ಅವನಲ್ಲಿ ತಂದೆತಾಯಿಯರ ಲಕ್ಷಣಗಳು ಒಳಗೊಂಡಿರುತ್ತವೆ. ಅಂದರೆ ಸ್ತ್ರೀ (ತಾಯಿ), ಪುರುಷ (ತಂದೆ) ಎರಡು ಲಕ್ಷಣಗಳು ಹೊಂದಿರುವುದರಿಂದ ಅಂತಹವನನ್ನು ನಪುಂಸಕನು ಎನ್ನುತ್ತಾರೆ. ನಪುಂಸಕನು ಎಂದರೆ ಗಂಡುತನ ಇಲ್ಲದೆ ಪುರುಷತ್ವ ಇಲ್ಲದವನೆಂದು ಅರ್ಥ. ಪುರುಷತ್ವ ಇಲ್ಲದವನು ಸ್ತ್ರೀಯಾಗಿಯೇ ಲೆಕ್ಕಿಸಲ್ಪಡುತ್ತಿದ್ದಾನೆ. ಶರೀರವು ಪುರುಷನದಾಗಲಿ, ಸ್ತ್ರೀಯರದಾಗಲಿ ಅವರಲ್ಲಿನ ಜೀವಿಯು ಸ್ತ್ರೀಯಾಗಿಯೇ ಲೆಕ್ಕಿಸಲ್ಪಡುತ್ತಿದ್ದಾನೆ. ಈ ವಿಧಾನ ಭೂಮಿಮೇಲೆ ತಿಳಿಯುವುದಕ್ಕೆ ಪರಮಾತ್ಮನಿಗೆ ಗುರುತಾಗಿ ಪುರುಷ ಶರೀರವನ್ನು, ಪ್ರಕೃತಿಗೆ ಗುರುತಾಗಿ ಸ್ತ್ರೀ ಶರೀರವನ್ನು, ಜೀವಿಗೆ ಗುರುತಾಗಿ ನಪುಂಸಕ ಶರೀರವನ್ನು ದೇವರು ಸೃಷ್ಟಿಸಿದ್ದಾನೆ. ಇದರ ಭಾವನೆ ತಿಳಿದರೆ ಹುಟ್ಟಿದ ಶರೀರ ಯಾವುದಾದರೂ, ಹೆಣ್ಣಾದರೂ, ಗಂಡಾದರೂ ಅದರಲ್ಲಿನ ಜೀವಿಯು ಪುರುಷನು

ಅಲ್ಲವೆಂದು ನಪುಂಸಕನೆಂದು ತಿಳಿಯುತ್ತದೆ. ಲೆಕ್ಕಪ್ರಕಾರ ನಾನು ಪುರುಷ ಶರೀರದಲ್ಲಿ ಹುಟ್ಟಿದ ಜೀವಿಯು, ಆದ್ದರಿಂದ ನಾನು ಕೂಡ ಸ್ತ್ರೀಲಿಂಗ ಇರುವವನೇ ಎಂದು ಹೇಳುತ್ತಿದ್ದೇನೆ. ನೀವು ನಂಬಿ ನಂಬದಿರಿ ಸೃಷ್ಟಿ ಎಲ್ಲದಕ್ಕೂ ದೇವರು ಒಬ್ಬನೇ ಪುರುಷನು, ಆದ್ದರಿಂದ ದೈವಾಂಶವಾದ ಕೃಷ್ಣನೊಬ್ಬನನ್ನೆ ಪುರುಷನನ್ನಾಗಿ ಚಿತ್ರಿಸಿ, ಆತನ ಪಕ್ಕದಲ್ಲಿರುವವರೆಲ್ಲರನ್ನು ಪಶು, ಪಕ್ಷಿ, ಮನುಷ್ಯನನ್ನು ಸ್ತ್ರೀಯರಾಗಿಯೇ ತೋರಿಸಿದ್ದಾರೆ. ಕೃಷ್ಣನ ಸುತ್ತಾ ಸ್ತ್ರೀಯರು ಸೇರಿರುವ ಚಿತ್ರವನ್ನು ನೋಡಿ ಅದರಲ್ಲಿನ ದೈವಜ್ಞಾನವನ್ನು ತಿಳಿದುಕೊಳ್ಳಲಾರದೆ ಭಗವಂತನನ್ನು ಅಪಾರ್ಥ ಮಾಡಿಕೊಂಡು, ತುಂಟನು, ಜಾರನು, ಚೋರನು ಎನ್ನುವುದು ಎಷ್ಟು ಅಜ್ಞಾನವೊ ಈಗಲಾದರೂ ಅರ್ಥವಾಗಿದೆಯಾ!

ದ್ವಾಪರಯುಗದಲ್ಲಿನ ಕೃಷ್ಣನನ್ನು ಆದಿನದ ಎಷ್ಟೋಜನ ಅಜ್ಞಾನಿಗಳು ಅವಹೇಳನೆ ಮಾಡಿ ಅವಮಾನಿಸಿದ ಸಂಘಟನೆಗಳು ಸಹ ಇವೆ. ಆ ವಿಷಯವನ್ನೇ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯಯೋಗದಲ್ಲಿ 11ನೇ ಶ್ಲೋಕದಲ್ಲಿ ಈ ವಿಧವಾಗಿ ಹೇಳಿದ್ದಾನೆ.

**ಶ್ಲೋ॥ ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರೀತಮ್।**
**ಪರಂ ಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್॥**

**ಭಾವಾರ್ಥ :–** ನಾನು ಸರ್ವ ಜೀವರಾಶಿಗಳಿಗು ಅಧಿಪತಿಯೆಂದು, ನಾನು ಹುಟ್ಟುವವನು ಮರಣಿಸುವವನು ಅಲ್ಲವೆಂದು, ನನ್ನೊಂದರ ಪರಂಭಾವವನ್ನು ತಿಳಿಯದ ಮೂಢರು, ಮಾನವ ಶರೀರ ಧರಿಸಿ ಮನುಷ್ಯನಂತೆ ಕಾಣಿಸುವ ನನ್ನನ್ನು ಅವಮಾನಿಸುತ್ತಿದ್ದಾರೆ.

ದ್ವಾಪರಯುಗದಲ್ಲಿ ದೇವರ ಅಂಶವಾದ ಭಗವಂತನನ್ನೇ ಒಬ್ಬ ಮನುಷ್ಯನಾಗಿ ಲೆಕ್ಕಿಸಿ ಅವಮಾನ ಮಾಡಿದವರಿದ್ದಾರೆ. ಯಾವ ಯುಗದಲ್ಲಾದರೂ ಅಜ್ಞಾನಿಗಳು ಅಜ್ಞಾನಿಗಳೆ. ಅವರಿಗೆ ಪಾಪಪುಣ್ಯ ತಾರತಮ್ಯಗಳು ತಿಳಿದಿಲ್ಲ. ಅವು ಹೇಗೆ ಬರುತ್ತವೆಂದು ಸಹ ತಿಳಿದಿಲ್ಲ. ಕಾಣಿಸದಿರುವವು ಇಲ್ಲವೇ ಇಲ್ಲ

ಎನ್ನುತ್ತಾರೆ. ಅಂತಹ ಅಜ್ಞಾನಿಗಳು ಈ ಯುಗದಲ್ಲಿ ಸಹ ಬಹಳಜನ ಇದ್ದಾರೆ. ಇರುವುದಲ್ಲದೆ ಅವರ ಸಾಂದ್ರತೆ ಬೆಳೆಯುತ್ತಾ, ಜ್ಞಾನಿಗಳ ಸಾಂದ್ರತೆ ಕಡಿಮೆಯಾಗುತ್ತಾ ಹೋಗುತ್ತಿದೆ. ಈ ಕಲಿಯುಗದಲ್ಲಿ ಸ್ವಲ್ಪಜನ ಜ್ಞಾನಿಗಳಾಗಿ ಹೆಸರುವಾಸಿಯಾದ ವ್ಯಕ್ತಿಗಳು ಸಹ ಅವರಿಗೆ ತಿಳಿಯದೆ ಅಜ್ಞಾನದಲ್ಲಿಯೇ ಇರುತ್ತಿದ್ದಾರೆ. ಕೃಷ್ಣನ ವಿಷಯದಲ್ಲಿ ಕಡಿಮೆ ಭಾವನೆಯಿಂದಲೇ ಇದ್ದಾರೆ. ನಾವು ಪುರುಷರಲ್ಲವೆಂದು, ಭಗವಂತನೆ ಪುರುಷನೆಂದು ಎಂದಿಗಾದರೂ ಭಗವಂತನನ್ನೇ ಆಶ್ರಯಿಸಬೇಕಾದ ಅವಶ್ಯಕತೆ ಇದೆಯೆಂದು ತಿಳಿಯದಂತಿದ್ದಾರೆ. ಬೃಂದಾವನದಲ್ಲಿನ ಕೃಷ್ಣನನ್ನು ತಪ್ಪಾದ ತುಲನೆ ಹಾಕಿಕೊಂಡಿದ್ದಾರೆ, ಸುಮಾರು ಐದುಸಾವಿರ ವರ್ಷಗಳ ಕೆಳಗೆ ರಾಜಸ್ಥಾನ್‌ನಲ್ಲಿನ ನಾಗೂರ್ ಜಿಲ್ಲೆಯಲ್ಲಿ ಕ್ರಿ॥ಶ॥ 1498ರಲ್ಲಿ ಹುಟ್ಟಿದ ಮೀರಾಬಾಯಿ ಕೃಷ್ಣನ ಮೇಲೆ ಭಕ್ತಿಯಿಂದ ಆತನು ನಡೆದಾಡಿದ ಬೃಂದಾವನಕ್ಕೆ ಹೋಗಬೇಕೆನ್ನುವ ಉದ್ದೇಶದಿಂದ ಹೋಗಿದ್ದಾಳೆ. ಬೃಂದಾವನದಲ್ಲಿ ಕೃಷ್ಣಸಮಾಜ್ ಎನ್ನುವ ಆಶ್ರಮವನ್ನು ಸಂದರ್ಶಿಸಿ ಅಲ್ಲಿನ ಸ್ವಾಮೀಜಿಯನ್ನು ದರ್ಶಿಸಿಕೊಳ್ಳಬೇಕೆಂದು ಅಲ್ಲಿರುವ ಶಿಷ್ಯರನ್ನು ಅವರ ಗುರುಗಳ ದರ್ಶನಾರ್ಥ ಕೇಳಿದಳು. ಆಗ ಅಲ್ಲಿರುವ ಶಿಷ್ಯರು "ನಮ್ಮ ಗುರುಗಳು ಸ್ತ್ರೀಯರಿಗೆ ದರ್ಶನ ಕೊಡುವುದಿಲ್ಲ. ನಮ್ಮ ಗುರುಗಳು ಪುರುಷನಾಗಿರುವುದರಿಂದ ಪುರುಷರಿಗೆ ಮಾತ್ರ ಆತನ ದರ್ಶನ ಸ್ತ್ರೀಯರಿಗೆ ಇಲ್ಲ" ಎಂದು ಹೇಳಿದ್ದಾರೆ. ಆ ಮಾತು ಕೇಳುತ್ತಲೇ ಮೀರಾಬಾಯಿ ಕೂಡಲೇ ನಕ್ಕಳು. ಆಕೆ ತನ್ನ ನಗುವನ್ನು ತಡೆಯಲಾರದೆಹೋಗಿದ್ದಾಳೆ. ಆಕೆ ಹಾಗೆ ನಕ್ಕಿರುವುದನ್ನು ನೋಡಿ ಅಲ್ಲಿರುವ ಶಿಷ್ಯರು ಆಶ್ಚರ್ಯಪಟ್ಟರು. ಏಕೆ ನಗುತ್ತಿದ್ದೀಯಾ? ಎಂದು ಕೇಳಿದ್ದಾರೆ. ಅದಕ್ಕೆ ಆಕೆ **"ಈ ಸೃಷ್ಟಿ ಎಲ್ಲದಕ್ಕು ಕೃಷ್ಣನು ಒಬ್ಬನೇ ಪುರುಷನೆಂದು ಅಂದುಕೊಂಡಿದ್ದೆನು. ಈಗ ನಿಮ್ಮ ಗುರುಗಳು ಸಹ ಪುರುಷನೆಂದು ನೀವೆಂದರೆ ಆಶ್ಚರ್ಯಪಟ್ಟು ನಗುತ್ತಿದ್ದೇನೆ"** ಎಂದಳು. ಮೀರಾಬಾಯಿ ಹೇಳಿದ ಆ ಮಾತುಗಳನ್ನು ಒಳಗಿರುವ ಗುರುಗಳು ಕೇಳಿದ್ದಾರೆ. ತಕ್ಷಣ ತಾನೇ ಹೊರಗೆ ಬಂದು ಮೀರಾಬಾಯಿಗೆ ನಮಸ್ಕರಿಸಿ "ನಿಮ್ಮಿಂದ ನನ್ನಲ್ಲಿರುವ ಅಜ್ಞಾನ ತೊಲಗಿತು. ನಾನು ಪುರುಷನೆನ್ನುವ ಭಾವನೆ ತೊಲಗಿಹೋಗಿದೆ. ನಾನು ಶರೀರವನ್ನನುಸರಿಸಿ ಹೊರಗಿನ ದೃಷ್ಟಿಯಿಂದ

ಪುರುಷನೆಂದು ಭ್ರಮೆಯಲ್ಲಿದ್ದೆ. ಈಗ ನಿಮ್ಮಿಂದ ನಾನು ಪುರುಷನಲ್ಲವೆಂದು, ನಾನು ಸಹ ಪುರುಷನನ್ನು ಆಶ್ರಯಿಸಬೇಕಾಗಿದ್ದೆ ಎಂದು ತಿಳಿದುಕೊಂಡಿದ್ದೇನೆ" ಎಂದಿದ್ದಾನೆ. ಆಗ ಬೃಂದಾವನದಲ್ಲಿ ಅವರ ಆಶ್ರಮದಲ್ಲಿಯೇ ಆಕೆಗೆ ಆಶ್ರಯ ಕಲ್ಪಿಸಿದ್ದಾರೆ. ಮೀರಾಬಾಯಿ ಚಿಕ್ಕ ವಯಸ್ಸಿನಲ್ಲಿಯೇ ಗಂಡ ಬಿಟ್ಟಿರುವುದರಿಂದ ಬೃಂದಾವನವನ್ನು ಸೇರಿದಳು. 49 ವರ್ಷಗಳು ಜೀವಿಸಿ ದ್ವಾರಕದಲ್ಲಿ ಮರಣಿಸಿದ್ದಾಳೆ. ಆ ದಿನ ಬೃಂದಾವನದಲ್ಲಿ ಕೃಷ್ಣ ಸಮಾಜವನ್ನು ಏರ್ಪಾಟು ಮಾಡಿಕೊಂಡ 70 ವರ್ಷಗಳ ಸ್ವಾಮೀಜಿಗೆ 20 ವರ್ಷಗಳ ವಯಸ್ಸಿನಲ್ಲಿರುವ ಮೀರಾಬಾಯಿ ನಾವೆಲ್ಲರೂ ಸ್ತ್ರೀಯರೇ ಎನ್ನುವ ಜ್ಞಾನವನ್ನು ಉಂಟು ಮಾಡಿದ್ದಾಳೆ. ಶ್ರೀಕೃಷ್ಣನ ಬಗ್ಗೆ, ಆತನು ಬೃಂದಾವನ ಜೀವನವನ್ನು ಕುರಿತು 13ಸಾವಿರ ಭಕ್ತಿ ಹಾಡುಗಳನ್ನು ಭಜನೆ ರೂಪದಲ್ಲಿ ಹಾಡಿದ್ದಾಳೆ. ಮೀರಾಬಾಯಿ ಮನಸ್ಸಿನಲ್ಲಿ ಕೃಷ್ಣನು ಹೊರತು ಎಲ್ಲರೂ ಸ್ತ್ರೀಯರೇ ಎನ್ನುವ ಭಾವ ಇರುತ್ತಿತ್ತು. ಈಮಾತು ಕೇಳುವುದಕ್ಕೆ ಆಶ್ಚರ್ಯವನ್ನುಂಟುಮಾಡಿದರೂ ನೂರಕ್ಕೆ ನೂರುಪಾಲು ಸತ್ಯವೆ.

ಕೃಷ್ಣನು ಸಾಧಾರಣ ಮನುಷ್ಯನಲ್ಲ ಭಗವಂತನೆಂದು ತಿಳಿದು ಕೊಂಡಿದ್ದೇವೆ. ಕೃಷ್ಣನು ಭಗವದ್ಗೀತೆಯನ್ನು ಹೇಳದಮೊದಲು 90 ವರ್ಷಗಳ ಕಾಲ ಸಾಧಾರಣವಾಗಿ ಜೀವಿಸುತ್ತಾ ಯಾರಿಗೂ ದೈವಜ್ಞಾನವನ್ನು ಕುರಿತು ಹೇಳಲಿಲ್ಲ. ಆದ್ದರಿಂದ ಆತನು ಭಗವಂತನೆಂದು ಗುರುತಿಸುವುದಕ್ಕೆ ಜ್ಞಾನಿಗಳಿಗು ಸಹ ಸಾಧ್ಯವಾಗಲಿಲ್ಲ. ಆದರೆ ಆತನು ಜ್ಞಾನವನ್ನು ಹೇಳದಿದ್ದರೂ ಜೀವನ ಎಷ್ಟೋ ಜ್ಞಾನಮಯವಾಗಿ ಇದೆ. ಆತನು ಅಷ್ಟಮಿ ದಿನ ಹುಟ್ಟುವುದೇ ಒಂದು ದೊಡ್ಡ ಜ್ಞಾನಸಂದೇಶ. ಹಾಗೆಯೇ 30 ವರ್ಷಗಳವರೆಗು ಕಳೆದ ಬೃಂದಾವನದ ಜೀವನವು ಸಹ ನಾವು ಹೇಳಿಕೊಂಡಂತೆ ದೊಡ್ಡ ಜ್ಞಾನಸಂದೇಶವೇ. ಹಾಗೆ ಆತನು ಮೂವತ್ತು ವರ್ಷಗಳ ವಯಸ್ಸಿನ ನಂತರ ದ್ವಾರಕಾ ನಗರಕ್ಕೆ ಹೋಗಿ ಎಂಟು ಜನರನ್ನು ವಿವಾಹ ಮಾಡಿಕೊಂಡಿದ್ದಾನೆ. ಗೋಪಿಕೆಯರು ಇರುವಷ್ಟುಕಾಲ ಮದುವೆ ಮಾಡಿಕೊಳ್ಳಲಿಲ್ಲ. ಮದುವೆ ಮಾಡಿಕೊಂಡ ನಂತರ ಬೃಂದಾವನದ

ಹತ್ತಿರಕ್ಕಾಗಲಿ, ಗೋಪಿಕೆಯರ ಹತ್ತಿರಕ್ಕಾಗಲಿ ಬರಲಿಲ್ಲ. ಬೃಂದಾವನ ಇರುವಷ್ಟರ ವರೆಗೂ ದ್ವಾರಕೆ ಇಲ್ಲ, ದ್ವಾರಕ ಇರುವವರೆಗು ಬೃಂದಾವನವಿಲ್ಲ. ಆತನು ಧರಿಸಿದ ನವಿಲುಗರಿಯಾಗಲಿ, ಊದಿದ ಮುರಳಿಯಾಗಲಿ ಎಷ್ಟೋ ಜ್ಞಾನ ವಿಷಯಗಳನ್ನು ತಿಳಿಸಿರುವವೆ. ಗೀತೆಯನ್ನು ಹೇಳಿದ ನಂತರ ಅದರಲ್ಲಿನ ಜ್ಞಾನವನ್ನನುಸರಿಸಿ ಕೃಷ್ಣನು ಇಂತಹ ಜ್ಞಾನ ಇರುವವನೆಂದು, ಭಗವಂತನೆಂದು ಗುರುತಿಸುವುದಕ್ಕೆ ಸಾಧ್ಯವಿದೆ. ಆದರೆ ಆತನು ಜ್ಞಾನವನ್ನು ಹೇಳದೆಯೇ ಆತನ ಕೆಲಸಗಳನ್ನನುಸರಿಸಿಯಾಗಲಿ, ಪ್ರವರ್ತನೆಯನ್ನು ಅನುಸರಿಸಿಯಾಗಲಿ ಅದರಲ್ಲಿನ ಜ್ಞಾನವನ್ನು ಯಾರೂ ತಿಳಿದುಕೊಂಡಂತೆ ಇಲ್ಲ. ಆತನು ಏಕೆ ಯಾರೂ ಇಡದ ನವಿಲುಗರಿಯನ್ನು ತಲೆಮೇಲೆ ಇಟ್ಟುಕೊಂಡಿದ್ದಾನೆಂದಾಗಲಿ, ಅಷ್ಟುಜನ ಗೋಪಿಕೆಯರೊಂದಿಗೆ ಏಕೆ ಇದ್ದಾನೆಂದಾಗಲಿ, ಅಲ್ಲಿಯವರೆಗು ಯಾರೂ ಇಟ್ಟುಕೊಳ್ಳದ "ಕೃಷ್ಣ" ಎನ್ನುವ ಹೆಸರನ್ನು ಏಕೆ ಇಟ್ಟುಕೊಂಡಿದ್ದಾನೆಂದಾಗಲಿ ಯಾರೂ ಯೋಚಿಸಲಿಲ್ಲ. ಜೀವನದಲ್ಲಿ ಕೃಷ್ಣನನ್ನು ಜಾರನನ್ನಾಗಿ, ಚೋರನನ್ನಾಗಿ ನೋಡಿದ ಮನುಷ್ಯರು, ವ್ಯಭಿಚಾರಿ, ಕಳ್ಳನಾದವನು ಗೀತೆಯನ್ನು ಹೇಗೆ ಬೋಧಿಸಿದ್ದಾನೆ ಎಂದು ಸ್ವಲ್ಪವಾದರೂ ಸಹ ಯೋಚಿಸಲಿಲ್ಲ. ಈ ವಿಧವಾಗಿ ನೋಡಿದರೆ ಕೃಷ್ಣನು ಗೀತೆಯನ್ನು ಹೇಳಿದ ನಂತರ ಬದುಕಿದ 36 ವರ್ಷಗಳ ಜೀವನವಾಗಲಿ, ಗೀತೆಯನ್ನು ಹೇಳದಮೊದಲು ಬದುಕಿದ 90 ವರ್ಷಗಳ ಜೀವನವಾಗಲಿ, ಎಲ್ಲಾ ದೈವಜ್ಞಾನದಿಂದ ಕೂಡಿಕೊಂಡಿರುವುದೇ ಎಂದು ಅರ್ಥವಾಗುತ್ತಿದೆ.

# ಶ್ರೀಕೃಷ್ಣ ಜನ್ಮಾಷ್ಟಮಿ

ಶ್ರೀಕೃಷ್ಣನು ಹುಟ್ಟಿರುವುದು ಕ್ರಿಸ್ತ ಪೂರ್ವ 3228 ಸಂ॥ ಜೂಲೈ ತಿಂಗಳು 19ನೇ ತಾರೀಖು ಬಹುಳ ಅಷ್ಟಮಿ ದಿನದಂದು ವೃಷಭಲಗ್ನದಲ್ಲಿ ಹುಟ್ಟಿದ್ದಾನೆ. ಇದರಿಂದ ಇಲ್ಲಿಗೆ 5244 ವರ್ಷಗಳ ಪೂರ್ವದಲ್ಲಿ ಕೃಷ್ಣನು ಭೂಮಿಮೇಲೆ ಹುಟ್ಟಿದ್ದಾನೆಂದು ತಿಳಿಯುತ್ತಿದೆ. ಅರ್ಥ ಮಾಡಿಕೊಂಡರೆ ಆತನ

ಜೀವನವೇ ದೊಡ್ಡ ಜ್ಞಾನ ಸಂದೇಶವೆಂದು ಹೇಳಿಕೊಂಡಿದ್ದೇವೆ! ಅದರಪ್ರಕಾರ ಆತನ ಜನ್ಮದಲ್ಲಿಯೂ ಸಹ ದೊಡ್ಡ ಜ್ಞಾನ ಒಳಗೊಂಡಿದೆಯೆಂದು ಹೇಳಬಹುದು. ಕೃಷ್ಣನು ಎದುರು ಕಾಲುಗಳಿಂದ ಹುಟ್ಟುವುದೇ ಒಂದು ವಿಶೇಷವಾದರೆ, ಆತನು ಹುಟ್ಟಿದ ಅಷ್ಟಮಿ ದಿನ ಸಹ ವಿಶೇಷತೆಯನ್ನು ಸಂಪಾದಿಸಿಕೊಂಡಿದೆ. ಕೃಷ್ಣನ ಜನ್ಮಾಷ್ಟಮಿವೊಂದರ ವಿಶೇಷವೇನೆಂದು ನೋಡಿದರು ಈ ವಿಧವಾಗಿ ಅರ್ಥವಾಗುತ್ತದೆ. ಸರ್ವಸಾಧಾರಣವಾಗಿ ಏನು ಜ್ಞಾನ ತಿಳಿಯದ ಪ್ರಜೆಗಳು ಸಹ "ಅಷ್ಟಮಿ ಕಷ್ಟ, ನವಮಿ ನಷ್ಟ" ಎಂದು ಹೇಳುತ್ತಾ ಅಷ್ಟಮಿ, ನವಮಿ ದಿನಗಳಲ್ಲಿ ಕೆಲವು ಕೆಲಸಗಳನ್ನು ಮಾಡುವುದಿಲ್ಲ. ಕೆಲವು ಕೆಲಸಗಳು ಪ್ರಾರಂಭಿಸುವ ಮುನ್ನ ಈ ಎರಡು ತಿಥಿಗಳನ್ನು ಇಲ್ಲದಂತೆ ನೋಡಿಕೊಳ್ಳುತ್ತಾರೆ. ನವಮಿ ನಷ್ಟ, ಅಷ್ಟಮಿ ಕಷ್ಟ ಎನ್ನುವುದರಲ್ಲಿ ನಿಮ್ಮ ಭಾವವೇನು ಎಂದು ಕೆಲವರು ಕೇಳಿದರೆ ಅವರು ಹೀಗೆ ಹೇಳುತ್ತಿದ್ದಾರೆ. "ಅಷ್ಟಮಿ ದಿನ ಕೆಲಸ ಪ್ರಾರಂಭಿಸಿದರೆ ಅ ಕೆಲಸ ಕಷ್ಟದಿಂದ ಕೂಡಿಕೊಂಡಿರುವುದಾಗುತ್ತದೆ. ಹಾಗೆಯೇ ನವಮಿ ದಿನ ಪ್ರಾರಂಭಿಸಿದರೆ ಆ ಕೆಲಸ ನಷ್ಟಗಳಿಂದ ಕೂಡಿಕೊಂಡಿರುವುದಾಗುತ್ತದೆ" ಹೀಗೆ ಅವರು ಹೇಳುವ ಮಾತುಗಳನ್ನು ಅನುಸರಿಸಿ ನೋಡಿದರೆ ಇದು ಜ್ಯೋತಿಷ್ಯಶಾಸ್ತ್ರದ ಪ್ರಕಾರ ನಡೆಯುವುದು ಅಲ್ಲ. ಜ್ಯೋತಿಷ್ಯಶಾಸ್ತ್ರದಲ್ಲಿ ಅಂತಹ ಸೂತ್ರ ಯಾವುದೂ ಇಲ್ಲ. ಆದರೂ ಪೂರ್ವಕಾಲ ಈ ಮಾತು ಬಹಳ ಪ್ರಚಾರದಲ್ಲಿ ಇರುತ್ತಿತ್ತು. ಸುಮಾರು ಐವತ್ತು ವರ್ಷಗಳ ಕೆಳಗಿನವರೆಗು ಅಷ್ಟಮಿ, ನವಮಿ ಎನ್ನುವ ಮಾತುಗಳು ಅಲ್ಲಲ್ಲಿ ಕೇಳಿಸುತ್ತಿದ್ದವು. ಪ್ರಸ್ಥುತ ನವೀನ ಕಾಲದಲ್ಲಿ ಆ ಮಾತು ಬರವಾಗಿಹೋಗಿದೆ. ಈಗಿನ ಓದುಗಳಲ್ಲಿ ಬಿದ್ದ ಮಕ್ಕಳಿಗೆ ತಿಥಿಗಳೆಂದರೆ ಸಹ ಏನೊ ತಿಳಿಯುದಂತೆ ಹೋಗಿದೆ. ಈಗಲೂ ಸಹ ಎಲ್ಲಿಯಾದರೂ ಹಳ್ಳಿಪ್ರಾಂತ್ಯಗಳಲ್ಲಿ ಈ ದಿನ ಅಷ್ಟಮಿ, ಅಷ್ಟಮಿ ದಿನ ಪ್ರಯಾಣವಾ ಎನ್ನುವುದಾಗಲಿ, ಇಷ್ಟುಕಾಲವಿದ್ದು ಈಗ ಅಷ್ಟಮಿ ದಿನದಂದಾ ಪ್ರಾರಂಭಿಸುವುದು ಎಂದಾಗಲಿ ಕೇಳುವುದು ಇದೆ. ಇದರಿಂದ ಅಷ್ಟಮಿ, ನವಮಿ ಎನ್ನುವ ಎರಡು ತಿಥಿಗಳಲ್ಲಿ ಒಂದು ತಿಥಿ ನವಮಿ ಗಾಳಿಗೆ ಹೋಗಿದೆ. ಅಷ್ಟಮಿ ಮಾತ್ರ ಉಳಿದಿದೆಯೆಂದು ಅರ್ಥವಾಗುತ್ತಿದೆ. ಹಳ್ಳಿ ಪ್ರಾಂತ್ಯಗಳಲ್ಲಿ ಎಲ್ಲಿಯೋ ಒಂದುಕಡೆ ಇಲ್ಲಿಯವರೆಗು

ಉಳಿದಿರುವ ಅಷ್ಟಮಿಯೂ ಸಹ ಹತ್ತು ವರ್ಷಗಳ ಕಾಲಕ್ಕೆ ಇಲ್ಲದಂತೆ ಹೋಗುತ್ತದೆಂದು ತಿಳಿಯುತ್ತಿದೆ. ಅಷ್ಟಮಿ ಕಷ್ಟ, ನವಮಿ ನಷ್ಟ ಎಂದು ಇರುತ್ತಿತ್ತೆಂದು ಹೇಳುವ ನಮ್ಮ ಮಾತುಗಳಿಗೆ ಸ್ವಲ್ಪ ಆಧಾರವಾಗಿ ಈಗಲೂ ಅಷ್ಟಮಿ ಉಳಿದಿದೆ. ಕಾಲಗಮನದಲ್ಲಿ ಎಷ್ಟೋ ಕಣ್ಮರೆಯಾಗಿಹೋಗಿವೆ. ಆದರೂ ಜ್ಞಾನಕ್ಕೆ ಗೌರವವನ್ನು ಕೈಗೂಡಿಸುವ ಮಾತುಗಳು ಕಣ್ಮರೆಯಾಗಬಾರದೆಂದು ನಮ್ಮ ಅಭಿಲಾಷೆ. ಆದ್ದರಿಂದ ಅಷ್ಟಮಿ ಕಷ್ಟ, ನವಮಿ ನಷ್ಟ ಎನ್ನುವ ಮಾತುಗಳನ್ನು ಹಿರಿಯರು ಏಕೆ ಜಾರಿಗೆ ತಂದಿದ್ದಾರೆ? ಎಂದಿನಿಂದ ಜಾರಿಗೆ ಬಂದಿದೆ? ಎನ್ನುವ ಪ್ರಶ್ನೆಗಳಿಗೆ ಉತ್ತರಗಳು ಹುಡುಕಿಕೊಳ್ಳೋಣ.

ಅಷ್ಟಮಿ ಕಷ್ಟ, ನವಮಿ ನಷ್ಟ ಎನ್ನುವಮಾತು ಶ್ರೀಕೃಷ್ಣನು ಹುಟ್ಟುವುದಕ್ಕಿಂತ ಮೊದಲು ಇಲ್ಲ. ಕೃಷ್ಣನು ಹುಟ್ಟಿದ ನಂತರ 90 ವರ್ಷಗಳಿಗೆ ಭಗವದ್ಗೀತೆಯನ್ನು ಹೇಳಿದ್ದಾನೆ. ಭಗವದ್ಗೀತೆಯನ್ನು ಹೇಳಿದ ನಂತರ ಕೃಷ್ಣನು ಮಹತ್ವವಾದವನೆನ್ನುವ ವಿಷಯ ಕೆಲವರಿಗೆ ಅರ್ಥವಾಗಿದೆ. ಅಂದಿನಿಂದ ಕೃಷ್ಣನು ಹುಟ್ಟಿದ ದಿನವನ್ನು ಗೋಕುಲದಲ್ಲಿಯೂ, ಮಧುರೆಯಲ್ಲಿಯೂ ಹಬ್ಬವಾಗಿ ಮಾಡಿಕೊಳ್ಳುವುದು ನಡೆಯುತ್ತಿತ್ತು. ಭಗವದ್ಗೀತೆ ಯುದ್ಧರಂಗದಲ್ಲಿ ಹೇಳಲ್ಪಟ್ಟಿದೆ. ಭಾರತಯುದ್ಧ ಕ್ರಿಸ್ತ ಪೂರ್ವ 3138ನೇ ವರ್ಷ ನಡೆದಿದೆ. ಇದರಿಂದ ಇಲ್ಲಿಗೆ ಭಗವದ್ಗೀತೆ ಹುಟ್ಟಿ 5154 ವರ್ಷಗಳು ಆಗಿದೆ. ಭಗವದ್ಗೀತೆ ಹುಟ್ಟಿದ ನಂತರ ಕೃಷ್ಣನು ಸಾಮಾನ್ಯ ಮನುಷ್ಯನಲ್ಲವೆಂದು ಕೆಲವರು ಜ್ಞಾನಿಗಳು ಗ್ರಹಿಸಿದ್ದಾರೆ. ಆಗಿನಿಂದ ಶ್ರೀಕೃಷ್ಣನ ಜಯಂತಿಯನ್ನು ಮಾಡುವುದಕ್ಕೆ ಪ್ರಾರಂಭಿಸಿದ್ದಾರೆ. ಹಾಗೆ ಏರ್ಪಟ್ಟಿರುವುದೆ ಶ್ರೀಕೃಷ್ಣ ಜನ್ಮಾಷ್ಟಮಿ. ಆಗಿನಿಂದ ಶ್ರಾವಣಮಾಸ ಬಹುಳ ಅಷ್ಟಮಿ ದಿನ ಶ್ರೀಕೃಷ್ಣನ ಜನ್ಮದಿನವನ್ನು ದೊಡ್ಡ ಹಬ್ಬವಾಗಿ ಮಾಡಿಕೊಳ್ಳುತ್ತಿದ್ದರು. ಆ ವಿಧವಾಗಿ ದೈವಜ್ಞಾನ ತಿಳಿದವರು ಪ್ರಾರಂಭಿಸಿದ ಶ್ರೀಕೃಷ್ಣಾಷ್ಟಮಿ ಸ್ವಲ್ಪ ಕಾಲಕ್ಕೆ ದೇಶವ್ಯಾಪ್ತವಾಗಿ ಎಲ್ಲರೂ ಮಾಡುವುದು ಪ್ರಾರಂಭಿಸಿದ್ದಾರೆ. ಭಗವದ್ಗೀತೆಯನ್ನು ಹೇಳಿದ ನಂತರ ಕೃಷ್ಣನು 36 ವರ್ಷಗಳಿಗೆ ಮರಣಿಸಿದ್ದಾನೆ. ಕೃಷ್ಣನು ಸಜೀವವಾಗಿ ಇದ್ದಾಗಲೇ ಕೃಷ್ಣ ಜಯಂತಿಯನ್ನು ಕೃಷ್ಣಾಷ್ಟಮಿಯಾಗಿ

ಮಾಡಿರುವುದು ನಡೆದಿದೆ. ದ್ವಾಪರಯುಗದಲ್ಲಿಯೇ ಕೃಷ್ಣಾಷ್ಟಮಿ ಹಬ್ಬ ತಯಾರಾಗಿದೆ.

ಕೃಷ್ಣನು ಮರಣಿಸಿದ ಎರಡು ವರ್ಷಗಳಿಗೆ ಕಲಿಯುಗ ಪ್ರಾರಂಭವಾಗಿದೆ. ಕಲಿಯುಗ ಪ್ರಾರಂಭದಲ್ಲಿ ದೇಶವೆಲ್ಲಾ ಮುಖ್ಯವಾದ ಹಬ್ಬವಾಗಿ ಶ್ರೀಕೃಷ್ಣಾಷ್ಟಮಿ ನಡೆಯುತ್ತಿತ್ತು. ಕಲಿಯುಗದಲ್ಲಿ ಕೃಷ್ಣಾಷ್ಟಮಿ ದೇಶ ವ್ಯಾಪ್ತವಾಗಿ ಐದು ಅಥವಾ ಆರು ನೂರು ವರ್ಷಗಳವರೆಗೂ ಉತ್ಸವವಾಗಿ ಜರುಗಿದೆ. ಅಂದಿನಿಂದ ಮಾಯಾ ಪ್ರಭಾವದಿಂದ ಕ್ರಮೇಣ ಕೃಷ್ಣಾಷ್ಟಮಿಯ ಹಬ್ಬವನ್ನು ಮಾಡುವುದು (ಆಚರಿಸುವುದು) ಒಬ್ಬೊಬ್ಬರು ಬಿಡುತ್ತಾ ಬಂದಿದ್ದಾರೆ. ಆ ವಿಧವಾಗಿ ನಾಲ್ಕು ಅಥವಾ ಐದು ನೂರು ವರ್ಷಗಳಿಗೆ ಕೃಷ್ಣಾಷ್ಟಮಿಯನ್ನು ಮಾಡುವುದು ಶೇ.90 ಜನರು ಬಿಟ್ಟುಬಿಟ್ಟಿದ್ದಾರೆ. ಕೊನೆಗೆ ಸ್ವಲ್ಪಕಾಲಕ್ಕೆ ಕೇವಲ ಶೇಕಡ ಐದರಷ್ಟು ಜನರು ಮಾತ್ರ ಅದೂ ಮಧುರಾ, ಗೋಕುಲವಾದ ನಂದಗಾವ್ ಪರಿಸರ ಪ್ರಾಂತ್ಯಗಳಲ್ಲಿ ಮಾತ್ರವೆ ಮಾಡುತ್ತಿರುವುದು, ಗೊಲ್ಲರು ಮಾತ್ರವೆ ಮಾಡುತ್ತಿರುವುದು ರೂಢಿಯಲ್ಲಿದೆ. ಗೊಲ್ಲವಾಡಗಳಲ್ಲಿ ಕೃಷ್ಣನು ಚಿಕ್ಕವನಿದ್ದಾಗ ಮಾಡಿದ ಬೆಣ್ಣೆ ಕಳ್ಳತನವನ್ನು ಗುರುತು ಮಾಡುವುದಕ್ಕೆ ಉಟ್ಟಿಯನ್ನು ಒಡೆದು ಹಾಕುವಂತಹ ಮೊದಲಾದ ಕಾರ್ಯಗಳನ್ನು ಹಬ್ಬದ ವಾತಾವರಣದಲ್ಲಿ ಇಂದಿಗೂ ಮಾಡುತ್ತಿದ್ದಾರೆ. ಕಲಿಯುಗ ಪ್ರಾರಂಭದಲ್ಲಿ ಎಷ್ಟೋ ದೊಡ್ಡ ಮಟ್ಟದಲ್ಲಿ ಜರುಗಿ ಸಲ್ಪಡುತ್ತಿದ್ದ ಕೃಷ್ಣಾಷ್ಟಮಿ ಹಬ್ಬ ಇಂದು ಗುರುತಿಗೆ ಮಾತ್ರ ಮಿಕ್ಕಿ ಉಳಿದಿದೆ. ಇಂತಹ ಪರಿಸ್ಥಿತಿ ಬರಬಾರದೆಂದು ಆದಿನದ ಹಿರಿಯರು ಒಂದು ಪ್ರಯೋಗ ಮಾಡಿದ್ದಾರೆ. ಆ ಪ್ರಯೋಗವೇ ಅಷ್ಟಮಿ ಕಷ್ಟ, ನವಮಿ ನಷ್ಟ ಎನ್ನುವ ಮಾತು. ಈ ಪದದ ಪ್ರಯೋಗವೇನೆಂದು ಕೆಲವರಿಗೆ ಅರ್ಥ ಆಗದೆ ಹೋಗಬಹುದು. ಅಂದಿನ ಹಿರಿಯರು ಯಾವ ಉದ್ದೇಶದಿಂದ ಈ ಪದಗಳನ್ನು ಬಳಸಿದ್ದಾರೋ ಗಮನಿಸೋಣ.

ಪೂರ್ವದಲ್ಲಿ ಕೃಷ್ಣನು ಮಧುರಾನಗರದಲ್ಲಿ ಅಷ್ಟಮಿ ದಿನದಂದು ಹುಟ್ಟಿದ್ದಾನೆ. ಮಾರನೆದಿನ ನಂದಗಾವ್‌ನಲ್ಲಿ ಕಾಣಿಸಿದ್ದಾನೆ. ಹುಟ್ಟಿದ ರಾತ್ರಿಯೇ

ವಸುದೇವನು ರಹಸ್ಯವಾಗಿ ಕೃಷ್ಣನನ್ನು ಮಧುರಾನಗರದಿಂದ ಪಕ್ಕದಲ್ಲಿಯೇ ಇರುವ ನಂದಗಾವ್‌ನೊಳಗೆ ಸೇರಿಸಿದ್ದಾನೆ. ಆದ್ದರಿಂದ ಎರಡನೆ ದಿನದಂದು ಎಂದರೆ ಬೆಳಗಾದ ನಂತರ ಕೃಷ್ಣನು ಯಶೋದೆಗೆ ಹುಟ್ಟಿದ್ದಾನೆಂದು ಆ ಗ್ರಾಮವೆಲ್ಲಾ ತಿಳಿದುಹೋಗಿದೆ. ಕೃಷ್ಣನು ಹುಟ್ಟಿದ ಅಷ್ಟಮಿದಿನ ರಾತ್ರಿವೇಳೆ, ಬೆಳಗಾದ ನಂತರ ತಿಥಿ ನವಮಿ ಬಂದಿದೆ. ಗೊಲ್ಲಹಟ್ಟಿಯಲ್ಲಿ ತಿಳಿದಿರುವುದು ನವಮಿದಿನ. ನಂದಗಾವ್‌ನಲ್ಲಿ ಕೃಷ್ಣನು ನವಮಿ ದಿನ ತಿಳಿದಿದ್ದಾನೆ. ಮಧುರೆಯಲ್ಲಿ ಕೃಷ್ಣನು ಅಷ್ಟಮಿದಿನ ಹುಟ್ಟಿದ್ದಾನೆ. ಕೃಷ್ಣನೊಂದರ ಹುಟ್ಟು ಅಷ್ಟಮಿ ದಿನ, ಆದ್ದರಿಂದ ಆತ್ಮಜ್ಞಾನ ತಿಳಿದವರೆಲ್ಲರೂ ಶ್ರಾವಣ ಬಹುಳ ಅಷ್ಟಮಿ ದಿನ 'ಕೃಷ್ಣಾಷ್ಟಮಿ' ಎನ್ನುವ ಹೆಸರಿನಿಂದ ಮಾಡುತ್ತಿದ್ದರು. ನಂದಗಾವ್‌ನಲ್ಲಿನ ಗೊಲ್ಲರೆಲ್ಲರೂ ಕೃಷ್ಣನು ತಮ್ಮ ಗ್ರಾಮದಲ್ಲಿ ಕಾಣಿಸಿರುವ ನವಮಿ ದಿನ 'ಗೋಕುಲಾಷ್ಟಮಿ' ಎನ್ನುವ ಹೆಸರಿನಿಂದ ನವಮಿದಿನ ಉತ್ಸವ ಮಾಡುತ್ತಿದ್ದರು. ಅವರು ಕುಲಾಭಿಮಾನದಿಂದ ತಮ್ಮ ಹೆಸರು ಇರುವಂತೆ 'ಗೋಕುಲ ಅಷ್ಟಮಿ' ಎಂದು ಮಾಡುವುದು ನಡೆಯುತ್ತಿದೆ. ಈಗಲೂ ಸಹ ಶ್ರೀಕೃಷ್ಣಾಷ್ಟಮಿ, ಗೋಕುಲಾಷ್ಟಮಿ' ಎಂದು ಎರಡು ಹೆಸರುಗಳಿಂದ ಅಷ್ಟಮಿ, ನವಮಿ ಎರಡು ದಿನಗಳಂದು ಹಬ್ಬಗಳನ್ನು ಮಾಡುವುದು ನಡೆಯುತ್ತಿದೆ. ಅಷ್ಟಮಿ ದಿನ ಜ್ಞಾನಿಗಳು ಮಾಡುವುದು ಕೃಷ್ಣಾಷ್ಟಮಿ, ನವಮಿ ದಿನ ಗೋಕುಲ ವಂಶದವರಾದರು ಈದಿನ ಯಾದವರೆಂಬ ಗೊಲ್ಲ ಕುಲದವರು ಪ್ರತ್ಯೇಕವಾಗಿ ಮಾಡುವುದು ಗೋಕುಲಾಷ್ಟಮಿ ಎಂದು ತಿಳಿಯಬೇಕು. ಕೃಷ್ಣನು ಹುಟ್ಟಿರುವುದು ಅಷ್ಟಮಿ ದಿನವೇ ಆದರೂ ಕೃಷ್ಣಾಷ್ಟಮಿ, ಗೋಕುಲಾಷ್ಟಮಿ ಎನ್ನುವ ಎರಡು ಹೆಸರುಗಳಿಂದ ಅಷ್ಟಮಿದಿನ, ನವಮಿ ದಿನ ಹಬ್ಬ ಮಾಡುತ್ತಿರುವುದು ನಡೆಯುತ್ತಿದೆ.

ಕೃಷ್ಣ ಜಯಂತಿಯನ್ನು ನವಮಿದಿನದಂದು ಮಾಡಿದರು ಅದರ ಹೆಸರು ಗೋಕುಲಾಷ್ಟಮಿ ಎಂದು ಅಷ್ಟಮಿಯನ್ನೆ ತೋರಿಸುತ್ತಿದೆ. ಆದ್ದರಿಂದ ಶ್ರೀಕೃಷ್ಣನ ಜನ್ಮ ಉತ್ಸವವು ಅಷ್ಟಮಿ, ನವಮಿ ಎರಡು ದಿನಗಳು ನಡೆಯುವುದು ಆನಂದದಾಯಕವಾದ ಕೆಲಸವಾಗಿ ತಿಳಿಯಬಹುದು. ಕಲಿಯುಗದ ಆರಂಭದಲ್ಲಿ

ದೇಶವ್ಯಾಪ್ತವಾಗಿ ಕೃಷ್ಣಾಷ್ಟಮಿ ಗೋಕುಲಾಷ್ಟಮಿ ಎರಡು ದಿನಗಳು ನಡೆಯುತ್ತಿತ್ತು. ಆ ಎರಡು ದಿನಗಳಲ್ಲಿ ಎಲ್ಲರು ತಮ್ಮ ತಮ್ಮ ಕೆಲಸಗಳನ್ನು ಬಿಟ್ಟು ಉತ್ಸವ ಮಾಡುತ್ತಿದ್ದರು. ಆ ದಿನಗಳಲ್ಲಿ ಯಾರನ್ನು ಕೆಲಸಕ್ಕೆ ಕಳಿಸುತ್ತಿರಲಿಲ್ಲ. ಕೆಲಸಗಳಿದ್ದರೆ ಕೃಷ್ಣನ ಉತ್ಸವದಲ್ಲಿ ಪಾಲ್ಗೊಳ್ಳುವುದಿಲ್ಲವೆಂದು ಎಲ್ಲ ಕೆಲಸಗಳಿಗೆ ಸ್ವಸ್ತಿ ಹೇಳುತ್ತಿದ್ದರು. ಆ ದಿನಗಳಲ್ಲಿ ಯಾರಿಗಾದರು, ಯಾವ ಕೆಲಸಕ್ಕಾದರೂ ಒಳ್ಳೆಯ ಮುಹೂರ್ತವಿದ್ದರೂ ಅದನ್ನು ಮಾಡದೆ ಇರುವಂತೆ (ಬಿಡುವಂತೆ) ಯಾರು ಯಾವ ಕೆಲಸದ ಕಡೆಗೂ ಹೋಗದಂತೆ ಹಿರಿಯರು ಒಂದು ಭಯವನ್ನು ಇಟ್ಟಿದ್ದಾರೆ. ಅಷ್ಟಮಿ ದಿನ ಯಾವ ಕೆಲಸವನ್ನು ಪ್ರಾರಂಭಿಸಿದರೂ ಅದರಲ್ಲಿ ಕಷ್ಟ ಏರ್ಪಡುತ್ತದೆಂದು, ಆ ಕೆಲಸ ಸಕ್ರಮವಾಗಿ ಸಾಗುವುದಿಲ್ಲವೆಂದು ಹೇಳಿದ್ದಾರೆ. ಹಾಗೆಯೇ ನವಮಿ ದಿನ ಕೆಲಸವನ್ನು ಪ್ರಾರಂಭಿಸಿದರೆ ಅದರಿಂದ ಹೆಚ್ಚು ನಷ್ಟ ಬರುತ್ತದೆಂದು ಹೇಳಿದ್ದಾರೆ. ಕೃಷ್ಣಾಷ್ಟಮಿ, ಗೋಕುಲಾಷ್ಟಮಿ ಸಕ್ರಮವಾಗಿ ನಡೆಯುವುದಕ್ಕೆ, ಎಲ್ಲರೂ ಪಾಲ್ಗೊಳ್ಳುವುದಕ್ಕೆ ಅವಕಾಶ ಇರುವಂತೆ ಆ ವಿಧವಾಗಿ ಹೇಳಿ ಭಯವನ್ನು ಏರ್ಪಡಿಸಿ, ಆ ಎರಡು ದಿನಗಳು ಕೆಲಸವನ್ನು ಬಿಡಿಸಿದ್ದಾರೆ. ಆ ಭಯ ಎಲ್ಲರಿಗೂ ತಿಳಿಯುವಂತೆ ಅಷ್ಟಮಿ ಕಷ್ಟ, ನವಮಿ ನಷ್ಟ ಎನ್ನುವ ಮಾತನ್ನು ಪ್ರಯೋಗವಾಗಿ ಬಳಸಿ ಮನುಷ್ಯರಲ್ಲಿ ಎಲ್ಲರಿಗೂ ತಿಳಿಯುವಂತೆ ಮಾಡಿದ್ದಾರೆ. ಆದಿನ ಅವರು ಮಾಡಿರುವುದು ಒಳ್ಳೆಯ ಉದ್ದೇಶವೇ ಅದರೂ ಅಷ್ಟಮಿ ಕಷ್ಟ, ನವಮಿ ನಷ್ಟ ಎನ್ನುವಮಾತು ಇಂದಿಗೂ ಯಾರಿಗೂ ತಿಳಿಯದಂತೆ ಹೋಗಿದೆ. ಆ ಮಾತು ತಿಳಿಯದಂತೆ ಹೋಗುವುದಲ್ಲದೆ ಕೃಷ್ಣಾಷ್ಟಮಿಯನ್ನು ಮಾಡುವವರು 90 ರಷ್ಟು ಕಡಿಮೆಯಾಗಿದ್ದಾರೆ.

ನಾವು ಕೃಷ್ಣ ಜಯಂತಿಯನ್ನು ಹಬ್ಬವಾಗಿ ಮಾಡಿದರೂ ಮಾಡದಿದ್ದರೂ ಆತನು ಅಷ್ಟಮಿ ತಿಥಿ ದಿನವೇ ಏಕೆ ಹುಟ್ಟಿದ್ದಾನೆಂದು ಯೋಚಿಸಿದರೆ ಎಷ್ಟೋ ಜ್ಞಾನ ಅರ್ಥ ಇದೆಯೆಂದು ಹೇಳಿಕೊಂಡಿದ್ದೇವೆ! ಅದನ್ನು ಕುರಿತು ವಿವರಿಸಿಕೊಂಡರೆ ಈ ವಿಧವಾಗಿ ಇದೆ. ಅಮಾವಾಸ್ಯೆಯಿಂದ ಹುಣ್ಣಿಮೆಯವರೆಗು 15 ದಿನಗಳು, ಹಾಗೆ ಹುಣ್ಣಿಮೆಯಿಂದ ಅಮಾವಾಸ್ಯದವರಿಗು 15 ದಿನಗಳಿರುವುದು

ಎಲ್ಲರಿಗೂ ತಿಳಿದ ವಿಷಯವೇ. ಶ್ರೀಕೃಷ್ಣನು ಹುಣ್ಣಿಮೆಯಿಂದ ಅಮಾವಾಸ್ಯವರೆಗು ಇರುವ 15 ದಿನಗಳಲ್ಲಿ ಮಧ್ಯದಲ್ಲಿರುವ ಅಷ್ಟಮಿ ದಿನದಂದು ಜನ್ಮಿಸಿದ್ದಾನೆ. 15 ದಿನಗಳಲ್ಲಿ ಪಾಡ್ಯಮಿಯಿಂದ ಸಪ್ತಮಿವರೆಗು 7 ದಿನಗಳು ಮಧ್ಯದಲ್ಲಿ ಅಷ್ಟಮಿ, ನಂತರ ನವಮಿಯಿಂದ ಅಮಾವಾಸ್ಯೆವರೆಗು 7 ದಿನಗಳು ಇವೆ. 7+1+7=15 ಹದಿನೈದು ಎರಡು ಸಮಾನ ಭಾಗಗಳು ಮಾಡಬೇಕೆಂದರೆ 7 ಮತ್ತು 7 ದಿನಗಳಾಗಿ ವಿಭಜಿಸಿದಾಗ ಒಂದು ಶೇಷ ಉಳಿಯುತ್ತದೆ. ಆ ಒಂದು ದಿನ ಅಷ್ಟಮಿಯಾಗಿ ಗುರುತಿಸಿ ಅಷ್ಟಮಿಗೆ ಮುಂದೆ 7 ದಿನಗಳಾಗಿ, ಹಿಂದೆ 7 ದಿನಗಳಾಗಿ ಗುರುತಿಸಿಕೊಳ್ಳಬೇಕು. ಶ್ರೀಕೃಷ್ಣನು ಮಧ್ಯ ದಿನವಾದ ಅಷ್ಟಮಿಯಂದೆ ಹುಟ್ಟಿರುವುದಕ್ಕೆ ವಿಶೇಷವಾದ ಅರ್ಥ ಇದೆ ಅದೇನೆಂದರೆ!

ಭಗವಂತನಾದ ಶ್ರೀಕೃಷ್ಣನು ಜ್ಞಾನಕ್ಕು, ಅಜ್ಞಾನಕ್ಕು ಸಂಧಿಯಂತಹವನು. ಅಜ್ಞಾನದಿಂದ ಜ್ಞಾನಕ್ಕೂ ಜ್ಞಾನದಿಂದ ಅಜ್ಞಾನಕ್ಕೂ ಹೋಗುವುದಕ್ಕೆ ಆತನು ಕೇಂದ್ರದಂತಹವನು. ಎಷ್ಟೋಜನ ಜ್ಞಾನಿಗಳು ಸಹಿತ ಆತನು ತನ್ನ ಜೀವನದಲ್ಲಿ ನಡೆದುಕೊಂಡ ಪದ್ಧತಿಗಳನ್ನು ಆಚರಣೆಗಳನ್ನು ನೋಡಿ, ಆತನು ಹೇಳಿದ ಗೀತೆ ಎಲ್ಲಾ ಚೆನ್ನಾಗಿಯೇ ಇದೆ, ಆದರೆ ಆತನ ಆಚರಣೆ ನಮಗೆ ಇಷ್ಟವಾಗಲಿಲ್ಲ. ಪ್ರವರ್ತನೆ ಮುಖ್ಯ ಅಲ್ಲವೆ! ಒಳಗೆ ಗುಣಗಳನ್ನು ಅನುಸರಿಸಿಯೇ ಅಲ್ಲವೆ ಯಾರಾದರೂ ಆಚರಿಸುವುದು, ಆತನು ಎಷ್ಟು ಹೇಳಿದರೂ ಶ್ರೀಕೃಷ್ಣನು ಮಾಡಿದ ಕೆಲಸಗಳನ್ನು ನೋಡಿದರೆ, ಬೋಧನೆಗಳು ಹೇಳಿದಷ್ಟು ಉತ್ತಮನಲ್ಲವೆಂದು ತಿಳಿಯುವಂತೆ ಹೇಳುತ್ತಿದ್ದಾರೆ, ಅಂತಹವರು ಜ್ಞಾನದಿಂದ ಕೃಷ್ಣನ ಮೂಲಕ ಅಜ್ಞಾನದೊಳಗೆ ಹೋದಂತೆ, ಅವರಿಗಿರುವ ಜ್ಞಾನ ನಿಷ್ಪ್ರಯೋಜನ. ಶ್ರೀಕೃಷ್ಣನು ಏನು ಹೇಳಿದ್ದಾನೊ ಅವರು ಅರ್ಥ ಮಾಡಿಕೊಂಡಿಲ್ಲ. ಹಾಗಿರುವಾಗ ಶ್ರೀಕೃಷ್ಣನು ಹೇಳಿದ ಅಸಲಾದ ಜ್ಞಾನವು ಬೇರೆ ವಿಧವಾಗಿ ಅರ್ಥವಾಗಿ ಪ್ರವರ್ತನೆಗೆ ಭಿನ್ನವಾಗಿ ತೋಚಿದಾಗ ಅವರು ಶ್ರೀಕೃಷ್ಣನಿಗೆ ಭಿನ್ನವಾಗಿ ಹೋಗುತ್ತಾರೆ. ಶ್ರೀಕೃಷ್ಣನು ಜ್ಞಾನಕೇಂದ್ರವಾದಾಗ, ಆತನಿಗೆ ಭಿನ್ನವಾಗಿ ಹೋಗುವವರು ಅಜ್ಞಾನದಕಡೆ ಹೋಗುತ್ತಿದ್ದಾರೆಂದು ತಿಳಿಯಬೇಕು. ಹಾಗೆ ಶ್ರೀಕೃಷ್ಣನನ್ನು ನೋಡಿ ಆತನು




**ಹೇಳಿರುವುದು, ಮಾಡಿರುವುದು, ಮಾಡಿಸಿರುವುದು** ಎಲ್ಲಾ ಒಂದೇಯೆಂದು ತಿಳಿದವರು ಜ್ಞಾನದಕಡೆ ಸಾಗಿಹೋಗುತ್ತಾರೆ. ಆತನನ್ನು ನೋಡಿ ಇರುವಕಡೆಯಿಂದ ಕೆಲವರು ಜ್ಞಾನದಕಡೆಗೆ, ಕೆಲವರು ಅಜ್ಞಾನದಕಡೆ ಹೋಗುತ್ತಿದ್ದಾರೆ. ಆದ್ದರಿಂದ ಶ್ರೀಕೃಷ್ಣನು ಅತ್ತ ಜ್ಞಾನಕ್ಕು ಇತ್ತ ಅಜ್ಞಾನಕ್ಕು ಮಧ್ಯ ಇರುವವನೆಂದು ತಿಳಿಯುವಂತೆ ಅಷ್ಟಮಿದಿನವನ್ನೇ ಆಯ್ಕೆ ಮಾಡಿಕೊಂಡು ಹುಟ್ಟಿದ್ದಾನೆ. ಶ್ರೀಕೃಷ್ಣನು ಬಹುಳಪಕ್ಷ ಅಷ್ಟಮಿ ದಿನವೇ ಏಕೆ ಹುಟ್ಟಬೇಕು? ಶುಕ್ಲಪಕ್ಷ ಅಷ್ಟಮಿಯ ದಿನ ಏಕೆ ಹುಟ್ಟಲಿಲ್ಲ? ಅದಕ್ಕೆ ಕಾರಣ ಏನಾಗಿರಬಹುದೆನ್ನುವ ಸಂಶಯ ಕೆಲವರಿಗೆ ಬರಬಹುದು. ಅದಕ್ಕೆ ನಮ್ಮ ಸಮಾಧಾನವೇನೆಂದರೆ!

ಜ್ಞಾನಬೋಧನೆಗಳಲ್ಲಿ ಚಂದ್ರನನ್ನು ಜ್ಞಾನಚಿಹ್ನೆಯಾಗಿ ಹೇಳಿದ ಸಂದರ್ಭಗಳು ಇವೆ. ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ 25ನೇ ಶ್ಲೋಕದಲ್ಲಿ ಯೋಗಿಗಳಿಗೂ ಮರುಜನ್ಮ ಇದ್ದರೆ ಜ್ಞಾನವಿಕಾಸಹೊಂದಿ ಹುಟ್ಟುತ್ತಾರೆಂದು ಹೇಳುತ್ತಾ **"ಚಾಂದ್ರಮಸಂ ಜ್ಯೋತಿಃ"** ಚಂದ್ರತೇಜಸ್ಸು ಹೊಂದಿ ಹುಟ್ಟುತ್ತಾರೆಂದು ಜ್ಞಾನವಿಕಾಸವನ್ನು ಚಂದ್ರನ ಬೆಳದಿಂಗಳಿಗೆ ಹೋಲಿಸಿ ಹೇಳಿದ್ದಾರೆ. ಆದ್ದರಿಂದ ಬೆಳೆದಿಂಗಳಾದ ಹುಣ್ಣಿಮೆಯನ್ನು ಜ್ಞಾನವಾಗಿ, ಕತ್ತಲಮಯವಾದ ಅಮಾವಾಸ್ಯೆ

ಯನ್ನು ಅಜ್ಞಾನವಾಗಿ ಸುಲಭವಾಗಿ ಹೋಲಿಸಿಕೊಳ್ಳಬಹುದು. ಪರಮಾತ್ಮ ಜ್ಞಾನಯುತನಾಗಿದ್ದು ಅಜ್ಞಾನಯುತವಾದ ಪ್ರಪಂಚದೊಳಗೆ ಬಂದು ಭಗವಂತನಾಗಿ ಹುಟ್ಟಿದ್ದಾನೆ. ಆದ್ದರಿಂದ ಜ್ಞಾನ ಚಿಹ್ನೆಯಾದ ಹುಣ್ಣಿಮೆಯಿಂದ ಕತ್ತಲಾಗುತ್ತಾ ಹೋಗಿ ಕೊನೆಗೆ ಅಮಾವಾಸ್ಯೆಯಾಗಿ ಬದಲಾಗುವ ಬಹುಳ ಪಕ್ಷಮಿಯಲ್ಲಿ ಹುಟ್ಟಿದ್ದಾನೆ. ಹಾಗೆ ಹುಟ್ಟಿದ ಆತನು ಅತ್ತ ಜ್ಞಾನಿಯಾ, ಇತ್ತ ಅಜ್ಞಾನಿಯಾ ಯಾರಿಗೂ ಅರ್ಥವಾಗದಂತೆ. **ಜ್ಞಾನ ಅಜ್ಞಾನ ಎರಡು ನನ್ನಲ್ಲಿಯೇ ಇವೆಯೆನ್ನುವ ಮತ್ತು ಜ್ಞಾನಕ್ಕು ಅಜ್ಞಾನಕ್ಕು ನಾನೇ ಮಾರ್ಗವು, ನಾನೇ ದ್ವಾರವು** ಎನ್ನುವಂತೆ ಮಧ್ಯದಲ್ಲಿ ಅಷ್ಟಮಿ ದಿನದಂದು ಹುಟ್ಟಿದ್ದಾನೆ. ಹುಣ್ಣಿಮೆ ಕಳೆದುಹೋದ ನಂತರ ಬರುವ ಅಷ್ಟಮಿ ದಿನ ಹುಟ್ಟಿದ್ದಾನೆ. ಆದ್ದರಿಂದ ಪರಮಾತ್ಮ ಜ್ಞಾನಪ್ರಕಾಶವಂತವಾದ ಪರದಿಂದ ಅಜ್ಞಾನ ಅಂಧಕಾರವಾದ ಪ್ರಪಂಚದೊಳಗೆ ಬಂದಿದ್ದಾನೆಂದು ತಿಳಿಯಬೇಕು. ಈ ವಿಧವಾಗಿ ಆತನು ಹುಟ್ಟಿದ ದಿನದಂದು ಸಹ ಎಷ್ಟೋ ವಿಶೇಷವಾದ ಅರ್ಥ ಒಳಗೊಂಡಿದೆ. ಆದಕಾರಣ ಆತನು ಹುಟ್ಟಿದ ದಿನವನ್ನು ಮಹಾಪರ್ವದಿನವಾಗಿ ಭಾವಿಸಿ, ಆ ದಿನವನ್ನು ಶ್ರೀಕೃಷ್ಣಾಷ್ಟಮಿ ಎಂದು ಹೆಸರಿಟ್ಟು ಪೂಜಿಸಿಕೊಳ್ಳುತ್ತಿದ್ದೇವೆ.

ಯಾರಾದರೆ ಸಕಲ ಸೃಷ್ಟಿಗೆ ಆಧಾರವಾಗಿದ್ದಾನೊ, ಸಕಲ ದೇವತೆಗಳು ಯಾರನ್ನಾದರೆ ದೇವರೆಂದು ಮುಗಿದಿದ್ದಾರೊ, ಅಣುಅಣುವಿನಲ್ಲಿ ವ್ಯಾಪಿಸಿ ಯಾರಿಗೂ ಕಾಣಿಸದ ಶಕ್ತಿ ಯಾವುದಾದರೆ ಇದೆಯೊ, ಕ್ಷಣ ಕ್ಷಣವು ನಡೆಯುತ್ತಿರುವ ಕಾಲವಾಗಿ, ಎಲ್ಲರಿಗೂ ಆಯುವಾಗಿ ಆರೋಗ್ಯವಾಗಿ, ಮರಣವಾಗಿ ಯಾರಾದರೆ ಇದ್ದಾನೊ, ಆ ದೇವರೆ ಕೃಷ್ಣನಾಗಿ ಹುಟ್ಟಿ, ಮನುಷ್ಯನಂತೆ ಚಲಾವಣೆಯಾದ ಒಬ್ಬ ವ್ಯಕ್ತಿ ಎಂದು ಹೇಳಿದರೆ ಯಾರಾದರೂ ನಂಬುತ್ತಾರಾ? ನಂಬುವುದಿಲ್ಲ. ಅಷ್ಟುದೊಡ್ಡ ದೇವರೇ ಮನುಷ್ಯನಾಗಿ ಹುಟ್ಟುವುದೇನು? ಎನ್ನುವ ಪ್ರಶ್ನೆ ಬಾರದೆ ಇರುವುದಿಲ್ಲ. ಇಲ್ಲಿ ಒಂದು ಚಿಕ್ಕ ಉಪಮಾನವನ್ನು ಹೇಳಿಕೊಳ್ಳೋಣ. ಸಮುದ್ರ ಸಕಲ ಭೂಮಂಡಲಗಳನ್ನು ವ್ಯಾಪಿಸಿದೆ. ಎಷ್ಟೋ ವಿಶಾಲವಾದುದು, ಅದರಲ್ಲಿ ಇಷ್ಟು ಎಂದು ಹೇಳಲಾರದ

ಅಸಂಖ್ಯಾಕಗಳಾದ ಜೀವರಾಶಿಗಳಿವೆ. ಸಮುದ್ರ ಇಲ್ಲದ್ದು ಭೂಮಿಗೆ ಉಳಿಗಾಲವೇ ಇಲ್ಲ ಎಂದು ಹೇಳುವ ಸಮುದ್ರವು ನಿನ್ನ ಮನೆಯಲ್ಲಿ ನಿನ್ನ ದೇಹದಲ್ಲಿದೆ ಎಂದರೆ ಯಾರಾದರೂ ನಂಬುತ್ತಾರಾ? ದೇವರೆ ಕೃಷ್ಣನು ಎಂದರೆ ಹೇಗೆ ನಂಬುವುದಿಲ್ಲವೊ ಹಾಗೆ ಸಮುದ್ರ ಮನೆಯಲ್ಲಿ ಇದೆ ಎಂದರೆ ನಂಬುವುದಿಲ್ಲ. ಅಷ್ಟು ದೊಡ್ಡ ದೇವರು ಇಷ್ಟು ಚಿಕ್ಕ ಮನುಷ್ಯನಾ! ಎಂದು ಹೇಗೆ ನಂಬುವುದಿಲ್ಲವೋ, ಹಾಗೆ ಅಷ್ಟು ದೊಡ್ಡ ಸಮುದ್ರವು ಇಷ್ಟು ಚಿಕ್ಕ ಮನೆಯಲ್ಲಿ ಇದೆಯಾ! ಎಂದು ನಂಬಲಾರೆವು. ಆದರೂ ವಿವರಿಸಿಕೊಂಡು ನೋಡಿದರೆ ದೇವರು ಮನುಷ್ಯನಲ್ಲಿರುವುದು ನಿಜವೇ, ಹಾಗೆಯೇ ಸಮುದ್ರವು ಮನೆಯಲ್ಲಿರುವುದು ನಿಜವೇ. ಅಸಾಧ್ಯವೆಂದುಕೊಂಡಿರುವುದನ್ನು ಸುಸಾಧ್ಯ ಎನ್ನುವಂತೆ ಮಾಡುವ ವಿವರವೇನೆಂದು ನೋಡಿದರೆ ಈ ವಿಧವಾಗಿ ವಿವರವಿದೆ.

ನೀರು ಸಮುದ್ರದಲ್ಲಿ ಇದೆ. ಸಮುದ್ರವೆಲ್ಲ ತುಂಬಿರುವ ನೀರಿಗೆ ಕೆಲವು ಧರ್ಮಗಳು ಇವೆ. ಹಾಗೆಯೇ ವಿಶ್ವದಲ್ಲಿ ದೇವರಿದ್ದಾನೆ. ವಿಶ್ವವೆಲ್ಲಾ ತುಂಬಿರುವ ದೇವರಿಗೆ ಕೆಲವು ಧರ್ಮಗಳು ಇವೆ. ಎಷ್ಟೋ ಲೆಕ್ಕವಿಲ್ಲದಷ್ಟು ನೀರಿನ ಬಿಂದುಗಳ ಕಲೆಯಿಕೆ ಸಮುದ್ರವೆಲ್ಲ ತುಂಬಿರುವ ನೀರು. ಹಾಗೆಯೇ ಎಷ್ಟೋ ದೈವಅಂಶಗಳ ಕಲೆಯಿಕೆ ದೇವರು. ಸಮುದ್ರವೆಲ್ಲ ತುಂಬಿರುವ ನೀರಿಗೆ ಯಾವ ಧರ್ಮವಿದೆಯೊ, ಅದೇ ಧರ್ಮ ನೀರಿನ ಬಿಂದುವಿಗೂ ಸಹ ಇದೆ. ಹಾಗೆ ವಿಶ್ವವೆಲ್ಲ ತುಂಬಿರುವ ದೇವರಿಗೆ ಯಾವ ಧರ್ಮವಿದೆಯೊ, ಅದೇ ಧರ್ಮ ದೈವ ಅಂಶಕ್ಕೂ ಸಹ ಇದೆ. ಸಮುದ್ರದಲ್ಲಿನ ಅಖಂಡವಾದ ನೀರಿಗೆ ಯಾವ ಧರ್ಮವಿದೆಯೊ, ಅದೇ ಧರ್ಮ ಖಂಡವಾದ ನೀರಿನ ಬಿಂದುವಿಗೂ ಸಹ ಇದೆಯೆಂದು ಹೇಗೆ ಹೇಳುತ್ತಿದ್ದೇವೊ, ಹಾಗೆಯೇ ವಿಶ್ವದಲ್ಲಿನ ಅಖಂಡವಾದ ದೇವರಿಗೆ ಯಾವ ಧರ್ಮವಿದೆಯೊ, ಅದೇ ಧರ್ಮ ಖಂಡವಾದ ದೇವರ ಅಂಶಕ್ಕೂ ಸಹ ಇದೆ. ಗಮನಿಸಬೇಕಾದ ವಿಷಯವೇನೆಂದರೆ ಅಖಂಡವಾಗಿರುವ ನೀರನ್ನು ಸಮುದ್ರ ಎನ್ನುತ್ತಿದ್ದೇವೆ. ಸಮುದ್ರದಿಂದ ಖಂಡವಾಗಿ ಬಯಲ್ಪಟ್ಟ ಒಂದು ನೀರಿನ ಚುಕ್ಕೆಯನ್ನು ನೀರಿನಬಿಂದು ಎನ್ನುತ್ತಿದ್ದೇವೆ. ಹಾಗೆಯೇ ಅಖಂಡವಾಗಿ ಎಲ್ಲಕಡೆ

ವ್ಯಾಪಿಸಿರುವ ದೈವಶಕ್ತಿಯನ್ನು ದೇವರು ಎನ್ನುತ್ತಿದ್ದೇವೆ. ದೇವರಿಂದ ಹೊರಬಿದ್ದು ಖಂಡವಾಗಿರುವ ಒಂದು ದೇವರ ಅಂಶವನ್ನು ಭಗವಂತನು ಎನ್ನುತ್ತಿದ್ದೇವೆ. ಸಮುದ್ರಕ್ಕು ನೀರಿನ ಬಿಂದುವಿಗು ಒಂದೇ ಧರ್ಮವಿರುವಂತೆ, ದೇವರಿಗು, ಭಗವಂತನಿಗು ಒಂದೇ ಧರ್ಮ ಇದೆ. ದೇವರ ಧರ್ಮಗಳು ದೇವರಿಗೆ ತಿಳಿದಿದೆ, ದೇವರೇ ಮಾನವರಿಗೆ ತಿಳಿಸಬೇಕು ಎನ್ನುವ ಧರ್ಮ ಭಗವಂತನಿಗೂ ಸಹ ಇದೆ. ಆದ್ದರಿಂದ ದೇವರ ಧರ್ಮಗಳು ಭಗವಂತನಿಗೂ ಸಹ ತಿಳಿದಿದೆ. ಹಾಗೆಯೇ ದೇವರೆ ಮಾನವನಿಗೆ ತಿಳಿಸಬೇಕು ಎನ್ನುವಂತೆ ಭಗವಂತನೆ ಮನುಷ್ಯರಿಗೆ ತಿಳಿಸುತ್ತಾನೆ. ಈ ಉಪಮಾನವನ್ನು ಅನುಸರಿಸಿ ದೇವರು, ಭಗವಂತನು ಎನ್ನುವ ಒಬ್ಬ ಮನುಷ್ಯನಾಗಿ ಬರುತ್ತಾನೆಂಬುದನ್ನು ಯಾರಾದರೂ ವಿಶ್ವಸಿಸುತ್ತಾರೆ. ದೇವರು ಭಗವಂತನು ಇಬ್ಬರೂ ಒಬ್ಬರೆ ಆದರೂ ಇರುವ ಸ್ಥಿತಿಯನ್ನನುಸರಿಸಿ **ಅಪರಿಮಿತವಾಗಿ ಇರುವಾಗ ದೇವರು, ಪರಿಮಿತವಾಗಿ ಇರುವಾಗ ಭಗವಂತನೆಂದು** ಹೇಳುತ್ತಿದ್ದೇವೆ.

ಪರಿಮಿತಿ ಇಲ್ಲದ ದೇವರು ಪರಿಮಿತವಾದ ಶರೀರದೊಳಗೆ, ಆಕಾರವಿಲ್ಲದ ದೇವರು ಆಕಾರವಿರುವ ಶರೀರದೊಳಗೆ, ಹೆಸರಿಲ್ಲದ ದೇವರು ಹೆಸರಿರುವ ಶರೀರದೊಳಗೆ, ಯಾವ ಕಾರ್ಯಮಾಡದ ದೇವರು ಕೆಲಸ ಮಾಡುವ ಶರೀರದೊಳಗೆ ಬಂದಾಗ ಆ ಶರೀರವನ್ನು ಭಗವಂತನೆಂದು ಕರೆಯುತ್ತಿದ್ದೇವೆ. ದೇವರ ಅಂಶ ಶರೀರಧಾರಿಯಾಗಿ ಬಂದಿರುವುದೆ ಶ್ರೀಕೃಷ್ಣನು. ಆತನೆ ಭಗವಾನ್ ಶ್ರೀಕೃಷ್ಣ. ಅಷ್ಟು ದೊಡ್ಡ ದೇವರು ಮಾನವಾಕಾರದಿಂದ ಬಂದಿರುವಾಗ ಆತ ಹುಟ್ಟಿದ ಸಮಯ ಬಹಳ ಪವಿತ್ರವಾದುದೆಂದು, ಶ್ರೇಷ್ಠವಾದುದೆಂದು ಭಗವಂತನ ಜನ್ಮದಿನವನ್ನು ಹಬ್ಬವಾಗಿ ಮಾಡಿಕೊಳ್ಳುತ್ತಿದ್ದೇವೆ. ಅದೇ ಕೆಲವರಿಗೆ ಕೃಷ್ಣಾಷ್ಟಮಿ, ಕೆಲವರಿಗೆ ಗೋಕುಲಾಷ್ಟಮಿ. ಕಲಿಯುಗ ಆರಂಭದಲ್ಲಿ ಎಲ್ಲರೂ ಮಾಡುವ ಕೃಷ್ಣಜಯಂತಿ ಇಂದು ಕಣ್ಮರೆಯಾಗಿ ಹೋಗುತ್ತಿದೆ. ದೇವರಿಗೆ ವಿರುದ್ಧವಾದುದು ಮಾಯೆ. ಮಾಯೆ ಮಾನವನಲ್ಲಿದ್ದು ದೇವರಕಡೆ ಹೋಗದಂತೆ ಮಾಡುತ್ತಿದೆ. ಹಾಗೆ ಮಾಡುವುದಕ್ಕೆ ಬೇಕಾದ ಪ್ರಯತ್ನ ಪೂರ್ವಕ ಏರ್ಪಾಡುಗಳನ್ನೆಲ್ಲ

ಮಾಡಿಡುತ್ತಿದೆ. ಮಾಯೆ ಮಾಡುವ ಆ ಕಾರ್ಯಕ್ರಮಗಳಲ್ಲಿ ಕೃಷ್ಣಾಷ್ಟಮಿಯನ್ನು ಇಲ್ಲದಂತೆ ಮಾಡುವುದು ಸಹ ಒಂದು ಕೆಲಸ. ಆದ್ದರಿಂದ ಪೂರ್ವದಲ್ಲಿ ಹಿರಿಯರು ಇಟ್ಟಿರುವ ನಾಣ್ನುಡಿ ಮಾತಾದ ಅಷ್ಟಮಿ ಕಷ್ಟ, ನವಮಿ ನಷ್ಟ ಈ ಕಾಲದಲ್ಲಿ ಯಾರಿಗೂ ತಿಳಿಯದಂತೆ ಮಾಡಿದೆ. ಆ ಮಾತು ತಿಳಿಯದಂತೆ ಹೋಗಿರುವುದರಿಂದ ಕೃಷ್ಣಜಯಂತಿವೊಂದರ ಜ್ಞಾಪಕ ಬಹಳಜನರಿಗೆ ಇಲ್ಲದಂತೆ ಹೋಗಿದೆ. ಮಾಯಾ ಪ್ರಭಾವದಿಂದ ಮನುಷ್ಯರು ಭಗವಂತನನ್ನು ಯಾವಮಾತ್ರ ಗುರುತಿಸಲಾರದೆ ಮಾಯೆ ಮನುಷ್ಯನಲ್ಲಿ ಗುಣಗಳ ರೂಪದಲ್ಲಿದ್ದು, ದೈವಮಾರ್ಗ ದೊಳಗೆ ಮನುಷ್ಯನನ್ನು ಹೋಗದಂತೆ ಮಾಡುತ್ತಿದೆ. ಹಾಗೆ ಮಾಡಬೇಕೆಂದರೆ ಮನುಷ್ಯನನ್ನು ದೇವರಕಡೆ ಹೋಗುತ್ತಿರುವಂತೆ ನಂಬಿಸಿ ಪಕ್ಕದಾರಿ ಹಿಡಿಸಬೇಕೆನ್ನುವುದು ಮಾಯೆವೊಂದರ ಯೋಜನೆ. ಆ ಯೋಜನೆಯಲ್ಲಿ ಭಾಗವಾಗಿ ಕೃಷ್ಣಾಷ್ಟಮಿಗೆ ಬದಲಾಗಿ ಅದರ ಸ್ಥಾನದಲ್ಲಿ ಮತ್ತೊಂದು ಹಬ್ಬವನ್ನು ತಂದಿಟ್ಟು, ಎಲ್ಲರ ದೃಷ್ಟಿ ಅದರಕಡೆ ಮರಳಿಸುವಂತೆ ಮಾಡಿದೆ. ದೇವರು ಹೇಳಿದಂತೆ ಮಾಯೆಗೂ ಬಲಹೆಚ್ಚು ಆದ್ದರಿಂದ ಕೃಷ್ಣಾಷ್ಟಮಿಯನ್ನು ಇಲ್ಲದಂತೆ ಮಾಡಿ, ಮಾಯೆ ತನ್ನ ಹಬ್ಬವನ್ನು ತಂದಿಟ್ಟು ಚಿಕ್ಕವರನ್ನು ದೊಡ್ಡವರನ್ನು ಅದರಲ್ಲಿ ಭಾಗವಹಿಸುವಂತೆ ಮಾಡಿದೆ.

ಪೂರ್ವದಲ್ಲಿ ಕೃಷ್ಣಾಷ್ಟಮಿಯನ್ನು ಹನ್ನೊಂದು ದಿನಗಳ ಹಬ್ಬವಾಗಿ ಮಾಡುತ್ತಿದ್ದರು. ಕೃಷ್ಣಾಷ್ಟಮಿ ಮನೆಯೊಳಗೆ ಮಾಡುವ ಹಬ್ಬವಲ್ಲ. ಪೂರ್ವವೆಲ್ಲರು ಬೀಧಿಗಳಲ್ಲಿಯೇ ಮಾಡುತ್ತಿದ್ದರು. ಬೀಧಿಗಳಲ್ಲಿಯೇ ಉಟ್ಟಿಗಳ ಆಟ ಆಡುತ್ತಿದ್ದರು. ಬೀಧಿಗಳಲ್ಲಿಯೇ ಗಂಡಸರು ಗೋಪಿಕೆಯರಂತೆ ಹೆಂಗಸರ ವೇಷ ಹಾಕಿಕೊಂಡು ಬೆಣ್ಣೆಕಳ್ಳರಂತೆ ಬಂದರೆ ಅವರನ್ನು ಹೆಂಗಸರು ಕೈಗಳಿಂದ, ಕಟ್ಟಿಗೆಗಳಿಂದ ಹೊಡೆಯುತ್ತಿದ್ದರು. ಹೆಂಗಸರವೇಷದಲ್ಲಿರುವ ಗಂಡಸರನ್ನು ಹೆಂಗಸರು ಹೊಡೆಯುವುದು ಸಹ ಉತ್ಸವದಲ್ಲಿ ಒಂದು ಭಾಗವಾಗಿ ಇರುತ್ತಿತ್ತು. ಬೀಧಿಗಳಲ್ಲಿಯೇ ಮಂಟಪಕಟ್ಟಿ, ಆ ಮಂಟಪದಲ್ಲಿ ಕೃಷ್ಣನ ಪ್ರತಿಮೆಯನ್ನು ಇಟ್ಟು, ಹನ್ನೊಂದು ದಿನಗಳು ಪೂಜಿಸುತ್ತಿದ್ದರು. ಬೀಧಿಗಳಲ್ಲಿನ ಮಂಟಪದ

ಮುಂದೆ ಕೃಷ್ಣಲೀಲೆಗಳನ್ನು ಪ್ರದರ್ಶಿಸುತ್ತಾ ಉಟ್ಟಿಗಳ ಆಟ, ಬೆಣ್ಣೆಕಳ್ಳನ ಆಟ ಮೊದಲಾದವು ಆಡುತ್ತಾ ಸಂತೋಷದಿಂದ ಹನ್ನೊಂದು ದಿನಗಳು ಉತ್ಸವವನ್ನು ಮಾಡಿ, ಕೊನೆಯ ಹನ್ನೊಂದನೆದಿನ ಅಂದರೆ ಚೌತಿದಿನ ಮಂಟಪದಲ್ಲಿನ ಕೃಷ್ಣಪ್ರತಿಮೆಯನ್ನು ಮೆರವಣಿಗೆಮಾಡಿ, ಆ ಪ್ರತಿಮೆಯನ್ನು ಮನೆಯಲ್ಲಿ ಇಟ್ಟುಕೊಂಡು ಉತ್ಸವವನ್ನು ಮುಗಿಸುತ್ತಿದ್ದರು. ದೇಶದಲ್ಲಿ ಮೊಟ್ಟಮೊದಲ ಬೀಧಿ ಉತ್ಸವ ಕೃಷ್ಣಾಷ್ಟಮಿಯೇ ಎಂದು ತಿಳಿಯಬೇಕು. ಕೃಷ್ಣಾಷ್ಟಮಿಗಿಂತ ಮೊದಲು ಯಾವ ಬೀಧಿ ಉತ್ಸವಗಳು ಇಲ್ಲ. ನಂತರ ಮಾಯಾ ಪ್ರಭಾವದಿಂದ ಒಂದೊಂದಾಗಿ ತಯಾರಾಗಿವೆ. ಅದರಲ್ಲಿ ವಿನಾಯಕಚೌತಿ ಒಂದು, ನಂತರ ದುರ್ಗಾಷ್ಟಮಿ ಎರಡನೆಯದು. ವಿಶೇಷವೇನೆಂದರೆ ಕೃಷ್ಣನ ಹಬ್ಬ ಅಷ್ಟಮಿ ತಿಥಿ ಹೆಸರಿನಿಂದ ಇರುವಾಗ ಅದಕ್ಕೆ ಪ್ರತ್ಯಾಮ್ನಾಯವಾಗಿ ತಿಥಿಗಳ ಹೆಸರಿನಿಂದಲೇ ವಿನಾಯಕ ಚೌತಿ, ದುರ್ಗಾಷ್ಟಮಿ ಬೀಧಿ ಹಬ್ಬಗಳು ತಯಾರಾಗಿವೆಯೆಂದು ಗ್ರಹಿಸಬೇಕು.

ಕೃಷ್ಣಾಷ್ಟಮಿಗೆ ಬದಲಾಗಿ ಮೊದಲು ತಯಾರಾದ ಹಬ್ಬ ವಿನಾಯಕ ಚೌತಿಯಾಗಿದ್ದು, ನಂತರ ಈ ಮಧ್ಯಕಾಲದಲ್ಲಿ ದುರ್ಗಾದೇವಿ ಹಬ್ಬ ಸಹ ಬೀಧಿ ಹಬ್ಬವಾಗಿ ತಯಾರಾಗಿದೆ. ದುರ್ಗಾದೇವಿ ಹಬ್ಬ ಪೂರ್ವಕಾಲದಿಂದ ಭಕ್ತಿಯಿಂದ ಗೃಹಗಳಲ್ಲಿಯೇ ಒಂಭತ್ತು ದಿನಗಳು ಮಾಡುತ್ತಿದ್ದರು. ದುರ್ಗಾ ದೇವಿಯನ್ನು ಒಂದೊಂದು ದಿನ ಒಂದೊಂದು ಅಲಂಕಾರದಿಂದ ಪೂಜಿಸುವುದು ಸಾಂಪ್ರದಾಯದಿಂದ ಕೂಡಿಕೊಂಡಿರುವುದೆಂದು ಹೇಳಬಹುದು. ಇವತ್ತಿಗೂ ಸಹ ದುರ್ಗಾದೇವಿ ಹಬ್ಬವಾದ ದಶರಾ ಸಾಂಪ್ರದಾಯದಿಂದ ಕೂಡಿಕೊಂಡ ಹಬ್ಬವೆಂದು ಹೇಳಬಹುದು. ಆದರೆ ವಿನಾಯಕ ಚೌತಿ ಮಾತ್ರ ಯಾವ ಸಾಂಪ್ರದಾಯವಿಲ್ಲದ ಹಬ್ಬವೆಂದು ಹೇಳಬಹುದು. ನಮ್ಮ ಸಾಂಪ್ರದಾಯ ಅಲ್ಲದ ಹಬ್ಬ ನಮ್ಮ ಮಧ್ಯದೊಳಗೆ ಹೇಗೆ ಬಂದಿದೆ? ಎಂದು ಯೋಚಿಸಿದರೆ ಅದಕ್ಕೆ ಸ್ವಲ್ಪ ವಿವರವಿದೆ. ಅಷ್ಟಮಿಯಾಗಲಿ, ಚೌತಿಯಾಗಲಿ ತಿಥಿಗಳೆಂದು ಹೇಳಿದ್ದೇವೆ! ಪೂರ್ವದಲ್ಲಿ ಇಂದೂ ಧರ್ಮಗಳನ್ನು ತಿಳಿದ ಹಿರಿಯರು ಜ್ಯೋತಿಷ್ಯ ಶಾಸ್ತ್ರದಲ್ಲಿನ ತಿಥಿಗಳನ್ನು ತೆಗೆದುಕೊಂಡು, ಒಂದೊಂದು ತಿಥಿಗೆ ಒಂದೊಂದು ವಿಷಯ

ಪ್ರಾಬಲ್ಯವನ್ನು ಕೈಕೂಡಿಸಿ, ಆ ತಿಥಿ ದಿನ ಆ ವಿಷಯಕ್ಕೆ ಹೆಚ್ಚಾಗಿ ಪ್ರಾಧಾನ್ಯತೆ ಕೊಡುವಂತೆ ತಿಳಿಸಿದ್ದಾರೆ. ಅದರ ಪ್ರಕಾರ ಚೌತಿ ದಿನ ಸಮಾಜಕ್ಕೆ ಸಂಬಂಧಿಸಿದ ವಿಷಯಕ್ಕೆ ಪ್ರಾಧಾನ್ಯತೆ ಕೊಟ್ಟಿದ್ದಾರೆ. ಹಾಗೆ ಸಪ್ತಮಿ ಯೋಗಕ್ಕು, ಅಷ್ಟಮಿ ಮೋಕ್ಷಕ್ಕು, ದಶಮಿ ಏಕಾದಶಿ ಎರಡು ತಿಥಿಗಳು ಭಕ್ತಿ, ಜ್ಞಾನಕ್ಕು, ಅಮಾವಾಸ್ಯೆ ಹುಣ್ಣಿಮೆ ಎರಡು ಪರಮಾತ್ಮ ವಿಷಯಕ್ಕೆ ಪ್ರಾಧಾನ್ಯತೆ ಕೊಡುವವು ನಿರ್ಣ ಯಿಸಿದ್ದಾರೆ. ಆದ್ದರಿಂದ ಚೌತಿ ದಿನ ಹಬ್ಬಗಳಾದ ನಾಗರಚೌತಿ, ವಿನಾಯಕಚೌತಿ ಎರಡು ಸಮಾಜವೊಂದರ ಶ್ರೇಯಸ್ಸಿನ ವಿಷಯವನ್ನು ತಿಳಿಸುವವಾಗಿ ಏರ್ಪಾಡು ಮಾಡಿದ್ದಾರೆ. ಮೊದಲು ನಾಗರ ಚೌತಿಯನ್ನು ಕುರಿತು ಹೇಳಿಕೊಂಡರೆ, ಅದೇ ವಿಧಾನದ ಪ್ರಕಾರ ವಿನಾಯಕ ಚೌತಿ ಸಹ ಅರ್ಥ ಆಗುತ್ತದೆ. ಆಗ ಜ್ಞಾನಕ್ಕು, ಮಾಯೆಗು ವ್ಯತ್ಯಾಸ ತಿಳಿಯಬೇಕೆಂದರೆ ವಿನಾಯಕ ಚೌತಿಯನ್ನು ಕುರಿತು ವಿವರಿಸಿಕೊಳ್ಳಬೇಕು. ವಿನಾಯಕ ಚೌತಿಯನ್ನು ಕುರಿತು ಸತ್ಯವನ್ನು ಹೇಳಿದರೂ, ಮಾಯಾ ಪ್ರಭಾವದಿಂದ ಮನುಷ್ಯರು ಅಪಾರ್ಥ ಮಾಡಿಕೊಳ್ಳುವ ಅವಕಾಶವಿದೆ. ಆದ್ದರಿಂದ ಅದು ಸಮಾಜಶ್ರೇಯಸ್ಸಿಗೆ ಹೇಗೆ ಸಂಬಂಧಿಸಿದೆಯೋ ಅರ್ಥ ಆಗಬೇಕೆಂದರೆ, ಮೊದಲು ನಾಗರಚೌತಿಯನ್ನು ಹೇಳಿಕೊಳ್ಳಬೇಕಾಗಿರುತ್ತದೆ. ನಾಗರಚೌತಿಯನ್ನು ಹಿರಿಯರು ಏಕೆ ಮನುಷ್ಯರ ಮಧ್ಯದಲ್ಲಿ ಏರ್ಪಾಡು ಮಾಡಿದ್ದಾರೊ ವಿವರಿಸಿಕೊಂಡು ನೋಡೋಣ. ಈ ವಿವರಗಳನ್ನು ಹೇಳುವ ಮೊದಲು ಮತ್ತೊಂದು ಮಾತನ್ನು ಮೊದಲೆ ಹೇಳಬೇಕಾಗಿದೆ. ಅದೇನೆಂದರೆ! ನಾಗರಚೌತಿ ಪ್ರಜೆಗಳ ಶ್ರೇಯಸ್ಸಿಗೆ ಏರ್ಪಡಿಸಿದರೂ, ಹಿರಿಯರ ಕೆಲಸ ವ್ಯರ್ಥವಾಗಿ ಆ ಶ್ರೇಯಸ್ಸು ಪ್ರಜೆಗಳಿಗೆ ಸಿಗುತ್ತಿಲ್ಲ. ಹಾಗೆಯೇ ವಿನಾಯಕಚೌತಿಯನ್ನು ಸಹ ಹಿರಿಯರು ಯೋಚಿಸಿ ಮಾಡಿ ತೋರಿಸಿದರೂ, ಮನುಷ್ಯರು ಆ ಫಲಿತವೊಂದರ ಶ್ರೇಯಸ್ಸನ್ನು ಹೊಂದದೆ ಇರುವುದಲ್ಲದೆ ಪಕ್ಕದಾರಿ ಹಿಡಿದು ಹೋಗಿದ್ದಾರೆಂದು ಹೇಳುತ್ತಿದ್ದೇವೆ. ಈ ಎರಡು ಚೌತಿಗಳನ್ನು ಹೇಳಿದರೇನೆ ಕೃಷ್ಣಾಷ್ಟಮಿ ಒಂದರ ಬೆಲೆ ತಿಳಿಯುವುದಿಲ್ಲ. ಆದ್ದರಿಂದ ಇಲ್ಲಿ ನಾಗರಚೌತಿಯನ್ನು, ವಿನಾಯಕಚೌತಿ ಯನ್ನು ಕುರಿತು ಹೇಳಬೇಕಾಗಿ ಬಂದಿದೆ.

ಮೊದಲು ನಾಗರಚೌತಿಯನ್ನು ಕುರಿತು ಹೇಳುತ್ತಿದ್ದೇವೆ ನೋಡಿರಿ. ಇದು ಸಮಾಜಶ್ರೇಯಸ್ಸಿಗೆಂದು ಹೇಳಿದ್ದೇವೆ! ಆದ್ದರಿಂದ ಇದನ್ನು ಓದುವವರಿಗೂ ಸಹ ಕೆಲಸಕ್ಕೆ ಬರುವುದೆ. ಆದ್ದರಿಂದ ಶ್ರದ್ಧೆಯಿಂದ ಗಮನಿಸಿರಿ. ನಾಗರ ಎಂದರೆ ಹಾವುಗಳು ಎಂದು ಅರ್ಥ, ಚೌತಿ ಎಂದರೆ ನಾಲ್ಕು ಎಂದು ಅರ್ಥ. ನಾಗರಚೌತಿ ಎಂದರೆ ಹಾವುಗಳಿಂದ ಪೂರ್ತಿ ರಕ್ಷಣೆ ಹೊಂದುವುದೆಂದು ಅರ್ಥ. ಅಪಾಯದಿಂದ ಹೊರಬೀಳುವಂತೆ ನಡೆಯುವುದೆ ಶ್ರೇಯಸ್ಸು ಎಂದು ಹೇಳಬಹುದು. ಹಾವುಗಳ ಕಡಿತದಿಂದ ರಕ್ಷಣೆ ಹೊಂದಿದರೆ ಯಾರಿಗಾದರೂ ಅಪಾಯದಿಂದ ಹೊರಬಿದ್ದಂತೆ ಆಗುತ್ತದೆ! ಹಾಗೆ ಹೊರಬೀಳುವ ವಿಧಾನವಿದೆ. ಆದ್ದರಿಂದ ನಾಗರಚೌತಿ ಸಮಾಜಶ್ರೇಯಸ್ಸನ್ನು ತಿಳಿಸುವುದೆಂದು ಹೇಳುತ್ತಿದ್ದೇವೆ. ಭೂಮಿಮೇಲೆ 80 ಜಾತಿಗಳ ಹಾವುಗಳಿವೆ. ಎಲ್ಲ ಜಾತಿಗಳಿಗು ವಿಷ ಇರುವುದಿಲ್ಲ. 15 ಜಾತಿಗಳಿಗೆ ಮಾತ್ರ ವಿಷ ಇರುತ್ತದೆ. ಅವುಗಳಲ್ಲಿ ನಾಗರಹಾವು ಜಾತಿ ಒಂದು ಇದೆ.

ವಿಷವಿರುವ ಉಳಿದ ಜಾತಿಗಳ ಹಾವುಗಳಿಗಿಂತ ನಾಗರಹಾವು ಜಾತಿಗೆ ಮನುಷ್ಯನನ್ನು ಬೇಗನೆ ಸಾಯಿಸುವ ವಿಷ ಪ್ರಭಾವವಿದೆ. ಆದ್ದರಿಂದ ಪೂರ್ವದಲ್ಲಿ ವೈದ್ಯಪಂಡಿತರು ನಾಗರಹಾವು ವಿಷಕ್ಕೆ ಪರಿಹಾರ ವೈದ್ಯವನ್ನು ಹೇಳಿದರೆ ಎಲ್ಲ ಜಾತಿಗಳ ಹಾವಿನ ವೈದ್ಯ ಹೇಳಿದಂತೆಯೆಂದು ತಿಳಿದ್ದಾರೆ. ಪೂರ್ವದಲ್ಲಿ ಹೆಚ್ಚಾಗಿ ಪ್ರಕೃತಿ ಸಿದ್ಧವಾದ ಮೂಲಿಕಾವೈದ್ಯ ಇರುತ್ತಿತ್ತು. ಹಾವಿನ ವಿಷಯಕ್ಕೆ ಪರಿಹಾರವಾದ ಮೂಲಿಕೆಗಳನ್ನು ಪ್ರತಿ ಊರಿನಲ್ಲಿಯು ಬೆಳೆಸಬೇಕೆಂದು ಅವರು ನಿರ್ಣಯಿಸಿ ಕೊಂಡಿದ್ದಾರೆ. ಆ ಯೋಜನೆಯಲ್ಲಿನ ಭಾಗವಾಗಿಯೇ ಪ್ರತಿ ಊರಿನಲ್ಲಿ ಮೊದಲು ಬೇವಿನ ಗಿಡವನ್ನು, ಅದರಪಕ್ಕದಲ್ಲಿಯೇ ಅರಳಿ ಮರವನ್ನು ನಾಟಿದ್ದಾರೆ. ಅವುಗಳ ಮುಂದೆ ನಾಗರಹಾವಿನ ಪ್ರತಿಮೆಗಳನ್ನು ಇಟ್ಟಿದ್ದಾರೆ. ಪೂರ್ವದಲ್ಲಿ ಪ್ರತಿ ಊರಿನಲ್ಲಿ ಬೇವು, ಅರಳಿ ಗಿಡ ಒಂದುಕಡೆ ಇರುವುದೂ, ಅಲ್ಲಿ ಬಹಳಜನ ವಿಶ್ರಾಂತಿ ತೆಗೆದುಕೊಳ್ಳುವಂತೆ ವಿಶಾಲವಾದ ಕಟ್ಟಡವನ್ನಿಡುವುದು, ಆ ಕಟ್ಟಡದ ಮೇಲೆ ಗಿಡಗಳ ಮುಂಭಾಗದಲ್ಲಿ ನಾಗರ ಪ್ರತಿಮೆಗಳಿಟ್ಟಿರುವುದು ನಡೆಯುತ್ತಿತ್ತು.

ಆ ವಿಧವಾಗಿ ನಿರ್ಮಿಸಲ್ಪಟ್ಟಿರುವುದನ್ನು ನಾಗರಕಟ್ಟೆ ಎನ್ನುತ್ತಿದ್ದರು. ಈವತ್ತಿಗೂ ಕೆಲವು ಊರುಗಳಲ್ಲಿ ಅರಳಿ (ರಾಗಿ), ಬೇವಿನಗಿಡ ಇರುವ ನಾಗರಕಟ್ಟೆಗಳು ಕಾಣಿಸುತ್ತವೆ. ಈ ಮಧ್ಯಕಾಲದಲ್ಲಿ ತಯಾರಾದ ಕೆಲವು ಊರುಗಳಲ್ಲಿ ನಾಗರಕಟ್ಟೆಗಳು ಇಲ್ಲ. ನಾಗರಕಟ್ಟೆಗಳು ಕೆಲವು ಊರುಗಳಲ್ಲಿ ಏಕೆ ಇಲ್ಲವೊ ನಂತರ ತಿಳಿದುಕೊಳ್ಳೋಣ.

ಹಾವು ಕಡಿದು ವಿಷ ಏರಿದರೆ ಅಂದರೆ ತಲೆಗೆ ಏರಿದರೆ ಮೊದಲು ನಾಲಿಗೆಗೆ ರುಚಿ ತಿಳಿಯದಂತೆ ಹೋಗುತ್ತದೆ. ನಾಲಿಗೆ ತಿಳಿದುಕೊಳ್ಳುವ ಆರು ರುಚಿಗಳಲ್ಲಿ ಮೊದಲು ಕಹಿ ತಿಳಿಯದಂತೆ ಹೋಗುತ್ತದೆ. ಅಂತಹ ಪರಿಸ್ಥಿತಿಯನ್ನು ತಿಳಿದುಕೊಳ್ಳುವುದಕ್ಕೆ ಕಹಿ ರುಚಿ ಇರುವ ಬೇವಿನಗಿಡವನ್ನು ನಾಗರಕಟ್ಟೆಯಲ್ಲಿ ಇಟ್ಟಿದ್ದಾರೆ. ವಿಷ ತಲೆಗೇರಿದ ನಂತರ ಅದನ್ನು ಸುಲಭವಾಗಿ ತೆಗೆದುಹಾಕುವುದಕ್ಕೆ ಸಾಧ್ಯವಾಗುತ್ತದೆ. ಆದ್ದರಿಂದ  ಹಾವುಕಡಿದ ವ್ಯಕ್ತಿಗೆ, ವಿಷ ತಲೆಗೇರಿದೆಯಾ ಇಲ್ಲವಾ ಎಂದು ನೋಡುವುದಕ್ಕೆ ಬೇವಿನ ಎಲೆಯನ್ನು ಅಗಿಸುತ್ತಿದ್ದರು. ವಿಷ ಏರಿದ್ದರೆ ಕಹಿ ತಿಳಿಯದಂತೆ ಹೋಗುವುದರಿಂದ ಆಗ ತಲೆಯಿಂದ ವಿಷವನ್ನು ತೆಗೆದುಹಾಕುವುದಕ್ಕೆ ಪ್ರಯತ್ನಿಸಬಹುದು. ಬೇವಿನ ಎಲೆಗಳ ಮೂಲಕ ವಿಷವನ್ನು ತಿಳಿದುಕೊಂಡವರು ಅದನ್ನು ತೆಗೆದು ಹಾಕುವುದಕ್ಕೆ ಅರಳಿ ಎಲೆಗಳನ್ನು ಬಳಸಿಕೊಳ್ಳುತ್ತಾರೆ. ಅರಳಿ ಎಲೆಗಳ ಕಾಂಡಗಳನ್ನು ವಿಷ ಇರುವವನಿಗೆ ಕಿವಿಗಳಲ್ಲಿ ಇಟ್ಟರೆ, ಅರಳಿ ಎಲೆಗಳು ತಮ್ಮ ಕಾಂಡಗಳ ಮೂಲಕ ತಲೆಯಲ್ಲಿನ ವಿಷವನ್ನು ಎಲೆಗಳೊಳಗೆ ಹೀರುಕೊಳ್ಳುತ್ತವೆ. ಆ ವಿಧವಾಗಿ ಎರಡು ಅಥವಾ ಮೂರು ಜೊತೆಗಳ ಎಲೆಗಳಿಂದ ಪೂರ್ತಿ ವಿಷವನ್ನು ತೆಗೆದುಹಾಕಬಹುದು. ನಂತರ ಬೇವಿನ ಎಲೆಯನ್ನು ತಿನಿಸಿದರೆ ಅದು ಕಹಿಯಾಗಿರುವುದರಿಂದ ವಿಷ ಇಳಿದುಹೋಗಿದೆಯೆಂದು ತಿಳಿದುಕೊಳ್ಳಬಹುದು. ವಿಷವನ್ನು ಸೆಳೆದುಕೊಳ್ಳುವ ಅರಳಿಎಲೆ ಹಾವಿನ ಎಡೆಯಂತೆ ಇರುವುದು, ಕೆಳಗೆ ಎಲೆಯಕೊನೆ ಹಾವಿನ ಬಾಲದಂತೆ ಇರುವುದನ್ನು ಗಮನಿಸಬಹುದು. ಇದರಿಂದ ಪ್ರತಿ ಎಲೆ ಒಂದು ಹಾವಿಗೆ ಸಮಾನವೆಂದು, ಹಾವಿನ ವಿಷ ಹಾವು ಸೆಳೆದುಕೊಂಡಂತೆ, ಅರಳಿ

ಎಲೆ ವಿಷವನ್ನು ಹೀರಿಕೊಳ್ಳುತ್ತದೆಂದು ತಿಳಿಯುತ್ತಿದೆ. ಈ ವೈದ್ಯ ವಿಧಾನ ಎಲ್ಲರಿಗೂ ತಿಳಿಯುವಂತೆ, ಪೂರ್ವದಲ್ಲಿ ಪ್ರತಿ ಊರಿನಲ್ಲಿ ಅರಳಿ, ಬೇವಿನ ಗಿಡಗಳನ್ನು ಬೆಳೆಸಿ ಕಟ್ಟೆಕಟ್ಟುತ್ತಿದ್ದರು. ಅದೇ ಗಿಡಗಳಕೆಳಗೆ ನಾಗರಹಾವು ಪ್ರತಿಮೆಗಳನ್ನು ಸಹ ಇಡುವುದಕ್ಕೆ ಕಾರಣವೇನೆಂದರೆ! ಈ ಹಾವುಗಳು ಕಡಿದರೆ ಈಗಿಡದ ಎಲೆಗಳೇ ವೈದ್ಯವೆನ್ನುವಂತೆ ಗಿಡಗಳಕೆಳಗೆ ಮುಂಭಾಗದಲ್ಲಿಯೇ ಹಾವಿನ ಪ್ರತಿಮೆಗಳನ್ನು ಇಟ್ಟಿದ್ದಾರೆ. **"ಪ್ರತಿ ಎಲೆ ಔಷಧವೆಂದು"** ನಾಣ್ನುಡಿ ಇದೆ. ಅರಳಿ, ಬೇವಿನ ಎಲೆ ಯಾವುದರ ಔಷಧವೆಂದು ಪ್ರಶ್ನೆ ಬಂದರೆ ತಕ್ಷಣ ಹಾವುಗಳಿಗೆ ಎಂದು ತಿಳಿಯುವಂತೆ ಆ ಗಿಡಗಳ ಕೆಳಗೆ ಹಾವುಗಳ ಪ್ರತಿಮೆಗಳನ್ನು ಇಟ್ಟಿದ್ದಾರೆ. ಪ್ರತಿ ಊರಿನಲ್ಲಿ ಆ ವಿಧವಾಗಿ ಇದ್ದರೆ, ಎಲ್ಲರಿಗೂ ಆ ವೈದ್ಯ ತಿಳಿದು, ಎಲ್ಲರೂ ಹಾವಿನ ಕಡಿತದಿಂದ ಹೊರಬೀಳುತ್ತಾರೆಂದು ಆದಿನದ ಹಿರಿಯರು ತಿಳಿದಿದ್ದಾರೆ.

ಪ್ರಸ್ತುತ ಕಾಲದಲ್ಲಿ ಆದಿನದ ಹಿರಿಯರ ಉದ್ದೇಶ ತಿಳಿಯದಂತೆ ಹೋಗಿದೆ. ಈಗಲೂ ಕೆಲವು ಊರುಗಳಲ್ಲಿ ನಾಗರಕಟ್ಟೆಗಳು, ಅರಳಿ, ಬೇವಿನಗಿಡ ಗಳು ಸಮೇತವಾಗಿ ಇದ್ದರೂ ಅವು ವೈದ್ಯ ವಿಧಾನವಾಗಿ ಇಟ್ಟಿರುವವೆಂದು ಅರಳಿ, ಬೇವಿನ ಗಿಡಗಳು ಹಾವಿನ ವಿಷಕ್ಕೆ ಒಳ್ಳೆಯ ಔಷಧಿಗಳೆಂದು ಯಾರಿಗೂ ತಿಳಿದಿಲ್ಲ. ವಿಷಕ್ಕೆ ಪ್ರತೀಕವಾಗಿ ಹಾವಿನ ಪ್ರತಿಮೆಗಳನ್ನು, ಔಷಧಿಗೆ ಪ್ರತೀಕವಾಗಿ ಅರಳಿ, ಬೇವಿನಗಿಡಗಳನ್ನಿಟ್ಟರೆ ಆ ಭಾವ ಕಾಲಗರ್ಭದಲ್ಲಿ ಬೆರೆತುಹೋಗಿದೆ. ಹಾವಿನ ಪ್ರತಿಮೆಗಳು ನಾಗದೇವತೆಗಳಾಗಿ, ಬೇವು, ಅರಳಿಗಿಡಗಳನ್ನು ಲಕ್ಷ್ಮೀನಾರಾಯಣರಾಗಿ ಭಾವಿಸಿ ಪ್ರಜೆಗಳು ಪೂಜೆಗಳನ್ನು ಮಾಡುತ್ತಿದ್ದಾರೆ. ಈ ವಿಧವಾಗಿ ವೈದ್ಯ ಭಕ್ತಿಯಾಗಿ ಬದಲಾಗಿದೆ. ಹಾವಿನ ಪ್ರತಿಮೆಗಳಿಗೆ ಅರಳಿ, ಬೇವಿನಗಿಡಗಳು ನೆರಳು ಕೊಡುವುದಕ್ಕೋಸ್ಕರ ಇವೆಯೆಂದುಕೊಂಡ ಪ್ರಜೆಗಳು, ಪ್ರತಿಮೆಗಳನ್ನು ಗಿಡದಕೆಳಗೆ ಇಲ್ಲದಂತೆ ಗುಡಿಗಳಲ್ಲಿ ಪ್ರತಿಷ್ಟಿಸುವುದು ಮೊದಲು ಮಾಡಿದ್ದಾರೆ. ಆದ್ದರಿಂದ ನಾಗಪ್ರತಿಮೆಗಳು ಈಗಿನ ಕಾಲದಲ್ಲಿ ಗುಡಿಗಳಲ್ಲಿ ಕಾಣಿಸುತ್ತಿವೆ. ಗ್ರಾಮಗಳಲ್ಲಿ ಅರಳಿ, ಬೇವಿನಗಿಡ ಜತೆಯಾಗಿರುವುದು ಕಾಣಿಸದಂತೆ

ಹೋಗುತ್ತಿದೆ. ಇವು ಪ್ರಾಣ ತೆಗೆಯುವ ಹಾವುಗಳೆಂದು ಹಾವಿನ ಪ್ರತಿಮೆಗಳನ್ನು, ಇವು ಪ್ರಾಣ ಕೊಡುವ ಗಿಡಗಳೆಂದು ಅರಳಿ, ಬೇವಿನಗಿಡಗಳನ್ನು ಎಲ್ಲರಿಗೂ ತಿಳಿಯುವಂತೆ ಪೂರ್ವದಲ್ಲಿ ಎಷ್ಟೋ ಯೋಜನಾಬದ್ಧವಾಗಿ ವೈದ್ಯಪಂಡಿತರು ಇಟ್ಟಿದ್ದರೆ, ಪ್ರಾಣ ತೆಗೆಯುವ ಹಾವುಗಳು ದೇವತೆಗಳ ಸ್ಥಾನದಲ್ಲಿ ಇವೆ. ಪ್ರಾಣ ಕೊಡುವ ಔಷಧ ಗಿಡಗಳು ಅದೃಶ್ಯಸ್ಥಾನದಲ್ಲಿ ಇವೆ. ಹಾವುಗಳನ್ನು ಕುರಿತು, ಔಷಧ ವೃಕ್ಷಗಳನ್ನು ಕುರಿತು ಚರ್ಚಾವೇದಿಕೆಗಳು ನಾಗರಕಟ್ಟೆಗಳ ಮೇಲೆಯೇ ಇಟ್ಟು ಪ್ರಜೆಗಳಿಗೆ ತಿಳಿಸುವುದಕ್ಕೆ ನಾಗರಚೌತಿ ಎನ್ನುವ ಹೆಸರಿನಿಂದ ಶ್ರಾವಣಮಾಸ ಶುಕ್ಲಪಕ್ಷ ಚೌತಿಯನ್ನು ಪೂರ್ವದಲ್ಲಿ ನಿರ್ಣಯಿಸಿದ್ದಾರೆ. ಮೊದಲು ವೈದ್ಯಪಂಡಿತರು ಇಟ್ಟಿರುವ ಉದ್ದೇಶ ಕಾಲಕಳೆದಂತೆ ಬದಲಾಗಿ, ಕೊನೆಗೆ ನಾಗರಚೌತಿ ಒಂದು ಭಕ್ತಿ ಹಬ್ಬವಾಗಿ ಬದಲಾಗಿಹೋಗಿದೆ. ನಮ್ಮ ಹಿರಿಯರು ನಮ್ಮ ಶ್ರೇಯಸ್ಸನ್ನು ಕೋರಿ ಒಂದು ಅಮೋಘವಾದ ಔಷಧವನ್ನು ಕೊಟ್ಟರೆ ಅದನ್ನು ತೆಗೆದುಕೊಳ್ಳದೆ ಕಾಲಗರ್ಭದಲ್ಲಿ ಅವರ ಉದ್ದೇಶವನ್ನು ಸಮಾಧಿ ಮಾಡಿದ್ದಾರೆ ಹಿರಿಯರು ಕೊಟ್ಟಿರುವ ಫಲಿತವನ್ನು ನಾವು ಹೇಳಿದ ನಂತರ ಈಗಲೂ ಸಹ ಅರ್ಥ ಮಾಡಿಕೊಳ್ಳದೆ ಅಡ್ಡವಾಗಿ ಮಾತನಾಡುವವರಿದ್ದಾರೆ. ಪೂರ್ವದಲ್ಲಿ ಸಮಾಜಶ್ರೇಯಸ್ಸಿಗೆ ನಮ್ಮವರು ತಿಳಿಸಿದ ವಿಧಾನಕ್ಕೆ ನಾವು ಎಷ್ಟೋ ಕೃತಜ್ಞರಾಗಿ ಇರಬೇಕು. ಹಾಗಲ್ಲದೆ ಅವರು ತಿಳಿಸಿದ ವಿಧಾನವನ್ನು ಗಾಳಿಗೆ ಬಿಟ್ಟಿದ್ದೇವೆ. ಯಾವಾಗಲೋ ತಿಳಿಯದಂತೆ ಹೋಗಿರುವ ವಿಧಾನ ಈ ದಿನ ತಿಳಿಸಿದರೂ, ಇದು ನಮ್ಮ ಶ್ರೇಯಸ್ಸಿಗೆ ಸಂಬಂಧಿಸಿರುವುದೆಂದು ಸಹ ತಿಳಿಯುತ್ತಿಲ್ಲ. ಈದಿನ ತಿಳಿಯದಂತೆ ಹೋಗಿರುವುದನ್ನು ತಿಳಿಸಿದವರಾಗಲಿ, ಆದಿನ ಎಷ್ಟೋ ಪರಿಶೋಧನೆ ಮಾಡಿ ತಿಳಿದವರಾಗಲಿ ಯಾವ ಫಲಿತವನ್ನು ಆಶಿಸಿ ತಿಳಿಸಲಿಲ್ಲ ಅಲ್ಲವೆ! ಎಂದು ಸ್ವಲ್ಪವಾದರೂ ಯೋಚಿಸದೆ, ಮೂಢವಾಗಿ ನಾಗದೇವತೆಗಳ ಪೂಜೆಯನ್ನು ಬಿಡಿಸುವುದೆ ಇವರ ಉದ್ದೇಶವೆಂದು, ಇವರು ಹಿಂದೂಗಳಲ್ಲ ವೆಂದು ಹೇಳುವುದು ಸರಿಯಾದ ಪದ್ಧತಿಯೇನಾ ಎಂದು ನೀವೆ ಯೋಚಿಸಿರಿ. ಒಳ್ಳೆಯದು ಯಾವುದೊ ಕೆಟ್ಟದು ಯಾವುದೊ ತಿಳಿಯದಂತೆ, ನಿಸ್ವಾರ್ಥವಾಗಿ ಸಮಾಜ ಶ್ರೇಯಸ್ಸನ್ನು ಕೋರುವವರನ್ನು ತಪ್ಪಾಗಿ ಮಾತನಾಡುವವರೂ ಸಹ

ಈ ದಿನ ಇದ್ದಾರೆ. ಆದ್ದರಿಂದ ಈಗ ಓದುತ್ತಿರುವ ನೀವಾದರೂ ಸತ್ಯವನ್ನು ತಿಳಿದುಕೊಳ್ಳಿ ಎಂದು ಕೋರುತ್ತಿದ್ದೇವೆ.

ಇಲ್ಲಿಯವರೆಗು ನಾಗರಚೌತಿಯನ್ನು ಕುರಿತು ಹೇಳಿದ್ದೇವೆ. ಈಗ ವಿನಾಯಕ ಚೌತಿಯನ್ನು ಕುರಿತು ಹೇಳುತ್ತಿದ್ದೇವೆ. ಈ ವಿಷಯವನ್ನು ಸಹ ಅಪಾರ್ಥ ಮಾಡಿಕೊಳ್ಳುವುದಕ್ಕೆ ಅನೇಕ ಅವಕಾಶಗಳು ಇವೆ. ಆದ್ದರಿಂದ ಓದುತ್ತಿರುವ ಪ್ರತಿ ಅಂಶವನ್ನು ಜಾಗ್ರತೆಯಾಗಿ ಗಮನಿಸಿರೆಂದು ಕೋರುತ್ತಿದ್ದೇವೆ. ಒಬ್ಬ ಮನುಷ್ಯ ಸಕ್ರಮಮಾರ್ಗದಲ್ಲಿ ನಡೆಯಬೇಕೆಂದರೆ ಮನುಷ್ಯನಿಗೆ ಆಧ್ಯಾತ್ಮಿಕ ವಿಕಾಸ, ವ್ಯಕ್ತಿತ್ವ ವಿಕಾಸ, ಸಾಮಾಜಿಕ ವಿಕಾಸ ಅಗತ್ಯವೆಂದು ತಿಳಿದ ಹಿರಿಯರು ಆ ಮೂರು ವಿಧಾನಗಳನ್ನು ಹಬ್ಬಗಳ ರೂಪದಲ್ಲಿ ತಿಳಿಸುತ್ತಾ, ಎಲ್ಲದರಲ್ಲಿ ಆಧ್ಯಾತ್ಮಿಕತೆಗೆ ಅತಿ ಮುಖ್ಯವಾದ ಪ್ರಾಧಾನ್ಯತೆ ಕೊಟ್ಟಿದ್ದಾರೆ. ಈಗ ನಾವು ಹೇಳಿಕೊಂಡ ಮತ್ತು ಹೇಳಿಕೊಳ್ಳುವ ಹಬ್ಬಗಳೆಲ್ಲ ಹಿಂದೂ (ಇಂದೂ) ಮತದಲ್ಲಿಯೇ ಇವೆ. ಪೂರ್ವದಲ್ಲಿ ಹಿಂದೂಸಂಸ್ಕೃತಿ ಬಹಳ ಉನ್ನತವಾಗಿರುತ್ತಿತ್ತು. ಪ್ರಸ್ತುತ ಕಾಲದಲ್ಲಿ ಹಿಂದೂಸಂಸ್ಕೃತಿಯನ್ನೇ ಅನ್ಯ ಸಂಸ್ಕೃತಿಯಾಗಿ, ಅನ್ಯ ಸಂಸ್ಕೃತಿಯನ್ನೇ ಹಿಂದೂ ಸಂಸ್ಕೃತಿಯಾಗಿ ಭಾವಿಸಿಕೊಳ್ಳುವ ಹಿಂದೂಗಳು ತಯಾರಾಗಿದ್ದಾರೆ. ಈನಮ್ಮ ಮಾತನ್ನು ನೀವು ನಂಬದೆಹೋದರೆ, ನಾವು ಹೇಳುವ ಪ್ರತ್ಯಕ್ಷ ಪ್ರಮಾಣವನ್ನು ನೋಡಿದ ನಂತರ ಆದರೂ ನಮ್ಮ ಮಾತು ನಿಜವೆಂದು ನಂಬುತ್ತೀರಾ. ಕ್ರಿಸ್ತಶಕ 2008, 8ನೇ ತಿಂಗಳು, 8ನೇ ತಾರೀಖು, 8 ಗಂಟೆಗಳ, 8 ನಿಮಿಷಗಳಿಗೆ ಒಳ್ಳೆಯ ಮುಹೂರ್ತವಿದೆಯೆಂದು, ಆ ವಿಧವಾಗಿ ವರ್ಷ ಮೊದಲುಗೊಂಡು ತಿಂಗಳು, ದಿನವೂ ಎಲ್ಲ 8 ಸಂಖ್ಯೆಯಾಗಿರುವುದು ವಿಶೇಷವೆಂದು, ಅನೇಕ ದೇಶಗಳಲ್ಲಿ ಇದನ್ನು ಶುಭದಿನವಾಗಿ ಆಚರಿಸುತ್ತೀವೆ ಯೆಂದು, ಪ್ರಪಂಚವ್ಯಾಪ್ತವಾಗಿ ಬಹಳ ವಿವಾಹಗಳು ನಡೆಯುತ್ತಿವೆ, ಚೈನಾದಲ್ಲಿ ಒಲಂಪಿಕ್ಸ್ ಉತ್ಸವಗಳು ಸಹ ಈ ದಿನವೇ ಪ್ರಾರಂಭಿಸುತ್ತಿದ್ದಾರೆಂದು, ಟೀವಿ9 ಅವರು ಚರ್ಚಾವೇದಿಕೆ ಇಟ್ಟು ಅದರಲ್ಲಿ ಜ್ಯೋತಿಷ್ಯ ಶಾಸ್ತ್ರಪಂಡಿತರನ್ನು, ಸಂಖ್ಯಾಶಾಸ್ತ್ರಪಂಡಿತರನ್ನು ಸೇರಿಸಿ ಅವರ ಚರ್ಚೆಯನ್ನು ಆಗಸ್ಟ್ 8ನೇ ತಾರೀಖು

ಬೆಳಿಗ್ಗೆ 8 ಗಂಟೆಗಳಿಗೆ ಪ್ರಸಾರ ಮಾಡಿದ್ದಾರೆ. ಆ ಚರ್ಚೆಯಲ್ಲಿ ಒಂದು ಸಂದರ್ಭದಲ್ಲಿ ಕಲಿಯುಗ 4,32,000 ವರ್ಷಗಳ ಪರಿಮಿತಿಯಿಂದ ಇದೆ. ಆ ಸಂಖ್ಯೆಯಲ್ಲಿ ಈಗ ಕಳೆದಿರುವುದು ಕೇವಲ 2000 ವರ್ಷಗಳು ಮಾತ್ರವೇ, ಇನ್ನೂ ಗಮನಿಸಬೇಕಾಗಿರುವುದು ಎಷ್ಟೋ ಇದೆಯೆಂದು ಖುದ್ದಾಗಿ ಪಂಡಿತರೇ ಹೇಳಿದ್ದಾರೆ. ಆ ವಿಷಯವನ್ನು ಪಕ್ಕದಲ್ಲಿಯೇ ಇರುವ ಮತ್ತೊಬ್ಬ ಜ್ಯೋತಿಷ್ಯ ಪಂಡಿತನು ಯಾವಮಾತ್ರ ಖಂಡಿಸದೆ ಟೀವಿ9 ಅವರು ಸಹ ತಟಸ್ಥವಾಗಿ ಇದ್ದಾರೆ. ಅಲ್ಲಿ ಕುಳಿತುಕೊಂಡ ಇಬ್ಬರು ಜ್ಯೋತಿಷ್ಯಪಂಡಿತರು, ಟೀವಿ9 ಅವರು ಎಲ್ಲರೂ ಹಿಂದೂಗಳೆ! ಆದರೂ ಯಾರೂ ತುಟಿ ಬಿಚ್ಚಲಿಲ್ಲ. ಅಲ್ಲಿ ಕಲಿಯುಗದ ಪರಿಮಾಣ 4,32,000 ಆದಾಗ, ದ್ವಾಪರಯುಗ 8,64,000 ವರ್ಷಗಳು ಕಳೆದುಹೋಗಿ, ಕಲಿಯುಗ ಪ್ರಾರಂಭವಾಗಿ 5108 ವರ್ಷಗಳು ಸಹ ಕಳೆದುಹೋಗಿ, 5109ನೇ ವರ್ಷ ನಡೆಯುತ್ತಿದೆ. ಇಸ್ರಾಯೇಲ್‌ದೇಶದಲ್ಲಿ ಹುಟ್ಟಿದ ಯೇಸುಪ್ರಭು ಮರಣಿಸಿ ಕ್ರಿಸ್ತಶಕ ಪ್ರಾರಂಭವಾಗಿ 2007 ವರ್ಷಗಳು ಕಳೆದು, 2008 ವರ್ಷದಲ್ಲಿ 7 ತಿಂಗಳು ಸಹ ಮುಗಿದು ಹೋಗಿ 8ನೇ ತಿಂಗಳು ನಡೆಯುತ್ತಿದೆ. ಅಂತಹದರಲ್ಲಿ ಹಿಂದೂಗಳ ಧರ್ಮದ ಪ್ರಕಾರ ಯುಗಗಳ ಪರಿಮಾಣ ಇರುವಾಗ, ಅದರಲ್ಲಿ ಕಲಿಯುಗ ಪರಿಮಾಣ 4,32,000 ಅಂದಾಗ ಕಳೆದಿರುವುದೆ 5108 ವರ್ಷಗಳ ನಾಲ್ಕು ತಿಂಗಳು ಆದಾಗ, ಕ್ರೈಸ್ತವ ಮತಸ್ಥರ ಕ್ರಿಸ್ತಶಕವೊಂದರ ವರ್ಷಗಳನ್ನು ಹೇಳಿಕೊಳ್ಳುವುದು ತಪ್ಪು ಅಲ್ಲವೆ! ಬ್ರಾಹ್ಮಣನನ್ನು ಪ್ರಸ್ತಾವಿಸಿ ಆತನ ಹೆಸರು ಡೇವಿಡ್‌ಬ್ರಸ್ ಎಂದು ಹೇಳಿದಂತೆ, ಕಲಿಯುಗ ಆಯುಃಪ್ರಮಾಣವನ್ನು ಪ್ರಸ್ತಾವಿಸಿ, ಕ್ರಿಸ್ತಶಕ ಭುಕ್ತಿಯನ್ನು (ಕಳೆದಿರುವುದನ್ನು) ಹೇಳಿದರೆ ಹಿಂದೂಸಂಸ್ಕೃತಿ ಯನ್ನು ಬಿಟ್ಟು ಕೈಸ್ತವ ಸಂಸ್ಕೃತಿಯನ್ನು ಹೇಳಿದಂತೆ ಅಲ್ಲವೆ! ಅಲ್ಲಿರುವ ಮೂವರಿಗು ಅದರಲ್ಲಿ ಕ್ರೈಸ್ತವ ಸಂಸ್ಕೃತಿ ಕಾಣಿಸಲಿಲ್ಲವಾ! ಅವರು ಮಾತನಾಡಿರುವುದು ಹಿಂದೂಸಂಸ್ಕೃತಿಯೇನಾ?

ಇಂತದ್ದೇ ಮತ್ತೊಂದು ಪ್ರತ್ಯಕ್ಷ ಸತ್ಯವನ್ನು ಹೇಳುತ್ತೇನೆ ನೋಡಿರಿ. ತ್ರೈತಶಕ–30, ಕಲಿಯುಗ 5109ನೇ ವರ್ಷ, ಸರ್ವಧಾರಿ ನಾಮ ಸಂವತ್ಸರ

ನಂ-22, ಚೈತ್ರಮಾಸ ತಿಂಗಳು 1, ವಸಂತಋತು ಎಂದು ಹಿಂದೂ ಸಂಸ್ಕೃತಿ ಪ್ರಕಾರ ಯುಗಾದಿಯಿಂದ ಪ್ರಾರಂಭವಾದ ಕ್ಯಾಲೆಂಡರನ್ನು ನಾವು ತಯಾರು ಮಾಡಿ ಜನವರಿ ತಿಂಗಳಿಂದ ಪ್ರಾರಂಭವಾಗಿರುವ ಕ್ಯಾಲೆಂಡರ್ ಬೇಡ, ಅದು ನಮ್ಮ ದೇಶ ಸಂಸ್ಕೃತಿ ಅಲ್ಲವೆಂದು, ಯುಗಾದಿಯಿಂದ ಪ್ರಾರಂಭವಾದ ನಮ್ಮ ಕ್ಯಾಲೆಂಡರನ್ನು ಉಚಿತವಾಗಿ ಹಂಚಿದರೆ, ಮಹಾನಂದಿಯಲ್ಲಿ ಪರಮತ ಪ್ರಚಾರವೆಂದು ಕ್ಯಾಲೆಂಡರನ್ನು ಟೀವಿಯಲ್ಲಿ ಹತ್ತಿರವಾಗಿ ತೋರಿಸಿ, ಕ್ರಮವಾಗಿ ಮೂರು ದಿನಗಳು ಪ್ರಸಾರ ಮಾಡಿದ ಟೀವಿ9 ಅವರಿಗೆ ನಾವು ನಮ್ಮ ಕ್ಯಾಲೆಂಡರ್ ಕ್ರೈಸ್ತವವಾಗಿ ಕಾಣಿಸಿದರೆ, ತಮ್ಮ ಎದುರುಗಡೆ ಕ್ರೈಸ್ತವಶಕದಲ್ಲಿನ 2000 ವರ್ಷಗಳನ್ನು ಕಲಿಯುಗದಲ್ಲಿ ಕಳೆದ ವರ್ಷಗಳಾಗಿ ಹೇಳುವವರು ಹಿಂದೂಗಳಾಗಿ ಕಾಣಿಸಿದ್ದಾರಾ? ಹಿಂದೂ ಧರ್ಮವನ್ನು ಹೇಳುವವರನ್ನು ಕ್ರೈಸ್ತರಾಗಿ, ಕ್ರೈಸ್ತವನ್ನು ಹೇಳುವವರನ್ನು ಹಿಂದೂಗಳಾಗಿ ಟೀವಿ9 ಅವರು ಪ್ರಚಾರ ಮಾಡಿರುವುದು ನೋಡಿದರೆ ನಿಮಗೇನು ಅನಿಸುತ್ತದೊ ಯೋಚಿಸಿರಿ. ಟೀವಿ9 ಅವರು ಯುಗಾದಿ ಯಿಂದ ಪ್ರಾರಂಭವಾದ ನಮ್ಮ ಕ್ಯಾಲೆಂಡರನ್ನು ಪರಮತ ಪ್ರಚಾರವೆಂದು ಟೀವಿಯಲ್ಲಿ ಕ್ಲೋಸಪ್‌ನಲ್ಲಿ ತೋರಿಸಿದಾಗ, ಅದರಲ್ಲಿನ ವಾಸ್ತವೆಷ್ಟು ಎಂದು ಯೋಚಿಸದೆ ಕೆಲವರು ಹಿಂದೂಗಳು ನಮ್ಮ ಕ್ಯಾಲೆಂಡರನ್ನು ಅನಂತಪುರಂ ಜಿಲ್ಲೆ ಗುಂತಕಲ್ಲುನಲ್ಲಿ ಬೆಂಕಿ ಇಟ್ಟು ಸುಟ್ಟುಹಾಕಿದ್ದಾರೆ. ಮೆರುಗಾದ ಸಮಾಜಕ್ಕೋಸ್ಕರ ಟೀವಿ9 ಎನ್ನುವವರು ಅಸತ್ಯವನ್ನು ಪ್ರಸಾರ ಮಾಡಬಹುದಾ? ಇದೆಲ್ಲವೂ ನೋಡಿದರೆ ಹಿಂದೂಗಳು ಹಿಂದೂತ್ವವನ್ನು ಗುರುತಿಸಲಾರದ ಕುರುಡರಂತೆ ಇದ್ದಾರೊ ಇಲ್ಲವೊ ನೀವೇ ಯೋಚಿಸಿರಿ.

ಇನ್ನೊಂದು ವಿಷಯವನ್ನು ಹೇಳುತ್ತೇನೆ ನೋಡಿರಿ. ಪಂಚಾಂಗ, ನವಗ್ರಹಗಳು, ಜ್ಯೋತಿಷ್ಯ ಪೂರ್ವದಿಂದ ಹಿಂದೂಗಳು ಕಂಡುಹಿಡಿದಿರುವವು, ಹಿಂದೂಗಳು ಲೆಕ್ಕಿಸುವವು, ಹಿಂದೂಗಳು ಕರ್ಮ ಸಿದ್ಧಾಂತವನ್ನು ಅನುಸರಿಸಿ ಗ್ರಹಚಾರವಿರುತ್ತದೆಂದು ಆಧ್ಯಾತ್ಮಿಕದಲ್ಲಿಯೂ ಸಹ ಹೇಳಿಕೊಂಡಿದ್ದೇವೆ. ಅಂಥದ್ದು ಕ್ರಿಸ್ತಶಕ 2008, 8ನೇ ತಿಂಗಳು, ತಾರೀಖು 8 ಪ್ರಕಾರ ಹಿಂದೂಗಳಿಗೆ ಒಳ್ಳೆಯದಿನ

ಹೇಗಾಗಿದೆ. ಆ ಮೂರು 8 ಗಳು ಒಂದು ಸಲ ಬೆರೆತು ಬರುವುದು ಕ್ರೈಸ್ತರಿಗೆ ಒಳ್ಳೆಯದು ಆಗಬಹುದೇನೊ ಆಗಲಿ, ಹಿಂದೂಗಳಿಗೆ ಆ ದಿನವು ಹೇಗೆ ಒಳ್ಳೆಯದಾಗಿದೆ? ಜ್ಯೋತಿಷ್ಯಶಾಸ್ತ್ರದ ಪ್ರಕಾರ ಆ ದಿನಕ್ಕೆ ಯಾವ ಪ್ರತ್ಯೇಕತೆ ಇಲ್ಲ. ಅಂತಹದರಲ್ಲಿ ಆ ದಿನವನ್ನು ಕುರಿತು ಪ್ರತ್ಯೇಕವಾಗಿ ಟೀವಿಯಲ್ಲಿ ಪ್ರಚಾರ ಮಾಡಿ ಮಾತನಾಡಿರುವುದು ಕ್ರೈಸ್ತಶಕ 2008 ನ್ನು ಕುರಿತು ಹೊಗಳಿದಂತೆ ಅಲ್ಲವೆ? ಹಿಂದೂಗಳ ಪಂಚಾಂಗದ ಪ್ರಕಾರ ಇದು 8ನೇ ವರ್ಷ ಅಲ್ಲ, 8ನೇ ತಿಂಗಳು ಅಲ್ಲ, 8ನೇ ದಿನವೂ ಅಲ್ಲ. ಅಂತಹದರಲ್ಲಿ ಕ್ರೈಸ್ತರ ಮೂರು ಎಂಟನ್ನು ಕುರಿತು ಮಾತನಾಡುವವರು ಹಿಂದೂಗಳಾದರೆ, ನಾವು ಭಗವದ್ಗೀತೆ ಪ್ರಕಾರ ಜ್ಞಾನವನ್ನು ಹೇಳುತ್ತಾ, ಯುಗಾದಿಯಿಂದ ಕ್ಯಾಲೆಂಡರನ್ನು ತಯಾರು ಮಾಡಿದವರು, ಪರಮತಸ್ಥರಾ? ನಮ್ಮ ಯುಗಾದಿ ಕ್ಯಾಲೆಂಡರನ್ನು ಹರಿದವರು, ಸುಟ್ಟವರು, ಕ್ರೈಸ್ತವರದೆಂದು ತೋರಿಸಿದ ಟೀವಿ9 ಅವರು, ಅವರ ಮನೆಗಳಲ್ಲಿ ಜನವರಿಯಿಂದ ಪ್ರಾರಂಭವಾದ ಕ್ಯಾಲೆಂಡರನ್ನು ಇಟ್ಟುಕೊಳ್ಳುವುದು ಸಮಂಜಸವಾ? ಜನವರಿ 1ನೇ ತಾರೀಖನ್ನು ಹೊಸ ವರ್ಷವೆಂದು ಸಂತೋಷಪಡುವವರು, ಆ ರಾತ್ರಿಗೆ ಟೀವಿಗಳಲ್ಲಿ ತೋರಿಸುವವರು ಪರಮತವನ್ನು ಅನುಸರಿಸಿದಂತೆ ಅಲ್ಲವೆ? ಹೀಗೆ ಕೇಳುತ್ತಾ, ವಿವರಿಸುತ್ತಾ ಹೋದರೆ ಹಿಂದೂಮತದಲ್ಲಿ ದೈವಜ್ಞಾನ ಕ್ಷೀಣಿಸಿ, ಹಿಂದೂಗಳು ತಮ್ಮ ಸಂಸ್ಕೃತಿಯನ್ನು, ತಮ್ಮ ಜ್ಞಾನವನ್ನು ಗುರುತಿಸಲಾರದ ಸ್ಥಿತಿಯಲ್ಲಿ ಇಲ್ಲವೆಂದು ತಿಳಿಯುತ್ತಿದೆ. ಅಂತಹ ಸ್ಥಿತಿಯಿಂದ ಹಿಂದೂಗಳು ಹೊರಬೀಳುವುದಕ್ಕೆ, ಹಿಂದೂ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಹಬ್ಬಗಳನ್ನು ವಿವರಿಸುತ್ತಾ ಬಂದಿದ್ದೇವೆ. ಹಿಂದೂಗಳಿಗೆ ಆಧ್ಯಾತ್ಮಿಕವೆನ್ನುವ ಕನ್ನಡಿಯಲ್ಲಿ ಹಬ್ಬಗಳ ಅರ್ಥವನ್ನು ತೋರಿಸುತ್ತಾ ಬಂದಿದ್ದೇವೆ. ಸಾಮಾಜಿಕ ಜಾಗೃತಿಯನ್ನು ಉಂಟುಮಾಡುವ ನಾಗರಚೌತಿಯಲ್ಲಿ ಸಹ ಭಕ್ತಿಯನ್ನು ಬೆಳೆಸಿಕೊಳ್ಳಿಯೆಂದು ಹೇಳಿದ್ದೇವೆ. ಅದೇ ದಾರಿಯಲ್ಲಿ ಸಾಮಾಜಿಕ ನ್ಯಾಯವನ್ನು, ನೀತಿಯನ್ನು ತೋರಿಸುವ ವಿನಾಯಕಚೌತಿಯಲ್ಲಿ ಸಹ ಭಕ್ತಿಯನ್ನು ಹೆಚ್ಚಿಸಿಕೊಳ್ಳಿಯೆಂದು ತಿಳಿಸುತ್ತಿದ್ದೇವೆ. ನಾಗರಚೌತಿ ಸಮಾಜಕ್ಕೆ ಆರೋಗ್ಯವನ್ನು ತಿಳಿಸುವ ಸೂತ್ರವನ್ನು ತಿಳಿಸಿದಾಗ, ವಿನಾಯಕಚೌತಿ ಸಮ ಸಮಾಜವನ್ನು

ನೆಲೆಗೊಳಿಸುವ ಅಂಶವನ್ನು ತಿಳಿಸುವುದಾಗಿದೆ. ಸಮಾಜಕ್ಕೆ ಉತ್ತಮ ಸಂದೇಶ ಕೊಡುವ ವಿನಾಯಕ ಚೌತಿಯನ್ನು ಕುರಿತು ತಿಳಿದುಕೊಳ್ಳೋಣ.

ನಾವು ಪ್ರತಿ ವರ್ಷ ಆಗಸ್ಟ್, ಸೆಪ್ಟೆಂಬರ್ ಮಾಸಗಳಲ್ಲಿ ಬರುವ ವಿನಾಯಕನ ಹಬ್ಬವನ್ನು ಎಷ್ಟೋ ಉತ್ಸಾಹದಿಂದ ಮಾಡಿಕೊಳ್ಳುತ್ತೇವೆ. ಈದಿನ ಇಂದೂ (ಹಿಂದೂ) ಪ್ರಜೆಗಳಲ್ಲಿ ಎಷ್ಟೋ ಗಾಢವಾಗಿ ನಿಂತುಹೋದ ಈ ಹಬ್ಬವನ್ನು ಕುರಿತು ಇತರ ಮತಸ್ಥರ ವಿಮರ್ಶೆಗಳು ಸಹ ಎಷ್ಟೋ ಇವೆ. ಅಂತಹ ವಿಮರ್ಶಕರು ನಮ್ಮ ಹತ್ತಿರಕ್ಕೆ ಬಂದು "ನೀವು ಎಷ್ಟೋ ಖಚಿತವಾಗಿ ಸತ್ಯವಾದ ವಿಷಯಗಳು ತಿಳಿಸುತ್ತಿದ್ದೀರಾ! ಅಂತಹದರಲ್ಲಿ ನೀವು ನಮ್ಮ ಪ್ರಶ್ನೆಗಳಿಗೆ ಸಮಾಧಾನ ಕೊಡುತ್ತೀರಾ" ಎಂದು ಕೇಳಿದ್ದಾರೆ. ಅದಕ್ಕೆ ಸಮಾಧಾನವಾಗಿ ನಾವು ಆಧ್ಯಾತ್ಮಿಕದಲ್ಲಿ ಸತ್ಯವಾದ ಜ್ಞಾನವಿಷಯಗಳನ್ನೇ ತಿಳಿಸುತ್ತಾ ಜೀವನವನ್ನು ಸಾಗಿಸಬೇಕೆಂದುಕೊಂಡಿದ್ದೇನೆ. ಆದ್ದರಿಂದ ನಿಮ್ಮ ಪ್ರಶ್ನೆಗಳಿಗೆ ಉತ್ತರಗಳು ನನಗೆ ತಿಳಿದಿದ್ದರೆ ತಿಳಿಸುತ್ತೇನೆ, ಇಲ್ಲದಿದ್ದರೆ ನನಗೆ ತಿಳಿಯದೆಂದು ಹೇಳುತ್ತೇನೆ ಕೇಳಿರಿ ಎಂದು ತಿಳಿಸಿದ್ದೇವೆ. ಆಗ ಅವರು ಕೇಳಿದ ಮಾತುಗಳು ಹೀಗೆ ಇವೆ.

1) ಇಂದೂಮತದಲ್ಲಿ ವಿಘ್ನೇಶ್ವರ ಹಬ್ಬವೆಂದು ಹೇಳುತ್ತಿದ್ದಾರೆ! ವಿಘ್ನೇಶ್ವರನು ಎಂದರೆ ವಿಘ್ನಗಳಿಗೆ ಅಧಿಪತಿ ಎಂದಲ್ಲವೆ ಅರ್ಥ. ವಿಘ್ನಗಳೆಂದರೆ ಅಡ್ಡಿ, ಆತಂಕಗಳು ಎಂದಲ್ಲವೆ ಅರ್ಥ, ಅಂತಹ ಆತಂಕಗಳಿಗೆ ಅಧಿಪತಿಯಾಗಿ, ಆತಂಕಗಳು ಉಂಟುಮಾಡುವವನನ್ನು ಶತ್ರುವಾಗಿ ಭಾವಿಸಿ ದೂಷಿಸಬೇಕು, ಆದರೆ ಪೂಜಿಸುವುದು ಏಕೆ? ಕೆಟ್ಟದು ಮಾಡುವವನು ಬಲಶಾಲಿಯಾದರೆ ಅವನನ್ನು ಯಾರೂ ವಿರೋಧಿಸದೆ ಹೊಗಳಿದಂತೆ, ನೀವು ಮಾಡುವ ಭಕ್ತಿ ಸಹ ವಿಘ್ನೇಶ್ವರನು ವಿಘ್ನಗಳನ್ನು ಉಂಟುಮಾಡುತ್ತಾನೆಂದು ಭಯಪಟ್ಟು, ಭಯದಿಂದ ಪೂಜೆ ಮಾಡುತ್ತಿದ್ದಂತೆ ಇದೆ. ಆದರೆ ಭಕ್ತಿಯಿಂದ ಅಲ್ಲವೆಂದು ತಿಳಿಯುತ್ತಿದೆ ಇದಕ್ಕೆ ನೀವೇನು ಹೇಳುತ್ತೀರಾ?

2) ಎಷ್ಟೋ ಭಕ್ತಿಯಿಂದ, ಮತ್ತು ಎಷ್ಟೋ ಖರ್ಚಿನಿಂದ ಎಷ್ಟೋ ಅಂದವಾಗಿ ತಯಾರು ಮಾಡಿಕೊಂಡ ವಿಘ್ನೇಶ್ವರನ ಪ್ರತಿಮೆಗಳನ್ನು ಅತಿಹೆಚ್ಚು

ಭಕ್ತಿಯಿಂದ ಪೂಜಿಸಿಕೊಂಡು, ಹಿಂದಿನ ದಿನ ತೋರಿಸಿದ ಭಕ್ತಿಯೆಲ್ಲವನ್ನು ನೀರಿನಲ್ಲಿ ಬೆರೆಸಿ, ವಿಘ್ನೇಶ್ವರನನ್ನು ನೀರಿನೊಳಗೆ ಹಾಕುವುದು ಒಳ್ಳೆಯದಾ? ಇನ್ನು ಸಾಕು ನಿನ್ನ ಸಹವಾಸ ಎನ್ನುವಂತೆ ವಿನಾಯಕನನ್ನು ನೀರಿನೊಳಗೆ ಹಾಕಿ ಕೈಗಳು ಕೊಡವಿಕೊಳ್ಳುವುದು ಭಕ್ತಿ ಎನ್ನುತ್ತೀರಾ?

3) ಹತ್ತುರೂಪಾಯಿಗಳು ಇಟ್ಟು ದೈವಜ್ಞಾನ ತಿಳಿಸುವ ಗ್ರಂಥವನ್ನು ಕೊಂಡುಕೊಳ್ಳಲು ಬಾಧೆಪಡುವವರನ್ನು ನೀವು ಎಷ್ಟೋ ಜನರನ್ನು ನೋಡಿರುತ್ತೀರಾ. ಅಂತಹವರು ಸಹಿತ ಸಾವಿರಾರೂ ರೂ॥ ಖರ್ಚುಮಾಡಿ ವಿನಾಯಕ ಪ್ರತಿಮೆಗಳು ಮಾಡಿ ಅವುಗಳನ್ನು ಮುರಿದುಹಾಕಿ ಅವರ ಹಣವನ್ನು ವ್ಯರ್ಥ ಮಾಡಿಕೊಳ್ಳುತ್ತಿದ್ದಾರೆ. ಕೆಲವರು ಬಲವಂತವಾಗಿ ಪ್ರತಿಮೆಗಳ ಖರ್ಚಿ ಗೆಂದು ಇತರರಿಂದ ಹಣವನ್ನು ವಸೂಲಿ ಮಾಡುತ್ತಿದ್ದಾರೆ. ಹೀಗೆ ಬಲವಂತವಾಗಿ ವಸೂಲು ಮಾಡುವುದು ಬಲವಂತದ ಭಕ್ತಿ ಅಲ್ಲವೆ?

4) ಒಂದೇ ವಿಧವಾಗಿ, ಒಂದೇ ಪದ್ಧತಿಯಾಗಿ, ಒಂದೇ ವಿಧವಾದ ಅವಯವಗಳು ಹೊಂದಿ ಹುಟ್ಟಿರುವ ನಾವು, ಒಂದೇ ದೇವರ ಮಕ್ಕಳೆಂದು ಮರೆತು, ಮತದ್ವೇಷಗಳನ್ನು ಬೆಳೆಸಿಕೊಳ್ಳುವ ಅಧ್ಯಾಯದಲ್ಲಿ ವಿನಾಯಕ ಹಬ್ಬವನ್ನು ಉಪಯೋಗಿಸಿಕೊಳ್ಳುತ್ತಿದ್ದೇವೆ. ಜ್ಞಾನವನ್ನು ಹೊಂದಿದ ಯೋಗಿಗಳಾಗಿ ನೀವು ಏನು ಹೇಳುತ್ತೀರಾ?

ಈ ವಿಧವಾಗಿ ಕೇಳಿದವರಿಗೆ ವಿನಾಯಕ ಚೌತಿ ಹಬ್ಬದ ರಹಸ್ಯವನ್ನು ನಾವು ಹೇಳಬೇಕಾಗಿ ಬಂದಿದೆ. ಅವರ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳು ಕೊಡದೆಹೋದರೆ, ಅವರ ಹೃದಯದಲ್ಲಿ ವಿನಾಯಕ ಹಬ್ಬದ ಮೇಲೆ ಇರುವ ಭಾವನೆ ಬದಲಾಯಿಸಲಾರೆವು. ನಮಗೆ ಉತ್ತಮವಾದುದು ಆದರೂ ಕೇಳುವವರಿಗೆ ಚಿಕ್ಕದ್ದಾಗಿಯೇ ಕಾಣಿಸುತ್ತದೆ. ಆದ್ದರಿಂದ ನಿಜಾರ್ಥವನ್ನು ಹೇಳದೆ ತಪ್ಪುವುದಿಲ್ಲ. ಆದ್ದರಿಂದ ಹೀಗೆ ಹೇಳಿದ್ದೇನೆ. ಪ್ರಪಂಚ ಹುಟ್ಟುವ ಸಮಯದಲ್ಲಿ ಮತಗಳು ಎನ್ನುವವು ಇಲ್ಲ. ದೇವತೆಗಳೆನ್ನುವವರು ಇಲ್ಲ, ದೇವರೊಬ್ಬನೆ ಎನ್ನುವ ವಿಷಯ

ಎಲ್ಲರಿಗೂ ಗೊತ್ತು. ಸ್ವಲ್ಪ ಕಾಲಕ್ಕೆ ಅಂತಹ ಅವಗಾಹನೆ ಮನುಷ್ಯರಲ್ಲಿ ಕ್ಷೀಣಿಸಿರುವುದು ಮೊದಲಾಗಿದೆ. ಆ ಸಮಯದಲ್ಲಿ ತತ್ತ್ವಜ್ಞರಾದ ಮಹಾತ್ಮರು ಕೆಲವರು ಯೋಚಿಸಿ, ಅಜ್ಞಾನ ಬೀಜವನ್ನು ತೆಗೆದುಹಾಕುವುದಕ್ಕೆ, ದೈವತ್ವವನ್ನು ಕುರಿತು ಪ್ರಚಾರ ಮಾಡಲು ಪ್ರಾರಂಭಿಸಿದ್ದಾರೆ. ದೇವರಿಗೆ ರೂಪವಿಲ್ಲ, ಆದ್ದರಿಂದ ಮೂಗು ಮುಖವಿಲ್ಲದ ಕಲ್ಲನ್ನು (ಲಿಂಗವನ್ನು) ಗುರುತಾಗಿ ಇಟ್ಟು, ದೇವರು ಹೀಗಿರುತ್ತಾನೆಂದು ರೂಪವಿಲ್ಲದವನಾಗಿ ಬೋಧಿಸಿದ್ದಾರೆ. ಆತನಿಗೆ (ದೇವರಿಗೆ) ಹೆಸರಿಲ್ಲ, ಆದ್ದರಿಂದ ಈಶ್ವರನೆಂದು ಕರೆದಿದ್ದಾರೆ. ಈಶ್ವರನೆಂದರೆ ಅಧಿಪತಿಯೆಂದು ಅರ್ಥವೇ ಹೊರತು ಹೆಸರಲ್ಲ. ಹೀಗೆ ಸರ್ವಕ್ಕೂ ಅಧಿಪತಿಯಾದವನು ಒಬ್ಬನಿದ್ದಾನೆಂದು ರೂಪವಿಲ್ಲದ ಗುಂಡನ್ನು ತೋರಿಸಿ, ತಿಳಿಯದಂತೆ ಹೋಗಿರುವ ದೈವತ್ವವನ್ನು ಕುರಿತು ಆದಿನದ ಹಿರಿಯರು ತಿಳಿಸಿದ್ದಾರೆ.

ಹೀಗೆ ಜ್ಞಾನದ ಪ್ರಕಾರ ಅಲ್ಲದೆ, ಸಂಘದ ಪ್ರಕಾರ ಸಹ ಎರಡು ವಿಧಗಳ ಮಾನವನನ್ನು ನಡೆಸುವುದಕ್ಕೆ ಆದಿನದ ಹಿರಿಯರು ಕೃಷಿಮಾಡಿದ್ದಾರೆ. ಈದಿನ ನಾವು **'ಸಾಮೆತ'** ಎನ್ನುವ ಪದವನ್ನು ಆದಿನ **'ಸಮತ'** ಎನ್ನುತ್ತಿದ್ದರು. ದೊಡ್ಡವರಮಾತು ಬದಲಾಗದೆಂದು, ನಿಜವೆಂದು, ಕೆಡದ ವಾಕ್ಯವೆಂದು ಹೇಳುವುದಕ್ಕೆ ಸಮಾನವಾಗಿ **"ಹಿರಿಯರ ಮಾತು ಮೊಸರನ್ನದ ಮೂಟೆ"** ಎನ್ನುವುದು ಇಂದಿಗೂ ಇದೆ. ಹಿರಿಯರ ಮಾತಿಗೆ ಸಮತವಾಗಿ ಮೊಸರನ್ನದ ಮೂಟೆಯನ್ನು ಬಳಸಿದ್ದಾರೆ. ಸಮತ ಎಂದರೆ ಸಮಾನವೆಂದು ಅರ್ಥ. ಹಾಗೆ **"ಚಿಂತೆ ಇಲ್ಲದಮ್ಮನಿಗೆ ಸಂತೆಯಲ್ಲಿ ನಿದ್ರೆಬಂದಿದೆ"** ಎನ್ನುವುದು ಸಹ ಇದೆ. ಚಿಂತೆ ಇಲ್ಲದಮ್ಮನಿಗೆ ಸಂತೆಯಲ್ಲಿ ನಿದ್ರೆಗೆ ಸಮಾನವಾಗಿ (ಸಮತವಾಗಿ) ಹೋಲಿಸಿ ಹೇಳುವ ಮಾತು. ಇಂತಹ ಸಮತ ಎನ್ನುವ ಪದ ಸ್ವಲ್ಪಕಾಲಕ್ಕೆ ಉಚ್ಚರಿಸುವುದರಲ್ಲಿ **'ಸಾಮತ'**ವಾಗಿ ಬದಲಾಗಿದೆ. ಹಾಗೆ ಮತ್ತೆ ಸ್ವಲ್ಪಕಾಲಕ್ಕೆ ಸಾಮತ ಹೋಗಿ **'ಸಾಮೆತ' (ಗಾದೆಮಾತು)** ಆಗಿ ಬದಲಾಗಿ ಈದಿನ ನಮ್ಮ ಮುಂದೆ ಇದೆ. ಇಂತಹ ಮುಖ್ಯವಾದ ಸಾಮೆತಗಳನ್ನು ಎಷ್ಟನ್ನೋ ಪೂರ್ವದಲ್ಲಿ ಮಾನವನ ಸಂಘದಲ್ಲಿ ಸಕ್ರಮವಾಗಿ ನಡೆಸುವುದಕ್ಕೆ ಹಿರಿಯರಿಟ್ಟಿದ್ದಾರೆ. ಆ ವಿಧಾನದ ಪ್ರಕಾರವೇ ಸಮಾಜದಲ್ಲಿನ ಒಂದು ಕೆಟ್ಟದ್ದನ್ನು ತೆಗೆದುಹಾಕುವುದಕ್ಕೆ ಸಮಾನ

ಹೋಲಿಕೆಯಿಂದ, ಸಂಘದಲ್ಲಿ ಬಲಹೀನನನ್ನು ಇಲಿಗೆ ಹೋಲಿಸಿ, ಬಲವಂತನನ್ನು ಆನೆಯಾಗಿ ಹೋಲಿಸಿ ಹೇಳುತ್ತಿದ್ದರು. ಬಲವಂತನು ಬಲಹೀನನ ಮೇಲೆ ಅಧಿಕಾರ ಚಲಾಯಿಸಿ ಪೀಡಿಸುವುದನ್ನು **"ಇಲಿ ಮೇಲೆ ಆನೆ ಸವಾರಿ ಮಾಡಿದಂತೆ"** ಎಂದು ಗಾದೆ ಮಾತನ್ನು ಹೇಳುತ್ತಿದ್ದರು. ಇದು ಸಂಘವಿದ್ರೋಹ ಕಾರ್ಯ ಆದ್ದರಿಂದ ಇದು ಒಳ್ಳೆಯದಲ್ಲವೆಂದು ಎಲ್ಲರಿಗು ತಿಳಿಯುವಂತೆ, ಬಾಯಿಂದ ಹೇಳುವುದಲ್ಲದೆ ದೃಶ್ಯರೂಪವಾಗಿ ಕಣ್ಣಿಗೆ ಕಾಣಿಸುವ ಕಾರ್ಯಕ್ರಮವಾಗಿ ತೋರಿಸುತ್ತಿದ್ದರು. ಒಂದು ಚಿಕ್ಕ ಇಲಿಯನ್ನು ಇಟ್ಟು, ಅದರಮೇಲೆ ದೊಡ್ಡ ಆನೆಯನ್ನು ಆಸೀನವಾಗುವಂತೆ ಮಾಡಿ, ಅದು ಎಲ್ಲರಿಗೂ ತಿಳಿಯುವಂತೆ ಊರೆಲ್ಲಾ ಮೆರವಣಿಗೆ ಮಾಡಿ, ಕೊನೆಗೆ ಈ ಪದ್ಧತಿ ಒಳ್ಳೆಯದಲ್ಲ ಎನ್ನುವಂತೆ ಆ ದೃಶ್ಯವನ್ನು ನಾಶ ಮಾಡುತ್ತಿದ್ದರು. ಅವರು ಆ ದಿನ ಮಣ್ಣಿನಿಂದ ಮಾಡಿದ ಗೊಂಬೆಗಳನ್ನು ಬೆಂಕಿಯಲ್ಲಿ ಹಾಕಿ ಸುಟ್ಟರೆ ಇನ್ನು ಗಟ್ಟಿಯಾಗಿ ಚೆಕ್ಕು ಚೆದರದಂತೆ ಇರುತ್ತವೆಂದೂ, ನೀರಿನಲ್ಲಿ ಆದರೆ ಪೂರ್ತಿಯಾಗಿ ಕರಗಿಹೋಗುತ್ತವೆಂದು ನೀರಿನಲ್ಲಿ ಮುಳಗಿಸುತ್ತಿದ್ದರು. ನೀರಿನೊಳಗೆ ಹಾಕಿದ ನಂತರ ಆ ದೃಶ್ಯ ಬೇಗನೆ ನಾಶವಾಗುವುದಕ್ಕೆ ನೀರಿನಲ್ಲಿ ಹಾಕದ ಮೊದಲೆ ಆ ಗೊಂಬೆಗೆ ಕಾಲುಗಳು, ಕೈಗಳು ಮುರಿದುಹಾಕಿ ಪೂರ್ತಿ ನೀರಿನಲ್ಲಿ ಬೆರೆತುಹೋಗುವಂತೆ ಮಾಡುತ್ತಿದ್ದರು. ಇದು ಆದಿನದ ಸಂಘ ಸಂಸ್ಕರಣ ನಿಮಿತ್ತವಾದ ಆಚರಣೆ. ಈ ಕಾರ್ಯ ಪ್ರತಿ ವರ್ಷ ಒಂದು ಆಚರಣೆಯಾಗಿ ಮಾಡುವುದು ಇವತ್ತಿಗೂ ಉಳಿದಿದೆ. ಆದರೆ ಅರ್ಥ ಮಾತ್ರ ತಿಳಿಯದಂತೆ ಹೋಗಿದೆ. ಒಬ್ಬರು ಮಾಡುತ್ತಾ ಇದ್ದರೆ ಇನ್ನೊಬ್ಬರು ಆ ಆಚರಣೆಯನ್ನು ಮಾಡುವುದೆ ಈದಿನ ತಿಳಿದ ವಿಧಾನ, ಅಷ್ಟೇ ಹೊರತು ಅರ್ಥವನ್ನು ಕುರಿತು ಯಾರೂ ಆಲೋಚಿಸುತ್ತಿಲ್ಲ. ಒಂದು ಮತಸ್ಥರು ಮಾಡುತ್ತಿರುವ ಆಚರಣೆ ಪೂರ್ವದಲ್ಲಿ ದೊಡ್ಡ ಭಾವನೆಯಿಂದ ಇಟ್ಟಿರುವುದೆಂದು ಆ ಮತಸ್ಥರಿಗೆ ತಿಳಿಯದಿರುವಾಗ, ಇತರ ಮತಸ್ಥರು ಅಪಾರ್ಥ ಮಾಡಿಕೊಳ್ಳುವು ದರಲ್ಲಿ ತಪ್ಪಿಲ್ಲ. ಆದರೆ ನಿಜವಾದ ಅರ್ಥವನ್ನೂ, ಆಚರಣೆಯನ್ನೂ ತೆಗೆದು ಕೊಂಡಾಗ ಅದರಲ್ಲಿ ವಿಮರ್ಶಿಸುವುದು ಏನುಯಿಲ್ಲ. ಯಾರೂ ವಿಮರ್ಶಿ ಸಲಾರರು, ಅಸಲಾದ ಅರ್ಥ ತಿಳಿದಾಗ ಎಲ್ಲ ಮತಸ್ಥರ ಬೆಂಬಲ ಲಭಿಸುತ್ತದೆ.

ನಾವು ಮೊದಲೆ ಹೇಳಿದ್ದೇವೆ! ಪೂರ್ವದಲ್ಲಿ ಮತವೆಂಬ ಹೆಸರು ಇಲ್ಲದ ಪ್ರಜೆಗಳಿಗೆ ದೇವರೊಬ್ಬನೆಂಬ ಭಾವವಿತ್ತೆಂದು, ದೇವರಿಗೆ ರೂಪ, ಹೆಸರು ಇಲ್ಲವೆಂಬ ಗುರುತಿಗಾಗಿ ಕಲ್ಲಿನಲಿಂಗವನ್ನು ಇಟ್ಟಿದ್ದಾರೆಂದು, ಆದರೂ ಕಾಲಕ್ರಮವಾಗಿ ಧರ್ಮಗಳು ಅಧರ್ಮಗಳಾಗಿ ಬದಲಾಗುತ್ತವೆಂದು ಗೀತಾ ವಾಕ್ಯಾನುಸಾರ, ಸ್ವಲ್ಪ ಕಾಲಕ್ಕೆ ಮಾನವರಲ್ಲಿ ಅಜ್ಞಾನವಶದಿಂದ ಏಕತ್ವ ಹೋಗಿ, ನಾವು ನೀವು  ಎನ್ನುವ ಗುಂಪುಗಳಾಗಿ ಸೀಳಿಹೋದವರಿಗೂ ಸಹ ಹೆಸರುಗಳಿದ್ದವು. ಹಾಗೆ ಸ್ವಲ್ಪ ಕಾಲಕ್ಕೆ ಏರ್ಪಟ್ಟ ಗುಂಪುಗಳೆ ವೈಷ್ಣವರು, ಶೈವರು. ಪೂರ್ವದಲ್ಲಿ ವೈಷ್ಣವರು, ಶೈವರು ಸಾಂಪ್ರದಾಯಗಳನ್ನು ಏರ್ಪಡಿಸಿಕೊಂಡು, ಇವು ನಮ್ಮ ಸಾಂಪ್ರದಾಯಗಳು ಎನ್ನುತ್ತಾ, ಅವುಗಳ ಭದ್ರತೆಗೋಸ್ಕರ ಕೆಲವು ಪುರಾಣಗಳನ್ನು ಬರೆದು, ಅವು ಪ್ರಜೆಗಳಿಗೆಲ್ಲ ತಿಳಿಯುವಂತೆ ಮಾಡಿ, ಅವರ ಸಾಂಪ್ರದಾಯಗಳನ್ನು ಭದ್ರ ಮಾಡಿಕೊಂಡಿದ್ದಾರೆ. ಅಂತಹ ಪುರಾಣಗಳಲ್ಲಿ ಶೈವರ ಸಂಬಂಧವಾದ "ಶಿವಪುರಾಣ" ಹುಟ್ಟಿದೆ.

**ಹೀಗೆ ಶೈವವೇರ್ಪಟ್ಟ ಎರಡು ಸಾವಿರ ವರ್ಷಗಳಿಗೂ ಮೊದಲೆ ಸಮಾಜದಲ್ಲಿ ಕೆಟ್ಟದ್ದನ್ನು ಆನೆಯಾಗಿ, ಇಲಿಯಾಗಿ ತೋರಿಸಿ ನೀರಿನಲ್ಲಿ ಮುಳುಗಿಸುವ ಆಚರಣೆ ಇದೆ.** ಆ ಆಚರಣೆ ಮಾಡುತ್ತಾ ಮಾಡುತ್ತಾ ಹಿರಿಯರು ಮರಣಿಸುತ್ತಾ ಬಂದು, ಚಿಕ್ಕವರು ಅವರನ್ನನುಸರಿಸುತ್ತಾ ಮಾಡುತ್ತಾ, ಕೊನೆಗೆ ಏಕೆ ಈ ಕಾರ್ಯಕ್ರಮವನ್ನು ಮಾಡುತ್ತಿದ್ದೇವೆನ್ನುವುದು ಯಾರಿಗೂ ತಿಳಿಯದಂತೆ ಹೋಗಿದೆ. ಅರ್ಥ ಇದು ಎಂದು ತಿಳಿಯದೆ ಎಷ್ಟೋಜನ ಬೆರೆತು ಆನಂದವಾಗಿ ಇಲಿಯನ್ನು ಆನೆಯನ್ನೂ ಮೆರವಣಿಗೆ ಮಾಡುತ್ತಿದ್ದೇವೆ. ಇದೇನೊ ದೊಡ್ಡ ಭಕ್ತಿ ಕಾರ್ಯಕ್ರಮ ಅಂದುಕೊಂಡು ಆ ಆನೆಯಾಕಾರಕ್ಕೆ ಮುಗಿಯುವುದು ಪ್ರಾರಂಭಮಾಡಿದ್ದಾರೆ. ಹಾಗೆ ಶೈವಉದ್ಭವಿಸಿದ್ದ ದಿನಗಳಲ್ಲಿಯೇ ಇಲಿ ಆನೆ ಗೊಂಬೆಗಳನ್ನು ಮುಗಿದವರು ಇದ್ದಾರೆ. ಆದಕಾರಣ ಶೈವರು ಶಿವಪುರಾಣದಲ್ಲಿ ಇಲಿಗು ಆನೆಗು ವಿಶಿಷ್ಟತೆ ಕಲ್ಪಿಸಿ, ಆನೆ ತಲೆಹೊಂದಿದವನು ವಿನಾಯಕನೆಂದು, ಪಾರ್ವತಿ ಕುಮಾರನೆಂದು ಇರುವ ಭಕ್ತಿಯನ್ನು ಇನ್ನಷ್ಟು ಹೆಚ್ಚಾಗುವಂತೆ

ಒಳ್ಳೆಯ ಕೆಲಸವೆ ಮಾಡಿದ್ದಾರೆ. ಆಗಿನಿಂದ ಆನೆ ಗೊಂಬೆಹೋಗಿ ಆನೆ ತಲೆಮಾತ್ರ ಇರುವ ವಿನಾಯಕನ ಗೊಂಬೆ ಬಂದಿದೆ. ಇರುವ ಭಕ್ತಿಯನ್ನು ಹೆಚ್ಚು ಮಾಡುವುದರಿಂದ ವಿನಾಯಕನ ಗೊಂಬೆಗಳು ಮಾಡುವವರು ಹೆಚ್ಚಾಗಿದ್ದಾರೆ. ಹಣ ಖರ್ಚಿಟ್ಟು ಪೂಜಿಸುವವರು ಹೆಚ್ಚಾಗಿದ್ದಾರೆ, ಆದರೆ ನೀರಿನಲ್ಲಿ ಹಾಕಿ ತುಳಿಯುವ ಪೂರ್ವದ ಆಚರಣೆಯನ್ನು ಬಿಡಿಸಲಾರದೆ ಹೋಗಿದ್ದಾರೆ. ಈ ವಿಧಾನವನ್ನು ಬಿಡಿಸಲಾರದ ಹಿರಿಯರು ವಿನಾಯಕ ನಿಮಜ್ಜನವನ್ನು ನೀರಿನಲ್ಲಿಯೇ ಮಾಡುತ್ತಿದ್ದೇವೆ ಎಂದಿದ್ದಾರೆ. ನಿಮಜ್ಜನವೆಂದರೆ ಸ್ನಾನವೆಂದು ಅರ್ಥ ಆದರೆ ಮುರಿದುಹಾಕುವುದು, ಪೂಜಿಸಿದ ದೇವರನ್ನು ಕಾಲಲ್ಲಿ ತಳ್ಳುವುದು ಅಲ್ಲವೆಂದು ತಿಳಿಯಬೇಕು, ನೀವು ಕೇಳಿದ ಮೊದಲ ಪ್ರಶ್ನೆಯಲ್ಲಿ ವಿಘ್ನವನ್ನು ಉಂಟುಮಾಡುವ ವಿಘ್ನೇಶ್ವೇರನನ್ನು ದೂಷಿಸಬೇಕು. ಆದರೆ ಪೂಜಿಸಬಾರದು ಎಂದಿದ್ದೀರ! ಅಸಲಿಗೆ ವಿಘ್ನೇಶ್ವರನನ್ನು ದೂಷಿಸುವುದಕ್ಕೆ ಆತನು ನಮಗೇನು ವಿಘ್ನವಾಗಲಿ, ಯಾವ ಕೆಟ್ಟದಾಗಲಿ ಮಾಡಲಿಲ್ಲ ಅಲ್ಲವೆ! ಆದ್ದರಿಂದ ಆತನನ್ನು ದೂಷಿಸಬೇಕಾಗಿರುವುದು ಇಲ್ಲ. ಭಕ್ತಿಯಿಂದ ವಿಘ್ನೇಶ್ವರನನ್ನು ಪೂಜಿಸುವುದರಲ್ಲಿ ತಪ್ಪಿಲ್ಲ. ಆದರೆ ಪೂಜಿಸಿದವನನ್ನು ಪೂಜಿಸಿದಂತೆ ಇಟ್ಟುಕೊಂಡಿದ್ದರೆ ಚೆನ್ನಾಗಿರುತ್ತಿತ್ತು. ನೀರಿನಲ್ಲಿ ಹಾಕುವುದು ಒಳ್ಳೆಯದಲ್ಲ. ಒಂದುಮಾತಿಗೆ ಬಂದರೆ ಅದನ್ನು ದೂಷಿಸುವುದಕ್ಕು, ಪೂಜಿಸುವುದಕ್ಕು ಅಲ್ಲದೆ ಸಂಘದಲ್ಲಿರುವ ಅನ್ಯಾಯವನ್ನು ಬಹಿರ್ಗತ ಮಾಡುವುದಕ್ಕೆ ಊರೇಗಿಸುವ ಮೆರವಣಿಗೆ ಎಂದು, ಹಾಗೆ ಅದನ್ನು ಇಲ್ಲದಂತೆ ಮಾಡಬೇಕೆನ್ನುವ ಉದ್ದೇಶವೇ ಆ ಗೊಂಬೆಯನ್ನು ನೀರಿನಲ್ಲಿ ಮುಳುಗಿಸಿ ನಾಶ ಮಾಡುವುದೆಂದು ಎಲ್ಲರೂ ತಿಳಿಯಬೇಕು.

ನೀವು ಕೇಳಿದ ಮತ್ತೊಂದು ಪ್ರಶ್ನೆ ಪ್ರಕಾರ ಬಲವಂತವಾಗಿ ಹಣ ವಸೂಲು ಮಾಡಿ ಉತ್ಸವ ಮಾಡುವುದು ಪದ್ಧತಿಯಲ್ಲ. ಭಕ್ತಿಯಲ್ಲಿ ಕೂಡ ಅದು ಬಲವಂತದ ಭಕ್ತಿ ಆಗುತ್ತದೆ, ಆದರೆ ಮನಸ್ಫೂರ್ತಿ ಭಕ್ತಿಯಲ್ಲ. ಇಷ್ಟ ಇಲ್ಲದಿದ್ದರೂ ಕೊಟ್ಟವರು ಕೇಳಿದವರನ್ನೆ ಅಲ್ಲದೆ ವಿಘ್ನೇಶ್ವರನನ್ನು ಸಹ ನಿಂದಿಸುವುದಕ್ಕೆ ಅವಕಾಶ ಇದೆ. ಆದ್ದರಿಂದ ಇನ್ನೊಬ್ಬರ ಹತ್ತಿರ ಹಣ ವಸೂಲು ಮಾಡುವುದು ಒಳ್ಳೆಯದಲ್ಲ.

ಪೂರ್ವಕಾಲದಲ್ಲಿ ಸಮತ ಎನ್ನುವ ಪದ ಸಾಮತವಾಗಿ ಬದಲಾಗಿ ಕೊನೆಗೆ ಸಾಮೆತವಾಗಿ ಬದಲಾದಂತೆ, ಆ ದಿನ ದೊಡ್ಡವರಿಟ್ಟಿರುವ ಸಂಘ ಸಂಸ್ಕರಣ ಪದ್ಧತಿಯಾದ **ಇಲಿ ಆನೆ ಮೆರವಣಿಗೆ** ಈದಿನ ಭಕ್ತಿರೂಪವಾಗಿ ಬದಲಾಗಿಹೋಗಿದೆ. ಪುರಾಣಗಳ ಪ್ರಭಾವದಿಂದ ಆನೆ ರೂಪ ಸ್ವಲ್ಪ ವಿನಾಯಕನ ರೂಪವಾಗಿ ಬದಲಾದರೂ ಆಚರಣೆ ಪೂರ್ತಿ ಬದಲಾಗದೆ ಪೂರ್ವಾಚರಣೆ ಮಾಡುವುದರಿಂದ ಇತರ ಮತಸ್ಥರಾದ ಕೆಲವರಿಂದ ವಿಮರ್ಶಿಸಲ್ಪಡುತ್ತಿದೆ. ಆಚರಣೆಯನ್ನು ಪೂರ್ತಿ ಭಕ್ತಿಭಾವವಾಗಿ ಬದಲಿಸಿಕೊಂಡರೂ ಫರವಾಗಿಲ್ಲ, ಅಥವಾ ಮೊದಲಿನಂತೆ ಸಂಘರೀತ್ಯಾ ಇಟ್ಟುಕೊಂಡರೂ ಫರವಾಗಿಲ್ಲ. ಆದರೆ ಆಕಡೆ ಈಕಡೆ ಅಲ್ಲದೆ ಮಾಡುತ್ತಿರುವ ಕೆಲಸಕ್ಕೆ ಅರ್ಥ ತಿಳಿಯದಿರುವುದರಿಂದ ಇತರ ಮತಗಳಿಂದ, ನೋಡುವವರಿಂದ ವಿಮರ್ಶಿಸುವ ಕಾರ್ಯವಾಗಿದೆ. ವಿನಾಯಕನ ನಿಮಜ್ಜನೆ (ಸ್ನಾನ) ಎನ್ನುವ ಹೆಸರಿನಿಂದ ಚಿಕ್ಕ ಚಿಕ್ಕ ಗೊಂಬೆಗಳನ್ನು ನೀರಿನೊಳಗೆ ಬೀಸಾಕುವುದು ನೋಡಿದರೆ, ನಿಜವಾಗಲು ಭಕ್ತಿ ಎನಿಸುವುದಿಲ್ಲ. ಸಡಗರಕ್ಕೆ(ಜಾಲಿಗೆ)ಮಾಡುತ್ತಿರುವ ಕೆಲಸವಾಗಿ ಕಾಣಿಸುತ್ತದೆ, ಆದರೆ ಪೂರ್ತಿ ಭಕ್ತಿಯಾಗಿ ಕಾಣಿಸುವ ಕೆಲಸವಾಗಿ ತೋಚುತ್ತಿಲ್ಲ. ಮೆರವಣಿಗೆ ನೋಡಿದರೆ ಕೆಲವುಕಡೆ ಪೀರ್ಲಹಬ್ಬದಂತೆ ಕುಡಿದು ಕುಣಿಯುವುದು, ಕೇಕೆ ಹಾಕುವುದು, ನೋಡಿದರೆ ಅಲ್ಲರಿ ಸಾಂಪ್ರದಾಯವೆ ಹೊರತು, ಅರ್ಥ ಸಾಂಪ್ರದಾಯ ಅಲ್ಲವೆನಿಸುತ್ತದೆ. ಆದಿನ ನಮ್ಮ ಹಿರಿಯರು ಸಮಾಜದಲ್ಲಿನ ಕೆಟ್ಟದ್ದನ್ನು ತೆಗೆದುಹಾಕಿ ಸಮ ಸಮಾಜವನ್ನು ಸ್ಥಾಪಿಸುವುಕ್ಕೆ ಮಾಡಿ ತೋರಿಸಿರುವುದನ್ನು ಅರ್ಥಮಾಡಿಕೊಳ್ಳದೆ, ಅವರ ಅರ್ಥವನ್ನು ತುಂಗೆಯಲ್ಲಿ ತುಳಿದು ನಮ್ಮ ಇಷ್ಟಬಂದಂತೆ ನಾವು ವಿನಾಯಕ ಚೌತಿಯನ್ನು ಮಾಡಿಕೊಳ್ಳುತ್ತಿದ್ದೇವೆ. ಇತ್ತ ಓದಿಕೊಂಡವರು, ಅತ್ತ ಓದಿಲ್ಲದವರು ಮೂಢವಾಗಿ ಹಿರಿಯರ ಉದ್ದೇಶವನ್ನು ಮಣ್ಣಿನಲ್ಲಿ ಬೆರೆಸಿ ಅರ್ಥರಹಿತವಾದ ವಿನಾಯಕಚೌತಿಯನ್ನು ಮಾಡುತ್ತಿದ್ದಾರೆ.

ಇಲ್ಲಿ ಮುಖ್ಯವಾಗಿ ಹೇಳಿಕೊಳ್ಳಬೇಕಾಗಿರುವುದು ಏನೆಂದರೆ! ಕೃಷ್ಣನು ಭಗವಂತನಾದರೂ, ದೇವರ ಅಂಶ ಕೃಷ್ಣನಾಗಿ ಭೂಮಿಮೇಲಕ್ಕೆ ಬಂದು ನಮ್ಮ

ಜೀವನಗಳ ಸಾರಾಂಶವಾದ ಭಗವದ್ಗೀತೆಯನ್ನು ಹೇಳಿದರೂ, ಭಗವಂತನಾಗಲಿ, ಭಗವದ್ಗೀತೆಯಾಗಲಿ ಈಗಿನ ಮಾನವರಿಗೆ ದೊಡ್ಡದಾಗಿ ಕಾಣಿಸದೆ, ಭಗವಂತನ ಹುಟ್ಟುಹಬ್ಬವಾದ ಕೃಷ್ಣಾಷ್ಟಮಿಯನ್ನು ಮಾಡದೆ, ಅದರ ಸ್ಥಾನದೊಳಗೆ ವಿನಾಯಕ ಚೌತಿಯನ್ನು ತಂದಿಟ್ಟುಕೊಂಡಿದ್ದಾರೆ. ಕೃಷ್ಣಾಷ್ಟಮಿ ಹನ್ನೊಂದು ದಿನಗಳ ಹಬ್ಬವೆಂದು ಮೊದಲೆ ಹೇಳಿಕೊಂಡಿದ್ದೇವೆ. ಅಷ್ಟೇ ಅಲ್ಲದೆ ಕಲಿಯುಗ ಪ್ರಾರಂಭದಲ್ಲಿ ವೈಭವವಾಗಿ ಮಾಡುವ ಬೀದಿಹಬ್ಬ ಕೃಷ್ಣಾಷ್ಟಮಿ ಒಂದೇಯೆಂದು ಸಹ ಹೇಳಿದ್ದೇವೆ. ಮಾಯಾ ಪ್ರಭಾವದಿಂದ ಒಂದುದಿನ ಮಾಡುವ ವಿನಾಯಕಚೌತಿ ಹನ್ನೊಂದು ದಿನಗಳಾಗಿದೆ. ಹನ್ನೊಂದು ದಿನಗಳು ಮಾಡುವ ಕೃಷ್ಣಾಷ್ಟಮಿ ಒಂದುದಿನಕ್ಕೆ ಪರಿಮಿತವಾಗಿ ಹೋಗಿದೆ. ಅಷ್ಟೇ ಅಲ್ಲದೆ ಪೂರ್ವದಲ್ಲಿ ಕೃಷ್ಣಾಷ್ಟಮಿ ಹಬ್ಬ ಮುಕ್ತಾಯದ ದಿನ ಭಾದ್ರಪದಮಾಸ ಶುಕ್ಲಪಕ್ಷ ಚೌತಿದಿನ ಆಗುತ್ತದೆ. ಸರಿಯಾಗಿ ಆ ದಿನವನ್ನೇ ವಿನಾಯಕ ಚೌತಿಯಾಗಿ ಲೆಕ್ಕಿಸುವುದರಿಂದ, ಕೃಷ್ಣಾಷ್ಟಮಿ ಮುಕ್ತಾಯ ಹನ್ನೊಂದನೆ ದಿನಕ್ಕೆ ಆತಂಕ ಏರ್ಪಟ್ಟಿದೆ. ಈ ವಿಧವಾಗಿ ಕೃಷ್ಣಾಷ್ಟಮಿಗೆ ಆತಂಕವಾಗಿ ವಿನಾಯಕಚೌತಿ ಬರುವುದರಿಂದ ಹಿಂದೂ (ಇಂದೂ) ಸಂಸ್ಕೃತಿಯಲ್ಲಿನ ಮುಖ್ಯವಾದ ಕೃಷ್ಣಾಷ್ಟಮಿ ಹೋಗಿ, ಮುಖ್ಯವಲ್ಲದ ವಿನಾಯಕ ಚೌತಿ ಬಂದು ಸೇರಿಹೋಗಿದೆ. ಕೃಷ್ಣಾಷ್ಟಮಿ ಮುಕ್ತಾಯದಿನವಾದ ಹನ್ನೊಂದನೆಯ ದಿನವೇ ವಿನಾಯಕಚೌತಿ ಪ್ರಾರಂಭವಾಗುವುದರಿಂದ, ಕೆಲವರು ವಿನಾಯಕಚೌತಿ ಯನ್ನು ಬಿಡಲಾರದೆ ಕೃಷ್ಣಾಷ್ಟಮಿಯನ್ನು ಒಂದುದಿನದ ಹಬ್ಬಕ್ಕೆ ಸಾಕುಮಾಡಿ, ಶ್ರಾವಣ ಬಹುಳ ಅಷ್ಟಮಿ ದಿನ ಮಾತ್ರವೆ ಕೃಷ್ಣಾಷ್ಟಮಿಯನ್ನು ಮಾಡುವುದಕ್ಕೆ ಪ್ರಾರಂಭಮಾಡಿದ್ದಾರೆ. ಹಾಗೆ ಮಾಡುವುದರಿಂದ ನಾವು ನಮ್ಮ ಮುಖ್ಯವಾದ ಸಾಂಪ್ರದಾಯ ತಿಳಿಯದೆಯೇ ಬಿಟ್ಟಂತಾಗಿದೆ. ಆ ವಿಧವಾಗಿ ವರ್ಷದಲ್ಲಿ ಒಂದುದಿನ ಹಬ್ಬವಾಗಿ ಕೃಷ್ಣಾಷ್ಟಮಿ ಬದಲಾಗಿ ಸ್ವಲ್ಪಕಾಲ ಕಳೆದನಂತರ, ಕಾಲಕ್ರಮವಾಗಿ ಆ ಒಂದುದಿನದ ಹಬ್ಬವನ್ನು ಸಹ ಮರೆತುಹೋಗಿ, ಕೃಷ್ಣಾಷ್ಟಮಿ ಎಂದರೆ ಏನೊ ತಿಳಿಯದಸ್ಥಿತಿಗೆ ನಾವು ಬಂದಿದ್ದೇವೆ. ಇನ್ನೂ ವಿಶೇಷವೇನೆಂದರೆ ಕೆಲವು ಪ್ರಾಂತ್ಯಗಳಲ್ಲಿ ಕೃಷ್ಣನು ಬೆಳೆದ ಕುಲವಾದ ಯಾದವರಿಗೆ (ಗೊಲ್ಲರಿಗೂ) ಸಹ ಕೃಷ್ಣಾಷ್ಟಮಿ ಕುರಿತು ತಿಳಿಯದಂತೆ ಹೋಗಿದೆ. ಸಾಕ್ಷಾತ್ತು ದೇವರು ಅವತರಿಸಿ

ಭಗವಂತನಾಗಿ ಬಂದಿರುವ ಮೊದಲ ದಿನವಾದ ಕೃಷ್ಣಾಷ್ಟಮಿ, ಈದಿನ ಆದರಣೆ ಇಲ್ಲದ್ದಾಗಿ, ಅರ್ಥವಿಲ್ಲದ್ದಾಗಿ, ಆಚರಣೆಯಿಲ್ಲದ್ದಾಗಿ ಹೋಗಿದೆಯೆಂದರೆ, ದೈವತ್ವವಾಗದ ಒಂದು ಸಮಾಜ ಶ್ರೇಯಸ್ಸು ವಿಷಯ, ಮಾಯಾಬಲದಿಂದ ದೈವಸ್ಥಾನವನ್ನು ಆಕ್ರಮಿಸಿ ಎಲ್ಲರಿಂದ ಆದರಣೆ ಪಡೆಯುತ್ತಾ, ಎಲ್ಲರಿಂದ ಅಚರಿಸಲ್ಪಡುತ್ತಿದೆ. ಈ ವಿಧವಾಗಿ ಸಮಾಜದಲ್ಲಿ ವಿನಾಯಕಚೌತಿ ಬೀದಿಹಬ್ಬವಾಗಿ ಬದಲಾಗಿಹೋಗಿರುವುದು, ಅಷ್ಟೇ ಅಲ್ಲದೆ ಹನ್ನೊಂದು ದಿನಗಳ ಹಬ್ಬವಾಗಿ ಬದಲಾಗಿಹೋಗಿರುವುದು, ಕೃಷ್ಣಾಷ್ಟಮಿ ಎಲ್ಲ ವಿಧಗಳಲ್ಲಿ ಆಚರಣೆ ಇಲ್ಲದಂತೆ ಹೋಗಿರುವುದು. ನಮಗೆ ಬಹಳ ದುಃಖವನ್ನುಂಟುಮಾಡಿದ ವಿಷಯ. ನನಗೇ ಅಲ್ಲ ಪ್ರತಿ ಹಿಂದೂ (ಇಂದೂ) ಬಾಧೆಪಡಬೇಕಾದ ವಿಷಯ ಪ್ರತಿ ಒಬ್ಬರು ಹಿಂದಿರುಗಿ ನೋಡಿಕೊಳ್ಳಬೇಕಾದ ವಿಷಯ.

ಇಂದೂ (ಹಿಂದೂ) ಧರ್ಮಗಳಿಗೆ ಪೂರ್ವದ ವೈಭವ ಬರಬೇಕೆಂದರೆ, ಇಂದೂತ್ವ ಎಲ್ಲರಿಗೂ ಒಪ್ಪಿಗೆ ಆಗಬೇಕೆಂದರೆ, ಈದಿನದ ಆಚಾರಗಳನ್ನು ಬಿಟ್ಟು, ಆ ದಿನದ ಆಚಾರಗಳನ್ನು ಜಾರಿ ಮಾಡಬೇಕು. ಇಷ್ಟು ಹೇಳಿದರೂ ಕೆಲವರು ಮೊಂಡಾಗಿ ವಾದಿಸುತ್ತಾ, ವಿನಾಯಕಚೌತಿ ಸಹ ಹಿಂದೂ ಧರ್ಮಗಳಿಗೆ ಸಂಬಂಧಿಸಿರುವುದೆ ಅಲ್ಲವೆ! ಪಾರ್ವತಿದೇವಿಗು, ಶಿವನಿಗು ಹುಟ್ಟಿದವನೆ ಅಲ್ಲವೆ! ವಿನಾಯಕನೆಂದು ಕೇಳಬಹುದು. ನಾನು ಮೊದಲಿನಿಂದ ನಮಗೆ ಶಾಸ್ತ್ರವೇ ಆಧಾರವೆಂದು ಹೇಳುತ್ತಲೇ ಇದ್ದೇನೆ. ಪಾರ್ವತಿ, ವಿನಾಯಕನು ಭಗವದ್ಗೀತೆಗಿಂತ ಮೊದಲು ವ್ಯಾಸನಿಂದ ಬರೆಯಲ್ಪಟ್ಟ ಒಂದು ಪುರಾಣಗಾಥದಿಂದ ಬಂದವರು. ವಿನಾಯಕನ ಹುಟ್ಟುವಿಕೆಯೇ ಅಶಾಸ್ತ್ರೀಯ, ಪ್ರಕೃತಿಗೆ ವಿರುದ್ಧವಾಗುತ್ತದೆ. ತಂದೆಗೆ ತಿಳಿಯದಂತೆ ಮಗ ಹುಟ್ಟುವುದೇನೆಂದು ಯಾರಾದರೂ ಪ್ರಶ್ನಿಸಿದರೂ, ತಂದೆ ಸಂಬಂಧ ಇಲ್ಲದಂತೆ ತಾಯಿ ಮಗನನ್ನು ಹೇಗೆ ಹುಟ್ಟಿಸಿಕೊಂಡಿದ್ದಾಳೆಂದು ಯಾರಾದರೂ ಕೇಳಿದರೂ, ನಾವು ಸರಿಯಾದ ಶಾಸ್ತ್ರಬದ್ಧವಾದ ಸಮಧಾನ ಹೇಳಲಾರೆವು. ಹಾಗೆ ಹುಟ್ಟಿದವನು ತಾಯಿ ಮಗನೆ ಆಗುತ್ತಾನೆ, ಆದರೆ ತಂದೆಯ ಮಗ ಅಲ್ಲ. ತಲೆ, ಮುಂಡಗಳು ಬೇರೆಬೇರೆಯಾಗಿ ಇದ್ದರೂ ನರಸಿಂಹಸ್ವಾಮಿ,

ವಿನಾಯಕನ ಕಥೆಗಳು ಪುರಾಣಗಳೆ ಆಗುತ್ತವೆ. ಆದರೆ ಶಾಸ್ತ್ರಬದ್ಧವಾದ ಚರಿತ್ರೆಗಳು ಅಲ್ಲ. ಕವಿಗಳು ಸೃಷ್ಟಿಸಿದ ಕಥೆಗಳನ್ನು ಬಿಟ್ಟು ವಾಸ್ತವ ಚರಿತ್ರೆ ಇರುವ ವಿಷಯವನ್ನೇ ಸ್ವೀಕರಿಸಬೇಕು. ನಾಗರಚೌತಿಗೆ ಶಾಸ್ತ್ರೀಯತೆ ಇದೆ. ಹಾಗೆಯೇ ವಿನಾಯಕಚೌತಿಗೆ ಶಾಸ್ತ್ರೀಯತೆ ಇದೆ. ಈ ಎರಡೂ ಸಮಾಜ ಶ್ರೇಯಸ್ಸಿಗೆ ಸಂಬಂಧಿಸಿರುವವೆಂದು ತಿಳಿಯುತ್ತಿದ್ದರೂ, ಶಾಸ್ತ್ರೀಯತೆಯನ್ನು ಬಿಟ್ಟು ನಾಗರಚೌತಿಗೆ, ವಿನಾಯಕಚೌತಿಗೆ ಅಶಾಸ್ತ್ರೀಯತೆಯನ್ನು ಅಂಟಗಟ್ಟಬಾರದು.

ಕೆಲವರು ಹಿಂದೂ (ಇಂದೂ) ಮತವನ್ನು ರಕ್ಷಿಸುತ್ತೇವೆಂದು, ಹಿಂದೂ ಧರ್ಮಗಳನ್ನು ಕಾಪಾಡುತ್ತೇವೆಂದು ಹೇಳುತ್ತಾ, ಹಿಂದೂ ಧರ್ಮರಕ್ಷಣೆ ಎನ್ನುವ ನಿನಾದದಿಂದ ಕೆಲವು ಹೆಸರುಗಳಿರುವ ಸಂಘಗಳನ್ನು ಸ್ಥಾಪಿಸಿಕೊಂಡು, ಅವರ ಆಧಿಪತ್ಯಕ್ಕೋಸ್ಕರ ಹಿಂದೂ ಧರ್ಮಗಳನ್ನು ಭಕ್ಷಿಸುತ್ತಿದ್ದಾರೆ. ಅಂತಹವರಿಗೆ ಹಿಂದೂ ಧರ್ಮಗಳೆಂದರೆ ಏನೊ, ಅವು ಹೇಗಿರುತ್ತವೊ ಸಹ ತಿಳಿದಿಲ್ಲ. ಅಂತಹವರು ಹಿಂದೂ ಧರ್ಮಗಳನ್ನು ಕಾಪಾಡುವುದು? ಅಂತಹ ಸಂಸ್ಥೆಗಳು ಇತರ ಮತಗಳ ಮೇಲೆ ದೌರ್ಜನ್ಯ ಮಾಡುತ್ತಾ ಹಿಂದೂತ್ವ ಶಾಂತಿ ಸ್ವರೂಪ ವಾದುದು ಅಲ್ಲ ಎನ್ನುವಂತೆ ಮಾಡುತ್ತಿದ್ದಾರೆ, ಅಂತಹವರು ತಮ್ಮ ಹೆಸರುವಾಸಿ ಗೋಸ್ಕರ ನಮ್ಮಂತವರನ್ನು ಸಹ ಅವಮಾನಿಸುತ್ತಿದ್ದಾರೆ. ಅಂತಹವರನ್ನು ಲೆಕ್ಕಮಾಡದೆ, ಇಂದೂ ಧರ್ಮಗಳ ಪ್ರಕಾರವೇ ಜ್ಞಾನ ತಿಳಿದವರು ಪ್ರವರ್ತಿಸಬೇಕು. ಭಗವದ್ಗೀತೆ ತಿಳಿದ ನಂತರ ಪುರಾಣಗಳನ್ನು ಬರೆದ ವ್ಯಾಸನೆ ತಾನು ಪುರಾಣಗಳನ್ನು ಬರೆದು ತಪ್ಪು ಮಾಡಿದ್ದೇನೆಂದು ದುಃಖಪಟ್ಟು ಪಶ್ಚಾತ್ತಾಪದಿಂದ ಕೃಂಗಿ ಹೋಗಿದ್ದಾನೆ. ಬರೆದ ವ್ಯಾಸನೆ ದುಃಖಪಟ್ಟರೆ, ಆ ವಿಷಯ ತಿಳಿಯದೆ ನಾವು ಆ ಪುರಾಣಗಳ ಆಧಾರದಿಂದಲೇ ನಾಗರಚೌತಿ, ವಿನಾಯಕಚೌತಿ ಇಷ್ಟಾನುಸಾರ ಮಾಡಿದರೆ ನಾವು ದೈವದ್ರೋಹ ಮಾಡಿದಂತೆ. ಅಸಲಾದ ಹಿಂದೂ ಧರ್ಮಗಳನ್ನು ಹೇಳನವಾಗಿ ನೋಡಿದಂತೆ. ಆದ್ದರಿಂದ ಅಧರ್ಮಗಳಾದ ಪದ್ಧತಿಗಳನ್ನು ಬಿಟ್ಟು ಧರ್ಮಗಳಾದ ಪದ್ಧತಿಗಳನ್ನೇ ಆಚರಿಸಬೇಕು. ಆ ಪ್ರಯತ್ನದಲ್ಲಿ ವಿನಾಯಕ ಚೌತಿಯನ್ನು ಬಿಟ್ಟು ಕೃಷ್ಣಾಷ್ಟಮಿಯನ್ನು ಮಾಡೋಣ.

ಕೃಷ್ಣಾಷ್ಟಮಿಯನ್ನು ಹನ್ನೊಂದು ದಿನಗಳು ನಡೆಸಿದರೆ ವಿನಾಯಕಚೌತಿಯನ್ನು ಮಾಡಿಕೊಳ್ಳುವ ಅವಕಾಶ ಇಲ್ಲದಂತೆ ಹೋಗುತ್ತದೆ. ಹನ್ನೊಂದನೆಯ ದಿನ ವಿನಾಯಕಚೌತಿ ಆಗುತ್ತದೆ. ಆ ದಿನದಂದು ಕೃಷ್ಣನು ಮಂಟಪದಲ್ಲಿ ಇರುವುದರಿಂದ ವಿನಾಯಕನಿಗೆ ಮಂಟಪವೆ ಇರುವುದಿಲ್ಲ. ಆದ್ದರಿಂದ ಭಗವಂತನ ಹಬ್ಬಕ್ಕೋಸ್ಕರ ಭಗವಂತನಲ್ಲದ ವಿನಾಯಕನ ಹಬ್ಬವನ್ನು ಬಿಟ್ಟರೂ ತಪ್ಪಿಲ್ಲ.

ಭೂಮಿಮೇಲೆ ಬಹಳಜನರಿಗೆ ಅಲ್ಲದೆ ಒಂದು ವಿಧವಾಗಿ ಎಲ್ಲರಿಗೂ ತಿಳಿದಯ ರಹಸ್ಯವೊಂದು ಇದೆ. ಅದೇ ದೇವರ ಪಾಲನೆ. ದೇವರ ಪಾಲನೆಯಲ್ಲಿ ಮಹಾ ಭೂತಗಳು, ಭೂತಗಳು, ಉಪಭೂತಗಳು ಪಾತ್ರಧಾರರಾಗಿದ್ದು ಭೂಮಿಮೇಲೆ ಪಾಲನೆ ಸಾಗಿಸುತ್ತಿವೆ. ಈ ವಿಷಯ ಭಗವದ್ಗೀತೆಯಲ್ಲಿ ಶಾಸ್ತ್ರಪದ್ಧತಿಯಾಗಿದೆ. ದೇವರು ಏನು ಮಾಡುವುದಿಲ್ಲ, ಮಾಡುವುದೆಲ್ಲ ಮೂರು ವಿಧಗಳ ಭೂತಗಳೆ. ದೇವರಿಗೆ ವಿರುದ್ಧವಾದ ಕೆಲಸಗಳು ಮಾಡುವವರ ಮೇಲೆ ಭೂತಗಳ ದೃಷ್ಟಿ ಇರುತ್ತದೆಂದು ಸಹ ಒಂದು ಗ್ರಂಥದಲ್ಲಿ ವಿವರವಾಗಿ ಹೇಳುವುದು ನಡೆದಿದೆ. ದೇವತೆಗಳ ದರ್ಶನಾರ್ಥ ಹೋಗುವಾಗ, ಬರುವಾಗ ಪಾಲ್ಗೊಂಡಾಗ, ಮದುವೆಗಳಿಗೆ ಹೋಗುವಾಗ, ಬರುವಾಗ, ಹೆಚ್ಚಾಗಿ ಪ್ರಮಾದಗಳು ನಡೆಯುವುದಕ್ಕೆ ಭೂತಗಳೆ ಕಾರಣವೆಂದು ಸಹ ಹೇಳಿದ್ದೇವೆ. ಪ್ರತಿ ವರ್ಷದಲ್ಲಿ ವಿನಾಯಕಚೌತಿ ವಿನಾಯಕ ನಿಮಜ್ಜನ ಸಮಯದಲ್ಲಿ ಬಹಳ ಪ್ರದೇಶಗಳಲ್ಲಿ ಒಬ್ಬರು, ಇಬ್ಬರು ಅಥವಾ ಮೂವರು ಪ್ರಮಾದವಶಾತ್ತು ಮರಣಿಸುವುದು ನಡೆಯುತ್ತಿದೆ. ಪ್ರತಿ ವರ್ಷ ಹಾಗೆ ನಡೆಯುತ್ತಿದ್ದರೂ ಏಕೆ ಹೀಗೆ ನಡೆಯುತ್ತಿದೆಯೆಂದು ಯಾರಿಗೂ ಅರ್ಥವಾಗುತ್ತಿಲ್ಲ. ಅದು ಭೂತಗಳ ಕೆಲಸ ಎಂದು ಯಾರಿಗೂ ತಿಳಿಯುತ್ತಿಲ್ಲ. ವಿನಾಯಕಚೌತಿ ಸಂದರ್ಭದಲ್ಲಿ ದೇಶವೆಲ್ಲ ಸಾವಿರಾರುಜನ ಮರಣಿಸುತ್ತಿದ್ದಾರೆ. ಭೂತಗಳಿಂದ ಬರುವ ಅಂತಹ ಪ್ರಮಾದಗಳು ಇಲ್ಲದಂತೆ ಹೋಗಬೇಕೆಂದರೆ ಪಂಚಭೂತಗಳಿಗೆ ಇಷ್ಟವಿಲ್ಲದ ವಿನಾಯಕಚೌತಿಯನ್ನು ಬಿಟ್ಟು, ಭೂತಗಳಿಗೆ ಇಷ್ಟವಿರುವ ದೇವರ ಆರಾಧನೆಯಾದ ಭಗವಂತನ ಜನ್ಮದಿನವನ್ನು ಹಬ್ಬವಾಗಿ ಮಾಡಿಕೊಳ್ಳುವುದು ಒಳ್ಳೆಯದು.

ಎಲ್ಲವನ್ನು ಗಮನಿಸಿದ ನಂತರ ಈ ಗ್ರಂಥವನ್ನು ಓದಿದ ಪ್ರತಿಯೊಬ್ಬರು, ಕೃಷ್ಣಾಷ್ಟಮಿಯನ್ನು ಮಾಡುವುದಕ್ಕೆ, ಎಲ್ಲರಿಗಿಂತ ಮುಂಚೆಯೆ ಮೊದಲುಮಾಡಿರಿ. ಕೃಷ್ಣಾಷ್ಟಮಿಯಲ್ಲಿ ವಿನಾಯಕಚೌತಿಯಂತೆ ಖರ್ಚು ಇರುವುದಿಲ್ಲ, ಪ್ರಮಾದ ಇರುವುದಿಲ್ಲ. ಪ್ರತಿ ವರ್ಷ ಪ್ರತಿಮೆಗಳನ್ನು ಕೊಳ್ಳುವ ಅವಶ್ಯಕತೆ ಇಲ್ಲ. ಮನೆಯಲ್ಲಿನ ಪ್ರತಿಮೆಯನ್ನು ಬೀದಿಯಲ್ಲಿಟ್ಟು, ಹನ್ನೊಂದುದಿನಗಳು ಉತ್ಸವಗಳು ಮಾಡಿ ಆ ಪ್ರತಿಮೆಯನ್ನು ಪುನಃ ಮನೆಯಲ್ಲಿಟ್ಟುಕೊಳ್ಳಬೇಕು. ಎಂತಹ ಪರಿಸ್ಥಿತಿಯಲ್ಲಿಯೂ ಕೃಷ್ಣ ಪ್ರತಿಮೆಯನ್ನು ನೀರಿನಲ್ಲಿ ನಿಮಜ್ಜನ ಮಾಡುವುದಾಗಲಿ, ಎಲ್ಲಿಯಾದರೂ ಬೀಸಾಕುವುದಾಗಲಿ ಮಾಡಬಾರದು. ಕೊನೆಯದಿನ ಮೆರವಣಿಗೆಯ ನಂತರ ಕೃಷ್ಣ ಪ್ರತಿಮೆಯನ್ನು ಮನೆಯಲ್ಲಿಯೇ ಇಟ್ಟುಕೊಳ್ಳಬೇಕು. ವಿನಾಯಕಚೌತಿ ಸಮಯದಲ್ಲಿ ಚಂದ ವಸೂಲಿಗಳೆ ಹೆಚ್ಚಾಗಿ ನಡೆಯುತ್ತಿವೆ. ಅದರಲ್ಲಿ ವಿನಾಯಕನ ಭಕ್ತಿಗಿಂತ ಹಣದ ವಸೂಲಿಗಳು ಮುಖ್ಯಪಾತ್ರ ಪೋಷಿಸುತ್ತಿವೆ. ಕೊಡುವುದಕ್ಕೆ ಸಾಮರ್ಥ್ಯವಿಲ್ಲದವರ ಹತ್ತಿರ ಕೂಡ ಬಲವಂತವಾಗಿ ಹಣವನ್ನು ವಸೂಲಿ ಮಾಡುವುದು ನಡೆಯುತ್ತಿದೆ. ಕೃಷ್ಣಾಷ್ಟಮಿಯಲ್ಲಿ ಅಂತಹ ವಿಧಾನ ಇರುವುದಿಲ್ಲ. ಮಳೆಗೆ ನೆನೆಯದ ವಿಧವಾಗಿ ಮಂಟಪವನ್ನು ತಯಾರಿಸಿ ಅದರಲ್ಲಿ ಕೃಷ್ಣಪ್ರತಿಮೆ ಇಟ್ಟು, ತೆಂಗಿನಕಾಯನ್ನು ಒಡೆದು ಆರಾಧಿಸಿದರೆ ಸಾಕು. ಕೃಷ್ಣನ ಮುಂದೆ ವಿನಾಯಕನ ಮಂಟಪದಲ್ಲಿ ಇಟ್ಟಂತೆ ಸಿನಿಮಾ ಹಾಡುಗಳನ್ನು ಇಡುವುದಾಗಲಿ, ಕಾಲಕ್ಷೇಪಕ್ಕೆ ಜೂದವಾಡುವು ದಾಗಲಿ ಒಳ್ಳೆಯದಲ್ಲ. ಕರ್ನಾಟಕ ಪ್ರಾಂತದಲ್ಲಿ ಪ್ರತಿ ವಿನಾಯಕ ಮಂಟಪದಲ್ಲಿ ಜೂದವಾಡುವುದು ಅಭ್ಯಾಸವಾಗಿದೆ. ಅಂತಹ ಕೆಲಸಗಳು ಕೃಷ್ಣಪ್ರತಿಮೆ ಮುಂದೆ ಮಾಡಬಾರದು ಕೃಷ್ಣಮಂಟಪದಲ್ಲಿ ಹನ್ನೊಂದು ದಿನಗಳು ಪ್ರತ್ಯೇಕವಾಗಿ ಗೀತಾ ಪಠಣೆ ನಡೆಯುವಂತೆ ಏರ್ಪಾಡು ಮಾಡಬೇಕು. ಅದು ಗಾಯಕರು ಗಾನ ಮಾಡಿದ ಭಗವದ್ಗೀತೆ ರಿಕಾರ್ಡನ್ನು ಇಡಬಾರದು. ಶುಚಿಶುಭ್ರತೆಗಳಿಂದ ಯಾರಾದರೂ ಗೀತೆಯನ್ನು ಉದಯ, ಸಾಯಂಕಾಲ ಪಠಿಸಬೇಕು. ಕೃಷ್ಣನ ಮಂಟಪದಲ್ಲಿ ವೇದಮಂತ್ರಗಳು ನಿಷೇಧ. ಕೃಷ್ಣನ ಪೂಜೆಯಲ್ಲಿ ವೇದಮಂತ್ರಗಳನ್ನು ಬಳಸಬಾರದು. ಮಂತ್ರರಹಿತವಾದ ಸಾಧಾರಣ ಪೂಜೆ ಮಾಡುವುದು ಒಳ್ಳೆಯದು.

ಮತ್ತು ಪಾನೀಯಗಳು ಕುಡಿದವರು ಕೃಷ್ಣಪ್ರತಿಮೆ ಇರುವ ಪರಿಸರ ಪ್ರಾಂತ್ಯದೊಳಗೆ ಹೋಗಬಾರದು. ಹೋದರೂ ಆಗ ಏನೂ ಆಗುವುದಿಲ್ಲ, ಆದರೆ ನಂತರ ಅವನ ಆರೋಗ್ಯದಲ್ಲಿ ಎಷ್ಟೋ ವ್ಯತ್ಯಾಸ ಬರುತ್ತದೆ. ಗುಣವಾಗದ ರೋಗಗಳು ತಗಲಿಕೊಳ್ಳುತ್ತವೆ. ರೋಗಗಳು ಸಹ ಭೂತಗಳೆ ಆದ್ದರಿಂದ, ಭೂತಗಳು ಕೃಷ್ಣನನ್ನು ಅಂದರೆ ಭಗವಂತನನ್ನು ಹೀನವಾಗಿ ನೋಡಿದವನನ್ನು ಬಿಡುವುದಿಲ್ಲ. ಈಗಲೇ ಭಗವಂತನನ್ನು ಬಿಟ್ಟು ಇತರ ದೇವತೆಗಳನ್ನು ಆರಾಧಿಸುವವರನ್ನು ಪ್ರಮಾದಗಳಲ್ಲಿ ಸಿಕ್ಕಿಕೊಳ್ಳುವಂತಾಗಲಿ, ಆರೋಗ್ಯದಲ್ಲಿ ಅನೇಕ ಸಮಸ್ಯಗಳು ಬರುವಂತಾಗಲಿ ಭೂತಗಳು ಮಾಡುತ್ತಿವೆ. ಆದ್ದರಿಂದ ಅವರ ಕೋಪಕ್ಕೆ ಗುರಿಯಾಗದಂತೆ ಅನ್ಯದೇವತೆಗಳನ್ನು ಬಿಟ್ಟು ಕೃಷ್ಣಾಷ್ಟಮಿಯನ್ನು ಮಾಡಿದವರಿಗೆ ದೇವರ ಪಾಲನೆಯಲ್ಲಿ ಪಾತ್ರಧಾರಿಗಳಾದ ಭೂತಗಳು ಸಹಕರಿಸುತ್ತವೆ. ಭಗವಂತನು ಹೇಳಿದ ಜ್ಞಾನವನ್ನು ತಿಳಿದುಕೊಂಡರೆ, ಶರೀರದಲ್ಲಿ ರೋಗಗಳಾಗಿ ಇರುವ ಭೂತಗಳು ಸಹ ಅಂತಹವರನ್ನು ಗೌರವಿಸಿ ತಮ್ಮ ರೋಗಗಳನ್ನು ಅವನಿಗೆ ಇಲ್ಲದಹಾಗೆ ಮಾಡುತ್ತವೆ. ಅಷ್ಟೇ ಅಲ್ಲದೆ ಈದಿನ ನಡೆಯುವ ಪ್ರಕೃತಿ ವೈಪರೀತ್ಯಗಳು ಚಿಕ್ಕದರಿಂದ ದೊಡ್ಡದರವರೆಗು ಎಲ್ಲವೂ ದೇವರ ಪಾಲಕರಾದ ಭೂತಗಳಿಂದಲೇ ನಡೆಯುತ್ತಿವೆ. ಕೃಷ್ಣಾಷ್ಟಮಿಯನ್ನು ಭಕ್ತಿಯಿಂದ ಮಾಡುವು ದರಿಂದ ಆ ಪ್ರಾಂತದಲ್ಲಿ ಪ್ರಕೃತಿ (ಭೂತಗಳ) ವೈಪರೀತ್ಯಗಳು ಕಡಿಮೆಯಾಗುತ್ತದೆ. ಮಳೆ ಸಹ ಭೂತಗಳಿಂದಲೇ ಬರುತ್ತಿದೆ. ಆದ್ದರಿಂದ ಭಗವಂತನ ಭಕ್ತಿ ಹೊಂದಿರುವ ಪ್ರದೇಶದಲ್ಲಿ ಮಳೆಗಳು ಸಕ್ರಮವಾಗಿ ಸುರಿಯುತ್ತವೆ. ಇದೆಲ್ಲವೂ ಕವಿತ್ವ ಅಲ್ಲ, ನಗ್ನಸತ್ಯ. ಭೂತಗಳೆಂದರೆ ಏನೊ, ದೇವರ ಪಾಲನೆ ಎಂದರೆ ಏನೊ, ಯಾರಿಗೂ ತಿಳಿದಿಲ್ಲವೆಂದಿದ್ದೇವೆ! ಆ ವಿಷಯಗಳು ತಿಳಿಯಬೇ ಕೆಂದರೆ ನಾವು ರಚಿಸಿದ **"ದೇವ್ವಗಳ – ಭೂತಗಳ ಯಥಾರ್ಥ ಸಂಘಟನೆಗಳು"** ಎಂಬ ಗ್ರಂಥವನ್ನು ಓದಿದರೆ ದೇವರ ಪಾಲನೆ ಎಂದರೆ ಏನೊ, ಭೂತಗಳು ಎಂದರೆ ಏನೊ ತಿಳಿಯುತ್ತದೆ.

ನೀವು ತಿಳುವಳಿಕೆ ಕಡಿಮೆ ಇರುವವರು ಮಾತ್ರ ಅಲ್ಲ. ಆದರೆ ಹೇತುಬದ್ಧವಾಗಿ ಆಲೋಚಿಸದಿರುವುದರಿಂದ ತಿಳುವಳಿಕೆಯಿಲ್ಲದವರು

ಪ್ರವರ್ತಿಸಿದಂತೆ ಪ್ರವರ್ತಿಸುತ್ತಿದ್ದೀರಾ. ಅದು ಹೇಗೆ ಎಂದರೆ! ಕೃಷ್ಣನಿಗೆ ಚರಿತ್ರೆಯಿದೆ, ಕೃಷ್ಣನು ನಮ್ಮಂತೆ ಹುಟ್ಟಿದ್ದಾನೆ, ಆತನು ಹುಟ್ಟಿದ ತಾರೀಖು ಇದೆ. ಆತನು ಮರಣಿಸಿದ ವರ್ಷವೂ ಇದೆ. ಆದರೆ ವಿಘ್ನೇಶ್ವರನು ಹುಟ್ಟಿರುವುದು ಇಲ್ಲ, ಆತನ ಚರಿತ್ರೆ ಇಲ್ಲ. ಕೇವಲ ಪುರಾಣಗಳಲ್ಲಿ ಕಲ್ಪಿಸಲ್ಪಟ್ಟಿದ್ದಾನೆ. ಮಾಯೆಯಿಂದ ಕಲ್ಪಿಸಲ್ಪಟ್ಟು ಅಸಲಾದ ಭಗವಂತನಾಗಿ ಪೂಜಿಸಲ್ಪಡುತ್ತಿದ್ದಾನೆ. ನಿಜಕ್ಕೆ ವಿನಾಯ ಕನು ಇದ್ದಾನಾ ಇಲ್ಲವಾ? ಎಂದು ಯಾರೂ ಯೋಚಿಸದೆ ಕುರುಡರಂತೆ ಪ್ರವರ್ತಿ ಸುವುದರಿಂದ, ನಾಸ್ತಿಕವಾದಿಗಳು ಹೇತುಬದ್ಧತೆ ಇಲ್ಲದ ವಿನಾಯಕನನ್ನು ಇಲ್ಲ ಎನ್ನುವುದಲ್ಲದೆ, ಶಾಸ್ತ್ರಗಳನ್ನು ತಿಳಿದ ದೇವರನ್ನೆ ಇಲ್ಲ ಎನ್ನುತ್ತಿದ್ದಾರೆ. ವ್ಯಾಸನು ಅಜ್ಞಾನ ದಶೆಯಲ್ಲಿರುವ ವಯಸ್ಸಿನಲ್ಲಿ ಪುರಾಣಗಳನ್ನು ಬರೆದಿರುವುದು, ಅದರಲ್ಲಿ ವಿನಾಯಕ ಪಾತ್ರವನ್ನು ಬರೆದಿರುವುದು ನಡೆದಿದೆ. ಪುರಾಣಗಳೆಲ್ಲವೂ ಕಾಲಕ್ಷೇಪಕ್ಕೆ ಬರೆಯಲಾಗಿರುವವೆ ಹೊರತು, ಕರ್ಮಕ್ಷೇಪಕ್ಕೆ ಅಲ್ಲ. ವಿನಾಯಕನ ಜೀವನವನ್ನು ಕುರಿತು ಯಾವಮಾತ್ರ ತಿಳಿಯದ ಮನುಷ್ಯರು ವಿನಾಯಕನ ಉತ್ಸವಗಳು ಮಾಡುವುದರಲ್ಲಿ ಮುಂದಿದ್ದಾರೆ. ಕೃಷ್ಣನ ಜೀವನ ತಿಳಿದರೂ, ಕೃಷ್ಣನು ಮಾನವರ ಜೀವನಕ್ಕೆ ಸಂಬಂಧಿಸಿದ ಮತ್ತು ಮನುಷ್ಯ ಕರ್ಮಗಳಿಂದ ಹೊರಬೀಳುವ ಜ್ಞಾನವನ್ನು ಹೇಳಿದರೂ, ಕೃಷ್ಣಾಷ್ಟಮಿ ಮಾಡದವರು, ವಿನಾಯಕನ ಜೀವನವೇನೊ ತಿಳಿಯದಿದ್ದರೂ ಮತ್ತು ವಿನಾಯಕನು ಮನುಷ್ಯನಿಗೆ ಅಗತ್ಯವಾದ ಯಾವ ಜ್ಞಾನವನ್ನು ಹೇಳದಿದ್ದರೂ. ವಿನಾಯಕಚೌತಿಯನ್ನು ಮಾಡುತ್ತಿದ್ದಾರೆ. ನಾನು ನಿಮ್ಮನ್ನು ಹಿಂದೂಮತವನ್ನು ಬಿಟ್ಟು ಬೇರೆ ಮತದೊಳಗೆ ಬನ್ನಿರೆಂದು ಹೇಳುತ್ತಿಲ್ಲ. ಹಿಂದೂ (ಇಂದೂ) ಪಥದಲ್ಲಿನ ಉನ್ನತವನ್ನು ತಿಳಿದುಕೊಂಡು, ಇಂದೂಧರ್ಮಗಳನ್ನು ತಿಳಿದ ಕೃಷ್ಣನನ್ನು ಭಗವಂತನಾಗಿ ಗುರುತಿಸಿ, ಪ್ರತಿ ವರ್ಷ ಕೃಷ್ಣಾಷ್ಟಮಿಯನ್ನು ಮಾಡಿರೆಂದು, ಹಾಗೆ ಮಾಡುವುದರಿಂದ ನಿಮ್ಮ ಕರ್ಮಗಳು ಹೋಗುತ್ತವೆಂದು ತಿಳಿಸುತ್ತಿದ್ದೇವೆ.

ಕೃಷ್ಣನನ್ನು ಭಗವಂತನಾಗಿ ಗುರುತಿಸದೆ ಹೋದ ಕಾರಣದಿಂದ ಆತನನ್ನು ಅಶ್ರದ್ಧೆ ಮಾಡಿದ್ದೇವೆ. ಅಷ್ಟೇ ಅಲ್ಲದೆ ಕೃಷ್ಣನನ್ನು ಶೃಂಗಾರಪುರುಷನನ್ನಾಗಿ

ಕವಿಗಳೆಲ್ಲರೂ ಬರೆದಿರುವುದರಿಂದ, ಕೃಷ್ಣನನ್ನು ಚಿಲ್ಲರೆ ಮನುಷ್ಯನನ್ನಾಗಿ ಲೆಕ್ಕಿಸಿಕೊಂಡಿದ್ದಾರೆ. ಭಾಗವತ ಪುರಾಣದಲ್ಲಿ ಕೃಷ್ಣನು ಮಧುರೆಗೆ ಹೋಗಿ ಕಂಸನನ್ನು ಸಾಯಿಸುವುದಕ್ಕಿಂತ ಮೊದಲೆ ಗೋಪಿಕೆಯವರೊಂದಿಗೆ ತಿರುಗುವವನೆಂದು, ಅವರೊಂದಿಗೆ ಶೃಂಗಾರದಲ್ಲಿ ಪಾಲ್ಗೊಳ್ಳುತ್ತಿದ್ದಾನೆಂದು, ಸ್ವತಃ ಪೋತನ ಕವಿಯೇ ತೆಲುಗು ಭಾಷೆಯಲ್ಲಿ ಬರೆದಿದ್ದಾನೆ. ಸಂಸ್ಕೃತದಲ್ಲಿ ವ್ಯಾಸನು ಸ್ವಲ್ಪ ವಿಡ್ಡೂರವಾಗಿ ಬರೆದರೆ ಅದನ್ನು ತೆಲುಗುನಲ್ಲಿ ಅನುವಾದಿಸಿದ ಪೋತನ ಇನ್ನೂ ಕಲ್ಪಿತಗಳನ್ನು ಮಾಡಿ ಮತ್ತಷ್ಟು ವಿಡ್ಡೂರವಾಗಿ ಬರೆದಿದ್ದಾನೆ. ಕೃಷ್ಣನು ಮಧುರೆಗೆ ಹೋಗಿರುವುದು, ಕಂಸನನ್ನು ಸಾಯಿಸಿರುವುದು ಆತನಿಗೆ ಹನ್ನೊಂದು ವರ್ಷಗಳ ವಯಸ್ಸಿನಲ್ಲಿ ನಡೆದಿದೆ. ಹನ್ನೊಂದು ವರ್ಷಗಳಿಗೆ ಯಾವ ಮನುಷ್ಯನಾದರೂ ಸ್ತ್ರೀಯರೊಂದಿಗೆ ಸಂಯೋಗ ಮಾಡುತ್ತಾನಾ? ಶೃಂಗಾರದಲ್ಲಿ ಪಾಲ್ಗೊಳ್ಳುತ್ತಾನಾ? ಈ ಮಾತುಗಳು ವಿಡ್ಡೂರ ಅಲ್ಲವೆ! ಆ ವಿಧವಾಗಿ ಕೃಷ್ಣನನ್ನು ತಪ್ಪಾಗಿ ಬರೆದಿರುವುದರಿಂದ, ಅದರ ಆಧಾರದಿಂದ ಮನುಷ್ಯರಲ್ಲಿ ಮಾಯೆ ಗಾಢವಾಗಿ ಕೆಲಸಮಾಡಿ, ಕೃಷ್ಣನನ್ನು ಅಲ್ಲರಿ ಮನುಷ್ಯನನ್ನಾಗಿ ಲೆಕ್ಕಿಸುವಂತೆ ಮಾಡಿದೆ. ಆದ್ದರಿಂದ ಕೃಷ್ಣನ ವಿಷಯ ಬಹಳಜನ ಆಲೋಚಿಸದೆ ಹೋಗಿದ್ದಾರೆ. 90 ವರ್ಷ ವಯಸ್ಸಿನಲ್ಲಿ ಕೃಷ್ಣನು ಭಗವದ್ಗೀತೆಯನ್ನು ಹೇಳಿದ ನಂತರ, ಪುರಾಣಗಳನ್ನು ಬರೆದ ವ್ಯಾಸನು ತನ್ನ ತಪ್ಪನ್ನು ತಿಳಿದುಕೊಂಡು, ಪುರಾಣಗಳಿಗೆ ವಿರುದ್ಧವಾದ ಭಗವದ್ಗೀತೆಯನ್ನು ಸಂಸ್ಕೃತದಲ್ಲಿ ಶ್ಲೋಕಗಳ ರೂಪವಾಗಿ ಬರೆದಿದ್ದಾನೆ. ಅಂತಹ ವ್ಯಾಸನೆ ತನ್ನ ತಪ್ಪನ್ನು ತಾನು ತಿಳಿದುಕೊಂಡು ತನ್ನ ಶ್ಲೋಕಗಳಲ್ಲಿ ಕೃಷ್ಣನು ಹೇಳಿದ ಧರ್ಮಗಳನ್ನು ತಿಳಿಸಿದ್ದಾನೆ. ವೇದಪಠಣ, ತಪಸ್ಸು, ಯಜ್ಞಗಳು ಧರ್ಮಗಳಲ್ಲವೆಂದು ಅಧರ್ಮಗಳೆಂದು ತಾನು ಬರೆದ ಶ್ಲೋಕಗಳಲ್ಲಿಯೇ ಹೇಳಿದ್ದಾನೆ. ಅಷ್ಟುದೊಡ್ಡ ಕಾರ್ಯಗಳೆ ಅಧರ್ಮಗಳಾದಾಗ, ನಾವು ಮಾಡುವ ವಿನಾಯಕ ಚೌತಿಯೂ ಸಹ ಅಧರ್ಮವೇ ಆಗುತ್ತದೆ. ಆದ್ದರಿಂದ ಇಂದಿನಿಂದ ವಾಸ್ತವ ವಿಷಯವನ್ನು ತಿಳಿದುಕೊಂಡು, ವಿಶ್ವವ್ಯಾಪಿ, ಸೃಷ್ಟಿಕರ್ತನಾದ ದೇವರು, ಭಗವಂತನಾಗಿ ಕೃಷ್ಣನಾಗಿ ಬಂದಿದ್ದಾನೆಂದು, ದೇವರೇ ಭಗವಂತನಾಗಿ ಗೀತಾಜ್ಞಾನವನ್ನು ಹೇಳಿದ್ದಾನೆಂದು, ಅದೇ ಭಗವದ್ಗೀತೆಯೆಂದು

ತಿಳಿದು ಕೃಷ್ಣನನ್ನು ಆರಾಧಿಸಿ ದೇವರಿಗೆ ಹತ್ತಿರವಾಗುವುದಕ್ಕೆ ಪ್ರಯತ್ನಿಸೋಣ. ದೇವರ ಹತ್ತಿರಕ್ಕೆ ಸೇರಬೇಕೆಂದರೆ ಆತನ ವಿಳಾಸ (ಅಡ್ರಸ್) ಏನೊ ನಮಗೆ ತಿಳಿದಿಲ್ಲ. ಆ ವಿಳಾಸ ಹೇಳುವವನು ಯಾರೊ ಅವನೆ ಭಗವಂತನು, ಆ ಭಗವಂತನೆ ಕೃಷ್ಣನು. ಆದ್ದರಿಂದ ಕೃಷ್ಣನು ಶರೀರದಿಂದ ನಮ್ಮ ಮಧ್ಯದಲ್ಲಿರುವಾಗ ಆತನು ಭಗವಂತನಾದ ದೇವರೆಂದು, ಹಾಗೆ ಆತನು ನಮ್ಮ ಮಧ್ಯ ಶರೀರದಿಂದ ಇಲ್ಲದಿರುವಾಗ ದೇವರಾದ ಭಗವಂತನೆಂದು ಹೇಳಬಹುದು. ಅರ್ಥ ಆಗಲಿಲ್ಲವೇನೊ ಮತ್ತೊಂದುಸಲ ಶ್ರದ್ಧೆಯಿಂದ ಕೇಳಿರಿ. ಕೃಷ್ಣನು ಭೂಮಿ ಮೇಲಿರುವ ದ್ವಾಪರಯುಗದಲ್ಲಿ ಭಗವಂತನಾದ ದೇವರು ಎಂದೂ, ಕೃಷ್ಣನು ಭೂಮಿಮೇಲೆ ಇಲ್ಲದ ಕಲಿಯುಗದಲ್ಲಿ ದೇವರಾದ ಭಗವಂತನೆಂದು ಹೇಳಬಹುದು. ಇಲ್ಲಿಯವರೆಗು ಬಹಳಜನ ಸ್ವಾಮೀಜಿಗಳು, ಬೋಧಕರು ದೇವರಿಗೂ, ಭಗವಂತನಿಗು ವ್ಯತ್ಯಾಸ ಇಲ್ಲದೆ ಹೇಳಿದ್ದಾರೆ. ಈಗ ಹಾಗಲ್ಲದೆ ಯಾರು ದೇವರೊ, ಯಾರು ಭಗವಂತನೊ ಗುರುತಿಸಿ ಹೇಳಿಕೊಳ್ಳಬೇಕು.

ಇಲ್ಲಿಯವರೆಗೂ ಕೃಷ್ಣನ ಮೇಲೆ ನಮಗಿರುವ ಊಹಾಪೋಹಗಳನ್ನು ತೊಲಗಿಸಿ ಭಗವಂತನಾದ ಕೃಷ್ಣನನ್ನು ತಿಳಿದುಕೊಳ್ಳೋಣ. ಇಲ್ಲಿಯವರೆಗೂ ಭಗವಂತನು ಹೇಳಿದ ಜ್ಞಾನವನ್ನು ತಿಳಿಯದ ನಾವು ಆತನು ತಿಳಿಸಿದ ಸಾರಾಂಶವನ್ನು ಕುರಿತು ತಿಳಿದುಕೊಳ್ಳೋಣ. ಕೃಷ್ಣನ ಮೇಲೆ ಭಕ್ತಿ ಇರುವ ಗೋಪಿ, ಗೋಪಿಕೆಯರು ಆದಿನವೇ ಅಲ್ಲ, ಈದಿನ ಸಹ ಇದ್ದಾರೆಂದು ನಿರೂಪಿಸೋಣ. ಕೃಷ್ಣನ ಮೇಲೆ ಭಕ್ತಿ ಭಾವವನ್ನು ಬೆಳೆಸಿಕೊಂಡು ಅಪಾರ್ಥ ಭಾವವನ್ನು ಇಲ್ಲದಂತೆ ಮಾಡಿಕೊಳ್ಳೋಣ. ಭೂಮಿ ಮೇಲೆ ಕೃಷ್ಣನು ಒಬ್ಬನೇ ಭಗವಂತನೆಂದು ಇತರರಿಗೂ ತಿಳಿಸೋಣ. ಆ ನೇಪಥ್ಯದಲ್ಲಿಯೇ ವಿನಾಯಕ ಚೌತಿಯನ್ನು ಬಿಟ್ಟು, ಕೃಷ್ಣಾಷ್ಟಮಿಯನ್ನು ಮಾಡೋಣ. ನಾವು ಮಾಡುವುದಲ್ಲದೆ ಎಲ್ಲರಿಗೂ ಹೇಳಿ ಮಾಡಿಸೋಣ. ಹಿಂದೂತ್ವ ಮತವಲ್ಲ ಪಥ (ದಾರಿ) ಎಂದು ತಿಳಿಸೋಣ. ಭೂಮಿಮೇಲೆ ಯಾವ ಮತದವನಾದರೂ ಈ ಪಥದೊಳಗೆ ಬರಬೇಕಾಗಿದ್ದೆ ಎಂದು ತಿಳಿಸೋಣ. ನಿಮ್ಮ ಮತದಲ್ಲಿ ಯಾವ ದೇವರಿದ್ದಾನೊ

ಆ ದೇವರೆ ಈ ಭಗವಂತನೆಂದು ಅರ್ಥವಾಗುವಂತೆ ಮಾಡೋಣ. ಇತರರನ್ನು ಬದಲಿಸಬೇಕೆಂದರೆ ಮೊದಲು ನಾವು ಬದಲಾಗಬೇಕು. ನಾವು ಬದಲಾದರೆ ನಮ್ಮ ದಾರಿಯನ್ನೆ ಇತರರು ಅನುಸರಿಸುತ್ತಾರೆ. ಆದ್ದರಿಂದ ಮೊದಲು ನಾವು ಬದಲಾಗುವುದಕ್ಕೆ ಕೃಷ್ಣಾಷ್ಟಮಿಯಿಂದಲೇ ಮೊದಲು ಮಾಡೋಣ.



# ಕೃಷ್ಣನು ಯಾದವನಾ, ಮಾಧವನಾ?

ಕೃಷ್ಣನ ತಂದೆ ವಸುದೇವನು, ತಾಯಿ ದೇವಕಿದೇವಿ. ತಂದೆ ಹೆಸರಿನಲ್ಲಿ ಎರಡು ಪದಗಳು ತಾಯಿ ಹೆಸರಿನಲ್ಲಿ ಎರಡು ಪದಗಳು ಇವೆ. ಇಬ್ಬರ ಹೆಸರುಗಳಲ್ಲಿ ಮೊದಲ ಪದಗಳನ್ನು ನೋಡಿದರೆ ತಂದೆ ಹೆಸರಿನಲ್ಲಿ 'ವಸು' ಪದವು, ತಾಯಿ ಹೆಸರಿನಲ್ಲಿ 'ದೇವಕಿ' ಎನ್ನುವ ಪದಗಳು ಇವೆ. ಹಾಗೆಯೇ ಕೊನೆಯ ಪದಗಳನ್ನು ನೋಡಿದರೆ ತಂದೆ ಹೆಸರಿನಲ್ಲಿ 'ದೇವನು', ತಾಯಿ ಹೆಸರಿನಲ್ಲಿ 'ದೇವಿ' ಇದೆ. ದೇವರು ಎಂದರೆ ಆಧ್ಯಾತ್ಮಿಕ ರೀತ್ಯಾ ಪರಮಾತ್ಮ ಎಂದೂ, ದೇವಿ ಎಂದರೆ ಪ್ರಕೃತಿ ಎಂದೂ ಅರ್ಥ ಇದೆ. ಇದನ್ನು ಅನುಸರಿಸಿ ನೋಡಿದರೆ ಕೃಷ್ಣನಿಗೆ ಶರೀರವೊಂದರ ತಂದೆತಾಯಿಯರು ಸಹ ಪ್ರಕೃತಿ ಪರಮಾತ್ಮರೆಂಬ ಅರ್ಥವಿರುವ ಹೆಸರುಗಳಿಂದಲೇ ಇದ್ದಾರೆಂದು ತಿಳಿಯುತ್ತಿದೆ. ಇವು ಕೃಷ್ಣನ ಬಾಹ್ಯ ಶರೀರವೊಂದರ ಬಾಹ್ಯ ತಂದೆ ತಾಯಿಯರೊಂದರ ಪ್ರತ್ಯೇಕವಾದ ಹೆಸರುಗಳು. ಕೃಷ್ಣನ ತಂದೆ ವಸುದೇವ ಯದುವಂಶದವನು. ತಾಯಿ ದೇವಕೀದೇವಿ ಭೋಜ ವಂಶದಲ್ಲಿ ಹುಟ್ಟಿದ್ದಾಳೆ. ವಸುದೇವನು ಆದಿನ ಇರುವ ಸೂರ್ಯ, ಚಂದ್ರ ವಂಶಗಳೆನ್ನುವ ಎರಡು ಗುಂಪುಗಳಲ್ಲಿ ಚಂದ್ರವಂಶ ಗುಂಪಿಗೆ ಸೇರಿದ ಕ್ಷತ್ರಿಯನು. ಚಂದ್ರವಂಶ ಕ್ಷತ್ರಿಯರಲ್ಲಿ ವಸುದೇವರದು ಯದುವಂಶ. ವಸುದೇವನಿಗಿರುವ ಇಬ್ಬರು ಪತ್ನಿಯರಲ್ಲಿ ದೊಡ್ಡ ಹೆಂಡತಿಯ ಹೆಸರು ರೋಹಿಣಿ, ಎರಡನೆ ಹೆಂಡತಿ ಹೆಸರು ದೇವಕಿದೇವಿ. ದೊಡ್ಡ ಹೆಂಡತಿ ರೋಹಿಣಿಗೆ ಹುಟ್ಟಿದವನು ಬಲರಾಮನು. ಎರಡನೆ ಹೆಂಡತಿಗೆ ಹುಟ್ಟಿದವನು ಕೃಷ್ಣನು. ಕೃಷ್ಣನು ಹುಟ್ಟಿದ ನಂತರ ಗಂಟೆಗೆ ಗೋಕುಲದಲ್ಲಿನ ನಂದಗಾವ್‌ನಲ್ಲಿ

ನಂದನ ಮನೆಯೊಳಗೆ ವಸುದೇವನ ಮೂಲಕ ಹೋಗಿದ್ದಾನೆ. ನಂದನು ಆ ಊರಿನಲ್ಲಿ ದೊಡ್ಡ ಮನುಷ್ಯ ಮತ್ತು ಪಾಳೆಗಾರನು. ಆದ್ದರಿಂದ ಆ ಊರಿಗೆ ನಂದಗಾವ್ ಎಂಬ ಹೆಸರು ಇತ್ತು. ಒಂದು ರಾಜ್ಯಕ್ಕೆ ಅಧಿಪತಿಯಾದವನನ್ನು ಚಕ್ರವರ್ತಿ ಎಂದು, ಆತನ ಕೆಳಗೆ ಸ್ವಲ್ಪ ಕ್ಷೇತ್ರದಲ್ಲಿ ಜಿಲ್ಲೆವಾರಿಯಾಗಿ ಕೆಲಸಮಾಡುವ ಅಧಿಪತಿಗಳನ್ನು ಸಾಮಂತ ರಾಜರೆಂದು, ಒಂದು ಊರಿಗೆ ಮಾತ್ರ ದೊಡ್ಡ ದಾಗಿರುವ ಅಧಿಪತಿಯನ್ನು ಪಾಳೆಗಾರನೆಂದು ಪೂರ್ವದಲ್ಲಿ ಕರೆಯುತ್ತಿದ್ದರು. ಆ ಲೆಕ್ಕ ಪ್ರಕಾರ ಕಂಸನೆಂಬ ರಾಜನ ಕೆಳಗೆ ಪಾಳೆಗಾರನಾಗಿ ನಂದನು ಇರುತ್ತಿದ್ದನು. ನಂದನು ಗೊಲ್ಲರ ಕುಲಕ್ಕೆ ಸೇರಿದವನು. ವಸುದೇವನು ಕ್ಷತ್ರಿಯರ ಕುಲಕ್ಕೆ ಸೇರಿದವನು. ಕಂಸನ ತಂಗಿ ದೇವಕಿದೇವಿ. ಆದ್ದರಿಂದ ಕಂಸನು ಕೃಷ್ಣನಿಗೆ ಸೋದರ ಮಾವ ಆಗುತ್ತಾನೆ. ವಸುದೇವನು ಹುಟ್ಟಿಸಿದ ತಂದೆಯಾಗಿದ್ದು, ನಂದನು ಕೃಷ್ಣನನ್ನು ಬೆಳೆಸಿದ ತಂದೆ ಆಗುತ್ತಾನೆ.

ಕೃಷ್ಣನು ಹುಟ್ಟುವುದಕ್ಕಿಂತ ಮುಂಚೆ ಯಾದವ್ ಎನ್ನುವ ಹೆಸರು ಎಲ್ಲಿಯೂ ಇಲ್ಲ. ಕೃಷ್ಣನು ಮಧುರೆಯನ್ನು ಬಿಟ್ಟು ದ್ವಾರಕವನ್ನು ಸೇರಿದ ನಂತರ, ಮೊಟ್ಟಮೊದಲು ಭೀಷ್ಮನು ಕೃಷ್ಣನನ್ನು ಯಾದವಾ ಎಂದು ಕರೆದಿದ್ದಾನೆ. ಕೃಷ್ಣನು ರುಕ್ಮಿಣಿಯನ್ನು 32 ವರ್ಷಗಳ ವಯಸ್ಸಿನಲ್ಲಿ ಮದುವೆ ಮಾಡಿಕೊಂಡಾಗ ಒಂದು ಸಂದರ್ಭದಲ್ಲಿ ಕೃಷ್ಣನನ್ನು ಕುರಿತು ಭೀಷ್ಮನು ನುಡಿದಮಾತು "ಕೃಷ್ಣನು ಸಾಮಾನ್ಯನು ಅಲ್ಲ, ಆತನು ಯಾದವನು" ಎಂದಿದ್ದಾನೆ. ಕೃಷ್ಣನ ಜೀವನದಲ್ಲಿ ಕೃಷ್ಣನನ್ನು ಚೆನ್ನಾಗಿ ಅರ್ಥಮಾಡಿಕೊಂಡ ವ್ಯಕ್ತಿ ಭೀಷ್ಮನು ಒಬ್ಬನೆ. ಆದ್ದರಿಂದ ಭೀಷ್ಮನು ಮೊದಲಿನಿಂದ ಕೃಷ್ಣನನ್ನು ಪ್ರತ್ಯೇಕವಾಗಿ ನೋಡುತ್ತಿದ್ದನು. ಕೃಷ್ಣನು ಸಾಕ್ಷಾತ್ತು ದೇವರ ಅಂಶವಾದ ಭಗವಂತನೆಂದು, ಆ ಕಾಲದಲ್ಲಿ ಭೀಷ್ಮನು ಹೊರತು ಯಾರೂ ಗ್ರಹಿಸಲಿಲ್ಲ. ಹಾಗೆ ತಿಳಿದವನು ಭೀಷ್ಮನು, ಆದ್ದರಿಂದ ಆತನ ಮರಣದಲ್ಲಿ ತನಗೆ ಮೋಕ್ಷವನ್ನು ಕೊಡೆಂದು ನೇರವಾಗಿ ಕೃಷ್ಣನನ್ನು ಕೇಳಿದ್ದಾನೆ. ಹಾಗೆ ಕೇಳಿರುವುದರಿಂದ ಮೋಕ್ಷಕ್ಕೆ ಅಧಿಪತಿ ದೇವರೆಂದು, ಆ ದೇವರೆ ಈ ಭಗವಂತನೆಂದು ಭೀಷ್ಮನು ಗುರುತಿಸಿರುವಂತೆ ನಮಗೆ ಅರ್ಥವಾಗುತ್ತಿದೆ. ಭೀಷ್ಮನು

ಕೃಷ್ಣನನ್ನು ಗುರುತಿಸಿದ್ದಾನೆ. ಆದ್ದರಿಂದ ಕೃಷ್ಣನನ್ನು ಯಾದವ ಎಂದು ಸಂಬೋಧಿಸಿದ್ದಾನೆ. ಆ ವಿಧವಾಗಿ **"ಯಾದವ"** ಎನ್ನುವ ಪದ ಹುಟ್ಟಿದೆಯೆಂದು ತಿಳಿಯುತ್ತಿದೆ.

ಕೃಷ್ಣನಿಂದ ಯಾದವ ಎನ್ನುವ ಶಬ್ದ ಭೂಮಿಮೇಲಕ್ಕೆ ಬಂದಿದೆ. ಕೃಷ್ಣನು ಗೊಲ್ಲವಾಡೆಗಳಲ್ಲಿ ತಾನು ಸಹ ಗೊಲ್ಲಕುಲಸ್ಥನಾಗಿ ತಿರುಗಿರುವುದರಿಂದ, ಕೃಷ್ಣನು ಗೊಲ್ಲ ಕುಲಕ್ಕೆ ಸೇರಿದವನೆಂದು ಎಲ್ಲರೂ ತಿಳಿದುಕೊಳ್ಳುವುದು ನಡೆದಿದೆ. ಉತ್ತರದೇಶದಲ್ಲಿನ ಗೊಲ್ಲರೆಲ್ಲರೂ ತಮ್ಮ ಹೆಸರಿನ ಕೊನೆಯಲ್ಲಿ 'ಯಾದವ್' ಎನ್ನುವ ಪದವನ್ನು ತಗಲಿಸಿಕೊಂಡಿದ್ದಾರೆ. 30 ಅಥವಾ 40 ವರ್ಷಗಳ ಕೆಳಗಿನವರೆಗು ಆಂಧ್ರಪ್ರದೇಶದಲ್ಲಿನ ಗೊಲ್ಲಕುಲಸ್ಥರೆಲ್ಲರು ತಾವು ಗೊಲ್ಲರೆಂದು ತಮ್ಮ ಕುಲವನ್ನು ಕುರಿತು ಹೇಳಿಕೊಳ್ಳುತ್ತಿದ್ದರು. ಈ ಮಧ್ಯ 30 ವರ್ಷಗಳಿಂದ ನಾವು ಯಾದವರೆಂದು, ತಮ್ಮನ್ನು ಗೊಲ್ಲರೆಂದು ಕರೆಯಬಾರದೆಂದು ಹೇಳುತ್ತಿದ್ದಾರೆ. ಈಗಾಗಲೇ ಮೂಲೆ ಮೂಲೆಗೂ ಹಳ್ಳಿಗಳಲ್ಲಿ ಯಾದವ ಎನ್ನುವ ಹೆಸರನ್ನು ತಿಳಿಯದ ಗೊಲ್ಲರು ತಮ್ಮ ಕುಲವನ್ನು ಕುರಿತು ಹೇಳುವಾಗ ನಾವು ಗೊಲ್ಲರೆಂದು ಹೇಳುತ್ತಿದ್ದಾರೆ. ಕೃಷ್ಣನು ಗೊಲ್ಲವಾಡೆಗಳಲ್ಲಿ ಚಿಕ್ಕಂದಿನಲ್ಲಿ ತಿರುಗಿದ್ದಾನೆಂದು, ಗೊಲ್ಲರೆಲ್ಲರೂ ಆತನನ್ನು ಗೌರವಿಸುತ್ತಿದ್ದರೆಂದು, ಗೊಲ್ಲ ವೃದ್ಧರು ಕೃಷ್ಣನನ್ನು ಕುರಿತು ವಿಶೇಷವಾಗಿ ಹೇಳಿಕೊಳ್ಳುತ್ತಿದ್ದರೆಂದು ಭಾರತ ದಲ್ಲಿಯೂ, ಭಾಗವತ ದಲ್ಲಿಯೂ ಬರೆದಿದ್ದಾರೆ. ಇದನ್ನೆಲ್ಲ ಗಮನಿಸಿದರೆ ಗೊಲ್ಲ ಎನ್ನುವುದು ಒಂದು ಕುಲವೆಂದು ತಿಳಿಯುತ್ತಿದೆ. ಇಂದು ಗೊಲ್ಲ ಕುಲಸ್ಥರೆನ್ನುವ ಗೊಲ್ಲರು ಅಂದರೆ ಅದೇನೋ ಕಡಿಮೆಮಾಡಿ ಮಾತನಾಡಿದಂತೆ ಅವರು ದುಃಖಪಡುತ್ತಿದ್ದಾರೆ. ನಮ್ಮನ್ನು ಗೊಲ್ಲರೆಂದು ಹೀನವಾಗಿ ನೋಡುತ್ತಿದ್ದಾರೆಂದು, ನಾವು ಗೊಲ್ಲರು ಅಲ್ಲ, ಯಾದವರೆಂದು ಹೇಳಿಕೊಳ್ಳುತ್ತಿ ದ್ದಾರೆ. ನಿಜಕ್ಕೆ ದೇವರು ಕುಲಗಳನ್ನು ಏರ್ಪಡಿಸಲಿಲ್ಲ, ಮನುಷ್ಯರು ಇಟ್ಟುಕೊಂಡಿರುವವೆ ಕುಲಗಳು. ಭಗವದ್ಗೀತೆ ಜ್ಞಾನದ ಪ್ರಕಾರ ಮನುಷ್ಯರನ್ನು ನಾಲ್ಕು ವಿಧಗಳಾಗಿ ವಿಭಜಿಸಬಹುದು 1) ತಾಮಸರು 2) ರಾಜಸರು 3) ಸಾತ್ತ್ವಿಕರು 4) ಯೋಗಿಗಳು ಎನ್ನುವ

ನಾಲ್ಕು ವಿಧಗಳಾಗಿ ಹೇಳಬಹುದು. ಇದನ್ನನುಸರಿಸಿ ಕುಲಗಳು ದೇವರ ಲೆಕ್ಕದಲ್ಲಿ ಇಲ್ಲವೆಂದು, ಮನುಷ್ಯರು ಕೆಲವರು **"ಚಾತುರ್ವರ್ಣ್ಯಮ್"** ಎಂದು ಭಗವಂತನು ಗೀತೆಯಲ್ಲಿ ಹೇಳಿದ ವಾಕ್ಯವನ್ನು ವಕ್ರೀಕರಿಸಿ ತಪ್ಪು ಭಾವನೆಯಲ್ಲಿ 1) ಬ್ರಾಹ್ಮಣರು 2) ವೈಶ್ಯರು 3) ಕ್ಷತ್ರಿಯರು 4) ಶೂದ್ರರು ಎಂದು ಹೇಳಿದ್ದಾರೆ. ನಾಲ್ಕನೆ ವಿಧದ ಶೂದ್ರರಲ್ಲಿ ಚಿಕ್ಕ ಚಿಕ್ಕ ಕುಲಗಳೆಲ್ಲವನ್ನು ಸೇರಿಸಿದ್ದಾರೆ. ಮಾಡುವ ಕೆಲಸವನ್ನನುಸರಿಸಿ ಅವರೆಲ್ಲರನ್ನು ಇಂತಹ ವರ್ಗದವರೆಂದು ಕೆಲಸದ ನಿಮಿತ್ತ ಹೇಳಿದ ಹೆಸರೇ ಹೊರತು ಅದು ಕುಲ ಎಂದುಕೊಳ್ಳುವುದು ತಪ್ಪು. ಇಲ್ಲಿ ಸಹ ಕುರಿಗಳನ್ನು, ಹಸುಗಳನ್ನು (ಗೋವು) ಕಾಪಾಡುವವರನ್ನು (ಕಾಯುವವರು) ಗೊಲ್ಲರೆನ್ನುವುದು ನಡೆಯುತ್ತಿದೆ ಹೊರತು ಬೇರೆಯಲ್ಲ. ಇಲ್ಲಿ ಕುಲ ಎನ್ನುವ ಹೆಸರು ಒಂದು ವರ್ಗಕ್ಕೆ ಬಂದಿದೆ ಆದ್ದರಿಂದ ಅದನ್ನು ಕುರಿತು ತಿಳಿದು ಕೊಳ್ಳೋಣ. ಒಂದು ಕೆಲಸವನ್ನು ಮಾಡುವವರನ್ನು ಒಂದು ಗುಂಪಾಗಿ ಲೆಕ್ಕಿಸಿ ಆ ಗುಂಪಿಗೆ ಗುರುತಾಗಿ ಒಂದು ಹೆಸರು ಇಡುವುದು ನಡೆದಿದೆ. ಪೂರ್ವದಲ್ಲಿ ಹಾಗೆ ಇಂತಹ ಕೆಲಸ ಮಾಡುವವರು ಎಂದು ಗುರುತಿಗಾಗಿ ಇಟ್ಟುಕೊಂಡ ಹೆಸರನ್ನು ಕಾಲಕ್ರಮವಾಗಿ ಕುಲ ಎಂದುಕೊಳ್ಳುವುದು ನಡೆದಿದೆ. ಅಷ್ಟೇ ಹೊರತು ಕುಲ ವ್ಯವಸ್ಥೆಯನ್ನು ಯಾವ ದೇವರೂ ಸೃಷ್ಟಿಸಲಿಲ್ಲ.

ಇಲ್ಲಿ ಒಂದು ವರ್ಗದವರನ್ನು ಗೊಲ್ಲರೆಂದು, ಗೊಲ್ಲರೆಲ್ಲರೂ ಯಾದವರೆಂದು ಕರೆಯುತ್ತಿರುವುದು ಈ ದಿನ ನಡೆಯುತ್ತಿದೆ. ಈಗ ಗೊಲ್ಲ, ಯಾದವ ಎನ್ನುವ ಪದಗಳನ್ನು ವಿಶಧೀಕರಿಸಿಕೊಂಡು ನೋಡಬೇಕು. **ಕಾಪಾಡುವುದು** ಎನ್ನುವ ಪದದಿಂದ ಹುಟ್ಟಿರುವುದೆ **ಕಾಯುವುದು** ಎನ್ನುವ ಪದ. ಕುರಿಗಳನ್ನು ಕಾಯುವವನನ್ನು ಅಥವಾ ಕುರಿಗಳನ್ನು ಕಾಪಾಡುವವನನ್ನು ಕುರಿಗಳ ಕಾಪರಿ ಎನ್ನುತ್ತೇವೆ. ಅಂತಹ ಕುರಿಗಳ ಕಾಪರಿಯನ್ನೆ "ಗೊಲ್ಲನು" ಎಂದು ಕರೆಯುವುದು ನಡೆಯುತ್ತಿದೆ. ದ್ವಾಪರಯುಗದಲ್ಲಿ ಸಾಕ್ಷಾತ್ತು ಭಗವಂತನೆ ಗೊಲ್ಲಕುಲದಲ್ಲಿ ಗೊಲ್ಲನಾಗಿ ಕಾಣಿಸಿದ್ದಾನೆ. ಸಾಕ್ಷಾತ್ತು ಭಗವಂತನೆ ಆಯ್ಕೆ ಮಾಡಿಕೊಂಡು ಬಂದಿರುವ ಕುಲ ಉಳಿದ ಎಲ್ಲಾ ಕುಲಗಳಿಗಿಂತ ಉತ್ತಮ

ವಾದುದಾಗಿಯೇ ಹೇಳಬಹುದು. ಅಷ್ಟೇ ಅಲ್ಲದೆ ಜ್ಞಾನವಿಧಾನದಲ್ಲಿ ಯಾವ ಕುಲಕ್ಕೂ ಇಲ್ಲದ ಪ್ರತ್ಯೇಕತೆ ಗೊಲ್ಲಕುಲಕ್ಕೆ ಇದೆ, ಆ ಪ್ರತ್ಯೇಕತೆ ಗೊಲ್ಲರಿಗೂ ಸಹ ತಿಳಿದಿಲ್ಲ. ಆದ್ದರಿಂದ ತಮ್ಮನ್ನು ಗೊಲ್ಲರೆಂದು ಕರಿಯಬೇಡಿ. ಯಾದವರೆಂದು ಕರೆಯಿರಿ ಎಂದು ಹೇಳುತ್ತಿದ್ದಾರೆ. ಸರಿ ಹಾಗೆ ಯಾದವರೆಂದು ಕರೆದರೂ ಯಾದವರೆಂದರೇ ವಿವರ ಏನೆಂದು ಸಹ ತಿಳಿದಿಲ್ಲ. ಹಾಗೆ ಗೊಲ್ಲರೆನ್ನುವು ದಕ್ಕಾಗಲಿ, ಇತ್ತ ಯಾದವರೆನ್ನುವುದಕ್ಕಾಗಲಿ ಅರ್ಥ ತಿಳಿಯದ ಯಾದವರು ಅಥವಾ ಗೊಲ್ಲರು ಇದ್ದಾರೆಂದು ತಿಳಿಯುತ್ತಿದೆ. ಅವರ ಹೆಸರಿಗೆ ಅರ್ಥ ಅವರಿಗೆ ತಿಳಿಯದಿರುವುದಕ್ಕೆ ಕಾರಣ ಒಂದೇ ಒಂದು ದೈವಜ್ಞಾನ ಇಲ್ಲದಿರುವುದೇ ಎಂದು ತಿಳಿಯುತ್ತಿದೆ. ಯಾದವರೇ ಅಲ್ಲ ಎಲ್ಲಾ ಕುಲದವರಿಗು ದೈವಜ್ಞಾನ ತಿಳಿಯದಿರುವುದರಿಂದ ಕುಲವ್ಯವಸ್ಥೆಯಲ್ಲಿ ಒಬ್ಬರಿಗೊಬ್ಬರು ಚಿಕ್ಕದುದೊಡ್ಡದು ಎಂದುಕೊಳ್ಳುತ್ತಿದ್ದಾರೆ. ಆದರೆ ನಿಜಕ್ಕೆ ದೇವರು ಕುಲಗಳ ವ್ಯವಸ್ಥೆಯನ್ನು ಏರ್ಪಡಿಸಲಿಲ್ಲ. ಮನುಷ್ಯರು ಏರ್ಪಡಿಸಿಕೊಂಡಿರುವವೇ ಕುಲಗಳೆಂದು ಹೇಳಿಕೊಂಡರೂ ಅದರಲ್ಲಿ ಗೊಲ್ಲಕುಲ ಒಂದು. ಇಂತಹ ಕುಲಗಳು ಭೂಮಿ ಮೇಲೆ ಲೆಕ್ಕವಿಲ್ಲದಷ್ಟು ಇವೆ. ಎಷ್ಟೋ ಕುಲಗಳಲ್ಲಿ ನನ್ನದು ಗೊಲ್ಲ ಕುಲ ಎಂದು ತಲೆ ಎತ್ತಿ ಹೇಳಿಕೊಳ್ಳುವ ಪ್ರತ್ಯೇಕತೆ ಆ ಕುಲದಲ್ಲಿ ಇರುವಾಗ, ನಮ್ಮನ್ನು ಗೊಲ್ಲರೆನ್ನುವುದು ಕಡಿಮೆಮಾಡಿ ಮಾತನಾಡಿದಂತೆ ಎಂದು ಆ ಕುಲಸ್ಥರು ಹೇಳಿಕೊಳ್ಳುವುದು ನೋಡಿದರೆ, ಆ ಕುಲದಲ್ಲಿ ಇದ್ದರೂ, ಆ ಕುಲವೊಂದರ ಪ್ರತ್ಯೇಕತೆ ಅವರಿಗೆ ತಿಳಿಯದಂತೆ ಹೋಗಿದೆಯೆಂದು ಅರ್ಥವಾಗುತ್ತಿದೆ. ಆದ್ದರಿಂದ ಗೊಲ್ಲ ಕುಲವನ್ನು ಕುರಿತು ಸ್ವಲ್ಪ ವಿವರಿಸಿಕೊಳ್ಳೋಣ.

ಎಲ್ಲಾ ಪ್ರಾಣಿಗಳಂತೆ ಚುರುಕುತನ ಬುದ್ಧಿ ಇಲ್ಲದಿರುವವು ಕುರಿಗಳು, ನಂತರ ಇದು ಮಾಡಬೇಕೆಂದು ನಿರ್ಣಯಿಸಿಕೊಳ್ಳುವ ಚುರುಕುತನ ಕುರಿಗಳಿಗೆ ಇಲ್ಲ. ಮುಂದಿನ ಕುರಿ ಯಾವಕಡೆ ಹೋದರೆ ಹಿಂದಿನ ಕುರಿ ಅದನ್ನು ನೋಡಿ ಅದು ಹೋದಂತೆ ಹೋಗುತ್ತದೆ. ಆದರೆ ಅದರಹಿಂದೆ ಹೋಗಬಹುದಾ, ಹೋಗಬಾರದಾ ಎಂದು ಯೋಚಿಸುವಶಕ್ತಿ ಅದಕ್ಕಿರುವುದಿಲ್ಲ. ಹೊರಗಿನ

ಪ್ರಪಂಚದಲ್ಲಿಯೂ ಸಹ ಯಾರಾದರೂ ತಿಳುವಳಿಕೆ ಕಡಿಮೆ ಇರುವವರಿದ್ದರೆ, ಅವನನ್ನು ಕುರಿಗೆ ಸಮಾನವಾಗಿ ಹೋಲಿಸಿ ಹೇಳುತ್ತಿರುತ್ತಾರೆ. ಕುರಿಗಳಿಗೆ ಸ್ವತಃವಾಗಿ ಆಲೋಚಿಸುವ ಶಕ್ತಿ ಇರುವುದಿಲ್ಲ. ಮುಂದಿರುವ ಒಂದು ಕುರಿ ಬಾವಿಯೊಳಗೆ ದುಮುಕಿದರೆ ಅದರ ಹಿಂದಿರುವ ಕುರಿಗಳೆಲ್ಲ ಬಾವಿಯೊಳಗೆ ದುಮುಕುತ್ತವೆ. ಮುಂದಿನ ಕುರಿ ತಿಳಿಯದೆ ದುಮುಕಿದೆ, ಹಾಗೆ ದುಮುಕಿದರೆ ಅಪಾಯ ಎಂದು ಹಿಂದಿರುವವು ಆಲೋಚಿಸುವುದಿಲ್ಲ, ಆದ್ದರಿಂದ ಕುರಿಗಳಿಗೆ ತಪ್ಪದೆ ಕಾಪರಿ (ಕಾಯುವವ) ಅಗತ್ಯ. ಕುರಿಗಳನ್ನು ಸಕ್ರಮವಾಗಿ ನಡೆಸುವವನನ್ನು ಕುರಿಗಳಕಾಪರಿ ಎನ್ನುತ್ತಾರೆ. ಕುರಿಗಳ ಕಾಪರಿ ಚೆನ್ನಾಗಿ ತಿಳುವಳಿಕೆಯುಳ್ಳವನೆಂದು, ಅವುಗಳಿಗೆ ಅಪಾಯ ನಡೆಯದಂತೆ ಹೇಗೆ ಕಾಪಾಡಬೇಕೊ ಚೆನ್ನಾಗಿ ತಿಳಿದವನೆಂದು, ಎಲ್ಲರಿಗೂ ತಿಳಿಯುತ್ತದೆ. ರಾತ್ರಿ ವೇಳೆ ನರಿ, ತೋಳಗಳಿಂದ, ಹಗಲು ಸಮಯದಲ್ಲಿ ಉಳಿದ ಪ್ರಮಾದಗಳಿಂದ ಕಾಪಾಡುವವನನ್ನು ಕುರಿಗಳ ಕಾಪರಿ ಎನ್ನುತ್ತೇವೆ. ಕುರಿಗಳ ಕಾಪರಿ ಕೆಲಸವನ್ನು ಮಾಡುವವರನ್ನೆಲ್ಲ 'ಗೊಲ್ಲರು' ಎಂದು ಕರೆಯುತ್ತಿದ್ದರು. ಕಾಲಕ್ರಮವಾಗಿ ಆ ಪದ 'ಗೊಲ್ಲದವರಾಗಿ' ಬದಲಾಗಿ ಹೋಗಿದೆ. ಈ ಗೊಲ್ಲಕುಲಕ್ಕೆ ಆಧ್ಯಾತ್ಮಿಕ ಜ್ಞಾನಕ್ಕೆ ಸಂಬಂಧ ಇರುವಂತೆ ದೇಶದಲ್ಲಿನ ಯಾವ ಕುಲಕ್ಕು ಇಲ್ಲ. ಆದ್ದರಿಂದ ದೇವದೇವರಾದ ಪರಮಾತ್ಮ ಭಗವಂತನಾಗಿ ಭೂಮಿಮೇಲಕ್ಕೆ ಬಂದಾಗ ಪ್ರತ್ಯೇಕಿಸಿ ಗೊಲ್ಲಕುಲವನ್ನೇ ಆಯ್ಕೆಮಾಡಿಕೊಂಡು, ಆ ಕುಲದಲ್ಲಿಯೇ ಬೆಳೆದು ತಾನುಕೂಡ ಗೊಲ್ಲನೆನಿಸಿಕೊಂಡಿದ್ದಾನೆ. ಕೃಷ್ಣನು ಹುಟ್ಟಿರುವುದು ಚಂದ್ರವಂಶ ಕ್ಷತ್ರಿಯರಾದ ಯದುವಂಶಕ್ಕೆ ಸೇರಿದ ವಸುದೇವನಿಗೆ ಹುಟ್ಟಿದವನಾದರೂ, ಹುಟ್ಟಿದ ನಂತರ ಗಂಟೆಗೆ ಗೋಕುಲವಂಶಕ್ಕೆ ಸೇರಿದ ನಂದನಿಗೆ ಪುತ್ರನಾಗಿ ನಂದಗಾವ್‌ಗೆ ಬಂದಿದ್ದಾನೆ. ಅಲ್ಲಿರುವ ಗೊಲ್ಲ ಬಾಲಕರರೊಂದಿಗೆ ಕಲೆತು ಬೆರೆತು ತಿರುಗಿ, ತಾನು ಕೂಡ ಗೊಲ್ಲ ಕುಲಕ್ಕೆ ಸೇರಿದವನಾಗಿ ಕಾಣಿಸಿದ್ದಾನೆ. ಭಗವಂತನಾದ ಕೃಷ್ಣನು ಹಾಗೆ ಗೊಲ್ಲನಾಗಿ ಕಾಣಿಸುವುದೇಕೆ ಎಂದು ಆಲೋಚಿಸಿದರೆ, ಹಾಗೆ ಆತನು ಕಾಣಿಸುವುದಕ್ಕೆ ಆಧ್ಯಾತ್ಮಿಕಕ್ಕೆ ಸ್ವಲ್ಪ ಸಂಬಂಧ ಇದೆಯೆಂದು ತಿಳಿಯುತ್ತಿದೆ. ಅದು ಹೇಗೆಂದರೆ!

ಜ್ಞಾನದಲ್ಲಿ ಪ್ರಪಂಚ ಜ್ಞಾನ, ಪರಮಾತ್ಮ ಜ್ಞಾನ ಎನ್ನುವ ಎರಡು ವಿಧಗಳ ಜ್ಞಾನಗಳಿವೆಯೆಂದು ಇದಕ್ಕು ಮೊದಲೆ ಬಹಳಸಲ ಹೇಳಿದ್ದೇವೆ. ಪ್ರಪಂಚ ಜ್ಞಾನದಲ್ಲಿ ಬಹಳ ತಿಳುವಳಿಕೆ ಇಲ್ಲದಿರುವವು, ಬಹಳ ಅವಿವೇಕವಾಗಿ, ಅನಾಲೋಚಿತವಾಗಿ ಪ್ರವರ್ತಿಸುವವು ಕುರಿಗಳೆಂದು, ಅವುಗಳನ್ನು ಬುದ್ಧಿ ಕಡಿಮೆ ಇರುವವರಿಗೆ ಗುರುತಿಗಾಗಿ ಅಥವಾ ನಮೂನೆಯಾಗಿ ಹೇಳಿಕೊಂಡಿದ್ದೇವೆ. ಅವು ಮೂಢವಾಗಿ ಪ್ರವರ್ತಿಸುತ್ತವೆಂದು, ಅವುಗಳಿಗೆ ಒಬ್ಬ ಕಾಪರಿ ಅಗತ್ಯ ಎಂದು ಸಹ ಹೇಳಿಕೊಂಡಿದ್ದೇವೆ. ಪ್ರಪಂಚ ಜ್ಞಾನದಲ್ಲಿ ಪೂರ್ತಿ ಮೂಢವಾಗಿ ಪ್ರವರ್ತಿಸುವವು ಕುರಿಗಳಾಗಿದ್ದು, ಪರಮಾತ್ಮ ಜ್ಞಾನದಲ್ಲಿ ಪೂರ್ತಿ ಮೂಢವಾಗಿ, ಅಜ್ಞಾನವಾಗಿ, ಅನಾಲೋಚಿತವಾಗಿ, ಅವಿವೇಕವಾಗಿ ಪ್ರವರ್ತಿಸುವವನು ಮಾನವನು. ಪ್ರಪಂಚ ಜ್ಞಾನದಲ್ಲಿ ಒಂದು ಕುರಿ ಯಾವಕಡೆ ಹೋದರೆ ಆಕಡೆ, ಯೋಚಿಸದಂತೆ ಎಲ್ಲ ಕುರಿಗಳು ಅದರಹಿಂದೆ ಹೋಗುವಹಾಗೆ, ಮನುಷ್ಯನು ಸಹ ಪರಮಾತ್ಮ ಜ್ಞಾನದಲ್ಲಿ ಸ್ವಲ್ಪವೂ ಯೋಚಿಸದೆ ಕುರಿಗಳಂತೆ ಪ್ರವರ್ತಿಸುತ್ತಿದ್ದಾನೆ. ದೇವರು ಕೋಳಿ ಮೊಟ್ಟೆಯಂತೆ ಇದ್ದಾನೆಂದು ಒಬ್ಬರು ಹೇಳಿದರೆ, ಅದನ್ನು ಕೇಳಿದವನು ಯಾವಮಾತ್ರ ಯೋಚಿಸದಂತೆ, ಅವನು ಸಹ ದೇವರು ಮೊಟ್ಟೆಯಂತೆ ಇದ್ದಾನೆಂದು ಹೇಳುವುದಕ್ಕೆ ಮೊದಲು ಮಾಡುತ್ತಾನೆ. ತನಗಿಂತ ಆಧ್ಯಾತ್ಮಿಕದಲ್ಲಿ ಮುಂದಿರುವವರು ಅಂದರೆ ಗುರುಗಳಾಗಿ, ಸ್ವಾಮಿಗಳಾಗಿ ಇರುವವರು ಯಾರಾದರೂ ತನ್ನ ಪ್ರತ್ಯೇಕತೆಯನ್ನು ಸಾರಿಕೊಳ್ಳುವುದಕ್ಕೆ, ತನಗೆ ತಿಳಿಯದಿದ್ದರೂ ತಿಳಿದಂತೆ ದೇವರು ಸೊಳ್ಳೆಯಂತೆ ಇದ್ದಾನೆಂದರೂ, ಕುರಿಯಂತೆ ಅದನ್ನೇ ಅನುಸರಿಸುವವರು ಇದ್ದಾರೆ. ನಾನು ಏನು ಹೇಳಿದರೂ ನನ್ನ ಮಾತನ್ನೇ ಕೇಳುತ್ತಾರೆಂದು ಕೆಲವರು ಅವರ ವಿಧಾನವನ್ನು ಹೇಳಿ ಅವರ ಹಿಂದೆ ಹೋಗುವವರು, ಅದನ್ನೇ ಕುರುಡರಂತೆ ನಂಬಿ ಒಂದು ಸಮಾಜವಾಗಿ ಏರ್ಪಟ್ಟು ಪ್ರಚಾರ ಮಾಡುವವರು ಇದ್ದಾರೆ. ಆದ್ದರಿಂದ ಈದಿನ ಆಧ್ಯಾತ್ಮಿಕ ಎನ್ನುವ ಹೆಸರಿನಿಂದ ಎಷ್ಟೋ ಸಮಾಜಗಳು ಏರ್ಪಟ್ಟಿವೆ. ತಮಗಿಂತ ಮುಂದಿರುವ ಕುರಿಯನ್ನು ಅನುಸರಿಸಿ, ಎಲ್ಲ ಕುರಿಗಳು ಅಪಾಯದಲ್ಲಿ ಸಿಲುಕಿಕೊಂಡಂತೆ,

ತಮಗಿಂತ ತಿಳಿದವರೆಂದು ಕೆಲವರನ್ನು ನಂಬಿ, ಅವರನ್ನು ಅನುಸರಿಸುವ ಮನುಷ್ಯಕೂಡ ಅಜ್ಞಾನ ಗಮ್ಯವನ್ನೇ ಸೇರುತ್ತಿದ್ದಾನೆ. ತಮಗಿಂತ ಮುಂದೆ ಇರುವವುಗಳನ್ನು, ಹಿಂದಿರುವವುಗಳನ್ನು ಎಲ್ಲವನ್ನು ಕಾಪಾಡುತ್ತಾ ನಡೆಸುವ ಕಾಪರಿಯನ್ನು ಅನುಸರಿಸಿದ ಕುರಿಗಳು ಹೇಗಾದರೆ ಪ್ರಮಾದದಲ್ಲಿ ಸಿಲುಕಿಕೊಳ್ಳುವುದಿಲ್ಲವೊ, ಹಾಗೆಯೇ ಪ್ರಪಂಚದಲ್ಲಿನ ಸಾಮಾನ್ಯ ಮನುಷ್ಯನಿಗು, ಅವನಿಗಿಂತ ಸ್ವಲ್ಪ ಹೆಚ್ಚಾಗಿ ತಿಳಿದಿದೆ ಎಂದುಕೊಳ್ಳುವ ಸ್ವಾಮೀಜಿಗಳಿಗು ಎಲ್ಲರಿಗೂ ಕಾಪರಿಯಾದ ಭಗವಂತನು ಒಬ್ಬನಿದ್ದಾನೆಂದು, ಆತನು ಒಬ್ಬನೇ ಮನುಷ್ಯರೆಲ್ಲರಿಗು ಗುರುವೆಂದು, ಆ ಗುರು ಸೂಚಿಸಿರುವುದೆ ಅಸಲಾದ ಮಾರ್ಗವೆಂದು, ತಿಳಿದು ಪ್ರವರ್ತಿಸುವವರು ಜ್ಞಾನಗಮ್ಯವನ್ನು ಸೇರುತ್ತಿದ್ದಾರೆ. ಕುರಿಗಳಿಗೆ ಕಾಪರಿ ಇದ್ದಂತೆ, ಮನುಷ್ಯರಿಗೆ ಕಾಪರಿ ಭಗವಂತನೆಂದು, ಭಗವಂತನೊಬ್ಬನೆ ಗುರುವೆಂದು ತಿಳಿಯದೆ ಒಬ್ಬನು ಶ್ವಾಸದಮೇಲೆ ಧ್ಯಾಸ ಎಂದು, ಮತ್ತೊಬ್ಬನು ಮೂಗಿನಕೊನೆ ಮೇಲೆ (ನಾಸಿಕಾಗ್ರದ ಮೇಲೆ) ಧ್ಯಾಸ ಎಂದು, ಮತ್ತೊಬ್ಬನು ಹೃದಯದಲ್ಲಿಯೆಂದು, ಇನ್ನೊಬ್ಬನು ಶಿರಸ್ಸಿನಲ್ಲಿ ಸಹಸ್ತ್ರಾರದಲ್ಲಿ ಎಂದು, ಒಬ್ಬನು ಹೊರಗೆ ಎಂದು, ಒಬ್ಬನು ಒಳಗೆ ಎಂದು ಹೇಳುತ್ತಾ ಹೋಗುತ್ತಿದ್ದರೆ ಇಷ್ಟು ಜನರಲ್ಲಿ ಯಾವುದು ಸತ್ಯವೆಂದು ಯೋಚಿಸದ ಪ್ರಜೆಗಳು, ಯಾರಿಗೆ ಇಷ್ಟವಾದವರನ್ನು ಅವರು ಅನುಸರಿಸುತ್ತಾ, ನನ್ನದು ಇಂತಹ ಸಮಾಜವೆಂದು ಕೆಲವರು ಹೇಳಿದರೆ ನನಗೆ ಬೋಧಿಸುವವನು ಗುರುವೇನಾ ಎಂದು ಯೋಚಿಸದವನು ಕೊನೆಗೆ ಅಜ್ಞಾನ ಜನ್ಮಗಳಿಗೆ ಹೋಗುತ್ತಿದ್ದಾನೆಂದು ತಿಳಿಯಬೇಕು.

ಮುಂದಿರುವ ಕುರಿ ಹಿಂದಿರುವ ಕುರಿಗಳನ್ನು ಹೇಗೆ ಸಕ್ರಮವಾಗಿ ನಡೆಸಲಿಲ್ಲವೊ, ಹಾಗೆಯೇ ಆಧ್ಯಾತ್ಮಿಕ ದಾರಿಯಲ್ಲಿ ನಮಗಿಂತ ಸ್ವಲ್ಪ ಮುಂದಿರುವವನು ಹಿಂದಿರುವ ಮನುಷ್ಯರನ್ನು ಸಕ್ರಮವಾಗಿ ನಡೆಸಲಿಲ್ಲ. ದಾರಿಯಲ್ಲಿ ಮುಂದಿರುವ ಕುರಿಯನ್ನು ಹಿಂದಿರುವ ಕುರಿಗಳನ್ನು ಎಲ್ಲವನ್ನು ಕಾಪರಿ ಒಬ್ಬನೇ ಸಕ್ರಮವಾಗಿ ನಡೆಸುವಂತೆ ಆಧ್ಯಾತ್ಮಿಕ ದಾರಿಯಲ್ಲಿ ಮುಂದಿರುವ ಸ್ವಾಮಿಯನ್ನು, ಹಿಂದಿರುವ ಅನುಚರರನ್ನು (ಜೊತೆ ಹೋಗುವವರನ್ನು) ಎಲ್ಲರನ್ನು ಗುರುವು

ಒಬ್ಬನೇ ಸಕ್ರಮವಾಗಿ ಆಧ್ಯಾತ್ಮಿಕ ದಾರಿಯಲ್ಲಿ ನಡೆಸುತ್ತಾನೆ. ಕುರಿಗಳಿಗೆಲ್ಲ ಮುಂದಿರುವವುಗಳಿಗು, ಹಿಂದಿರುವವುಗಳಿಗು ಕಾಪರಿ ಹೇಗೆ ಅಗತ್ಯವೋ, ಹಾಗೆಯೇ ಪ್ರಪಂಚದಲ್ಲಿ ಸ್ವಲ್ಪ ತಿಳಿದು ಮುಂದಿರುವವರಿಗೆ, ಏನು ತಿಳಿಯದೆ ಹಿಂದಿರುವವರೆಲ್ಲರಿಗೂ ಗುರುವು ಅವಶ್ಯ. ಕುರಿಗಳಿಗೆ ಕಾಪರಿ ಎಂದರೆ ಗೊಲ್ಲನು ಹೇಗಿದ್ದಾನೊ, ಹಾಗೆ ಮನುಷ್ಯರಿಗೆ ಗುರು ಇದ್ದಾನೆ. ಹೊರಗಿನ ಪ್ರಪಂಚದಲ್ಲಿ ಗೊಲ್ಲನನ್ನು ಆಧ್ಯಾತ್ಮಿಕದಲ್ಲಿ ಗುರುವಾಗಿ ಹೋಲಿಸಿ ಹೇಳಬಹುದು. ಅದ್ದರಿಂದ ಒಬ್ಬ ಮತಪ್ರವಕ್ತ ಹೀಗೆ "ನಾನು ಕುರಿಗಳ ಕಾಪರಿಯನ್ನು, ನನ್ನ ಸ್ವರ(ಧ್ವನಿ)ವು ಕೇಳಿ, ನನ್ನ ಕುರಿಗಳು ನನ್ನನ್ನು ಗುರುತಿಸಿ, ನನ್ನನ್ನು ಹಿಂಬಾಲಿಸುತ್ತವೆ" ಎಂದು ಹೇಳಿದ್ದಾನೆ. ತನ್ನನ್ನು ಒಬ್ಬ ಗೊಲ್ಲನನ್ನಾಗಿ ಹೋಲಿಸಿಕೊಂಡಿದ್ದಾನೆ ಅಲ್ಲವೆ! ಒಂದು ಮತಕ್ಕೆ ಪ್ರವಕ್ತನಾಗಿ ಹೇಳುವ ಒಬ್ಬ ದೊಡ್ಡಗುರು ಆ ಮಾತನ್ನು ಹೇಳಿದರೆ, ಗೊಲ್ಲನು ಎನ್ನುವ ಹೆಸರು ಮಹತ್ವವಾದುದಲ್ಲದೆ ಕಡಿಮೆಯದು ಹೇಗಾಗುತ್ತದೆ? ಪ್ರಪಂಚದಲ್ಲಿನ ಮನುಷ್ಯರೆಲ್ಲರಿಗೂ ಗುರು ಒಬ್ಬನೇಯೆಂದು, ಆತನು ಕೆಲವು ಸಾವಿರ, ಲಕ್ಷಗಳ ವರ್ಷಗಳಿಗೆ ಒಂದು ಸಲ ಭೂಮಿಮೇಲಕ್ಕೆ ಬರುತ್ತಾನೆಂದು, ಹಾಗೆ ಬಂದವನೆ ಭಗವಂತನೆಂದು, ಭಗವಂತನೊಬ್ಬನೆ ಎಲ್ಲರಿಗೂ ಗುರುವೆಂದು, ನಮ್ಮ ರಚನೆಯಲ್ಲಿ **"ಗುರು"** ಎನ್ನುವ ಗ್ರಂಥದಲ್ಲಿ ಮೊದಲೆ ಹೇಳಿದ್ದೇವೆ. ಆ ವಿಧವಾಗಿ ಬಂದಿರುವ ಭಗವಂತನೆ ದ್ವಾಪರಯುಗ ದಲ್ಲಿನ ಕೃಷ್ಣನು. ಆತನು ಒಬ್ಬನೇ ಎಲ್ಲರಿಗೂ ಗುರುವು. ಕುರಿಗಳಿಗೆ ದಾರಿ ತೋರಿಸುವವನು ಕಾಪರಿ, ಮನುಷ್ಯರಿಗೆ ದಾರಿ ತೋರಿಸುವವನು ಗುರು. ಕುರಿಗಳಿಗೆ ದಾರಿ ತೋರಿಸುವ ಕಾಪರಿಯನ್ನು ಗೊಲ್ಲನು ಎನ್ನುತ್ತಿದ್ದೇವೆ. ಮನುಷ್ಯರಿಗೆ ದಾರಿಯನ್ನು ತೋರಿಸುವವನು ಸಹ ಮನುಷ್ಯರಿಗೆ ಕಾಪರಿ ಆಗುತ್ತಾನೆ. ನಾನು ನಿಮಗೆ ಕಾಪರಿ ಎಂದು ತಿಳಿಯುವಂತೆ, ಭಗವಂತನಾದ ಕೃಷ್ಣನು ಗೊಲ್ಲರಮನೆಯಲ್ಲಿ ಬೆಳೆದು ಗೊಲ್ಲನೆನಿಸಿಕೊಂಡಿದ್ದಾನೆ. ಈ ಲೆಕ್ಕ ಪ್ರಕಾರ ಗೊಲ್ಲನೆಂದರೂ, ಗುರುವು (ಭಗವಂತನು) ಎಂದರೂ ಎರಡೂ ಒಂದೇ ಸೂತ್ರವನ್ನು ತಿಳಿಸುತ್ತಿವೆ. ಇದರಿಂದ ಗೊಲ್ಲಕುಲ ಎನ್ನುವುದು ಎಲ್ಲ ಕುಲಗಳಿಗಿಂತ ಬೆಲೆಯುಳ್ಳದ್ದೆಂದು ತಿಳಿಯುತ್ತಿದೆ. ಇಲ್ಲಿಯವರೆಗು ಗೊಲ್ಲಕುಲವು ಎಷ್ಟು ಪ್ರಾಧಾನ್ಯತೆ

ಹೊಂದಿದೆಯೊ, ಅದರ ಅರ್ಥವೇನೊ ಅಂತರಾರ್ಥವೇನೊ ತಿಳಿದುಕೊಂಡಿದ್ದೇವೆ. ಇನ್ನು ಯಾದವ ಎನ್ನುವುದನ್ನು ಕುರಿತು ತಿಳಿದುಕೊಳ್ಳೋಣ.

ಯಾದವ ಎನ್ನುವ ಹೆಸರು ಕೃಷ್ಣನಿಗಿಂತ ಮೊದಲು ಇಲ್ಲ. ಕೃಷ್ಣನ ವಯಸ್ಸು ಮೂವತ್ತು ವರ್ಷಗಳಿಗೆ ಮೇಲ್ಪಟ್ಟು ಇರುವಾಗ ಮೊದಲು ಭೀಷ್ಮನು ಕೃಷ್ಣನನ್ನು "ಯಾದವಾ" ಎಂದು ಸಂಭೋದಿಸಿದ್ದಾನೆ. ಆಗಿನಿಂದ ಯಾದವ ಎನ್ನುವ ಶಬ್ದ ಜಾರಿಗೆ ಬಂದಿದೆ. ಕೃಷ್ಣನು ಯಾದವನೆ ಆದ್ದರಿಂದ ಗೊಲ್ಲಕುಲದಲ್ಲಿನವರೆಲ್ಲರೂ ತಮ್ಮ ಹೆಸರಿನ ಕೊನೆಯಲ್ಲಿ ಯಾದವ್ ಎಂಬ ಪದವನ್ನು ಸೇರಿಸಿಕೊಳ್ಳುವುದು ನಡೆಯುತ್ತಿದೆ. ಹಾಗೆ ಸೇರಿಸುವುದರಿಂದ ಯಾದವ್ ಎನ್ನುತ್ತಲೇ ಅವರು ಇಂತಹ ಕುಲದವರೆಂದು ಅರ್ಥವಾಗುತ್ತಿದೆ. ಇದರಿಂದ ಗೊಲ್ಲರೆಂದರೆ ಯಾದವರೆಂದು, ಯಾದವರೆಂದರೆ ಗೊಲ್ಲರೆಂದು ತಿಳಿಯುತ್ತಿದೆ. ಸುಮಾರು ಐದು ವರ್ಷಗಳ ಕೆಳಗೆ ಗೊಲ್ಲಕುಲ ಸಮಾಜದಲ್ಲಿನ ಗಿರಿ ಯಾದವ್ ಎನ್ನುವ ವ್ಯಕ್ತಿಯೊಂದಿಗೆ ಯಾದವ್ ಎಂದರೆ ಅರ್ಥವೇನೆಂದು ಕೇಳಿದ್ದೇವೆ. ಆಗ ಆತನು "ಅದರ ವಿಷಯ ಯಾವಮಾತ್ರ ತಿಳಿದಿಲ್ಲವೆಂದು, ಎಲ್ಲರೂ ಇಟ್ಟುಕೊಂಡಂತೆ ನಾನು ಯಾದವ್ ಎಂದು ಇಟ್ಟುಕೊಂಡಿರುವುದು ನಡೆದಿದೆ. ಆದರೆ ಅರ್ಥ ಏನೊ ನನಗೂ ತಿಳಿದಿಲ್ಲ, ನನಗೇ ಅಲ್ಲ ಬಹುಶಃ ನಮ್ಮವರಿಗೆ ಯಾರಿಗೂ ತಿಳಿದಿಲ್ಲವೆಂದುಕೊಳ್ಳುತ್ತೇನೆ" ಎಂದನು. ನಿಜಕ್ಕೆ ಆತನು ಇರುವುದು ಇದ್ದಂತೆ ಹೇಳಿದ್ದಾನೆ. ಇನ್ನೊಂದು ಸಂದರ್ಭದಲ್ಲಿ ಅದೇ ಕುಲಸ್ಥನನ್ನು ಯಾದವ್ ಎಂದು ಏಕೆ ಕರೆಯುತ್ತಾರೆಂದು ಕೇಳಿದ್ದೇವೆ. ಆಗ ಆತನು "ಯದುವಂಶದಲ್ಲಿ ಹುಟ್ಟಿದವರಾದ್ದರಿಂದ ನಮಗೆ ಯಾದವರೆಂದು ಹೆಸರು ಬಂದಿದೆ" ಎಂದಿದ್ದಾನೆ ಆ ಮಾತನ್ನನುಸರಿಸಿ ನಾವು ಯೋಚಿಸಿದರೆ ಯದುವಂಶದಲ್ಲಿ ಹುಟ್ಟಿದವನು ಕೃಷ್ಣನು ಮಾತ್ರವೆ ಆಗುತ್ತಾನೆ. ಅಂದಿನ ಗೊಲ್ಲರದು ಯದುವಂಶ ಅಲ್ಲವೇ ಅಲ್ಲ, ಯದುವಂಶಕ್ಕೂ ಗೊಲ್ಲರಿಗೂ ಸಂಬಂಧವಿಲ್ಲ. ಆದ್ದರಿಂದ ಆತನು ಹೇಳಿದ ಸಮಾಧಾನ ಸರಿಯಾದುದು ಅಲ್ಲವೆಂದು ಅರ್ಥವಾಗಿದೆ. ಅವರಿಗೆ ತಿಳಿದರೂ ತಿಳಿಯದೆ ಹೋದರೂ ನಾವು ಮಾತ್ರ

ಈಗ ಯಾದವನನ್ನು ಕುರಿತು ತಿಳಿದುಕೊಳ್ಳಲೇ ಬೇಕು. ಭೀಷ್ಮನು ಕೃಷ್ಣನನ್ನು ಯಾವ ಉದ್ದೇಶದಿಂದ "ಯಾದವ" ಎಂದಿದ್ದಾನೊ ಆತನ ಭಾವವೇನೊ ಅಲ್ಲಿಗೆಹೋಗಿ ನೋಡಿದರೆ ಈ ವಿಧವಾಗಿದೆ.

'ಯಾದ್' ಎನ್ನುವ ಶಬ್ದದಿಂದ 'ಯಾದವ' ಎನ್ನುವ ಪದ ಹುಟ್ಟಿದೆ. ಯಾದ್ ಎಂದರೆ ಜ್ಞಪ್ತಿ (ಜ್ಞಾಪಕ) ಎಂದು ಅರ್ಥ. ಜ್ಞಾಪಕ ಇಲ್ಲವಾ ಎಂದು ಹೇಳುವುದಕ್ಕೆ ಕೆಲವು ಪ್ರದೇಶಗಳಲ್ಲಿ ಯಾದ್ ಇಲ್ಲವಾ ಎನ್ನುವುದು ಸಹ ಇದೆ. ಯಾದ್ ಎನ್ನುವುದು ಸಂಸ್ಕೃತ ಪದ, ಹಿಂದಿಯಲ್ಲಿ ಸಹ ಅದೇ ಪದ ಇದೆ. ಯಾದ್ ಎಂದರೆ ಜ್ಞಾಪಕ, ಜ್ಞಾನ ಎನ್ನುವ ಎರಡು ಅರ್ಥಗಳಲ್ಲಿ ಭೀಷ್ಮನು ಜ್ಞಾನ ಎನ್ನುವ ಅರ್ಥವನ್ನು ತೆಗೆದುಕೊಂಡಿದ್ದಾನೆ. ಕೃಷ್ಣನು ಸಂಪೂರ್ಣ ಜ್ಞಾನ ಇರುವವನು ಆಗಿರುವುದರಿಂದ ಕೃಷ್ಣನನ್ನು ಯಾದವ ಎಂದು ಭೀಷ್ಮನು ಕರೆದಿದ್ದಾನೆ. ಭೀಷ್ಮನ ಭಾವನೆಯಲ್ಲಿ ಕೃಷ್ಣನನ್ನು ಮೀರಿದ ಜ್ಞಾನಿ ಇಲ್ಲ ಆದ್ದರಿಂದ ಕೃಷ್ಣನನ್ನು ಯಾದವ ಎಂದಿದ್ದಾನೆ. ಈ ವಿಧವಾಗಿ ಕೃಷ್ಣನು ಸಂಪೂರ್ಣ ಯಾದವನೆಂದು ನಾವು ಸಹ ಹೇಳಬಹುದು. ಕೃಷ್ಣನು ಇತರರಿಗೆ ಯಾವಾಗಲು ಜ್ಞಾನ ಹೇಳದಂತೆ ಕಾಲವನ್ನು ಕಳೆಯುವುದರಿಂದ, ಆತನನ್ನು ಎಲ್ಲರೂ ಸಾಧಾರಣ ಮನುಷ್ಯನಾಗಿಯೇ ಲೆಕ್ಕಹಾಕಿದ್ದಾರೆ ಹೊರತು ಭಗವಂತನಾಗಿ ಎಂದಿಗೂ ನೋಡಲಿಲ್ಲ. ಹಾಗೆ 90 ವರ್ಷಗಳು ಕೃಷ್ಣನ ಆಯುಸ್ಸು ಕಳೆದಾಗ, ಹಸ್ತಿನದಲ್ಲಿ (ಢಿಲ್ಲಿಯಲ್ಲಿ) ಪಾಂಡವರಿಗು ಕೌರವರಿಗು ಯುದ್ಧ ನಡೆದಾಗ, ಆ ಯುದ್ಧ ಸಹ ಕುರುಕ್ಷೇತ್ರದಲ್ಲಿ (ಪಂಜಾಬ್‌ನಲ್ಲಿನ ಒಂದು ಜಿಲ್ಲೆ) ನಡೆದಾಗ, ತಾನು ನಿವಾಸವಿರುವ ದ್ವಾರಕಗೆ ಸುಮಾರು ಸಾವಿರ ಕಿಲೋಮೀಟರ್‌ಗಳ ದೂರದಲ್ಲಿ ಅರ್ಜುನನಿಗೆ ಒಬ್ಬನಿಗೆ ಗೀತೆಯನ್ನು ಹೇಳಿದ್ದಾನೆ. ಭಗವಂತನು ಹೇಳಿರುವು ದಾದ್ದರಿಂದ ಗೀತೆಯ ಹೆಸರು "ಭಗವದ್ಗೀತೆ" ಆಗಿದೆ. ತನ್ನ ಊರಿನಲ್ಲಿ, ತನ್ನವರಲ್ಲಿಯೂ ಕೃಷ್ಣನು ಜ್ಞಾನವನ್ನು ಹೇಳಲಿಲ್ಲ. ಎಲ್ಲೋ ಸಾವಿರ ಕಿಲೋಮೀಟರಗಳ ದೂರದಲ್ಲಿ ಹೇಳಲಾದ ಭಗವದ್ಗೀತೆ ಸ್ವಲ್ಪಕಾಲಕ್ಕೆ ದ್ವಾರಕದಲ್ಲಿನ ಗೊಲ್ಲ ಕುಲದವರಿಗೂ ಸಹ ತಿಳಿದಿದೆ. ವ್ಯಾಸನು ಬರೆದ ಗೀತೆಯನ್ನು ನೋಡಿದ

ನಂತರ ದ್ವಾರಕದಲ್ಲಿನ ಗೊಲ್ಲಕುಲದಲ್ಲಿನ ಹಿರಿಯರು ಗೀತಾಜ್ಞಾನವನ್ನು ತಿಳಿದುಕೊಂಡು ಕೃಷ್ಣನ ಘನತೆಯನ್ನು ಗುರುತಿಸಿದ್ದಾರೆ. ಹಾಗೆ ತಿಳಿದ ವೃದ್ಧರೆಲ್ಲರೂ ಕೃಷ್ಣನ ಹತ್ತಿರಕ್ಕೆ ಹೋಗಿ ಅವರ ಸಂತೋಷವನ್ನು ವ್ಯಕ್ತಪಡಿಸಿದ್ದಾರೆ. ಅವರನ್ನು ನೋಡಿದ ಕೃಷ್ಣನು ದ್ವಾರಕದಲ್ಲಿ ನಾನು ಒಬ್ಬನೇ ಯಾದವನು ಎಂದುಕೊಳ್ಳಬೇಡಿ ನೀವೆಲ್ಲರೂ ಯಾದವರೆ ಎಂದಿದ್ದಾನೆ. ಆಗಿನಿಂದ ಜ್ಞಾನ ವೃದ್ಧರನ್ನೆಲ್ಲ ಯಾದವ ರೆಂದು ಕೃಷ್ಣನೇ ಕರೆಯುತ್ತಿದ್ದನು. ಆದಿನ ದ್ವಾರಕದಲ್ಲಿ ಇರುವವರೆಲ್ಲಾ ಗೊಲ್ಲಕುಲ ದವರೆ, ಆದ್ದರಿಂದ ಆ ದಿನಗಳಲ್ಲಿ ಯಾದವರೆಂದು ಕರೆಸಿಕೊಂಡವರೆಲ್ಲ ಗೊಲ್ಲರೆ ಆಗಿರುವುದರಿಂದ, ನಂತರ ಬಂದವರು ಯಾದವ ಎನ್ನುವುದು ತಮ್ಮ ಕುಲಕ್ಕೆ ಸಂಬಂಧಿಸಿರುವುದೇನೊ ಅಂದುಕೊಂಡಿದ್ದಾರೆ. ಯಾದವ ಎಂದು ಹೇಳಿದರೆ ಜ್ಞಾನಿ ಎಂದು ತಿಳಿಯದವರೆಲ್ಲರೂ, ತಮ್ಮ ಹಿರಿಯರು ಯಾದವರಾ ದಾಗ ತಾವು ಸಹ ಯಾದವರೇ ಅಲ್ಲವೆ! ಎಂದು ತಿಳಿದುಕೊಂಡಿದ್ದಾರೆ. ಆಗಿನಿಂದ ಉತ್ತರ ಭಾರತದೇಶದಲ್ಲಿ ಗೊಲ್ಲರು ಕೆಲವರು ಯಾದವ ಎನ್ನುವ ಪದವನ್ನು ತಮ್ಮ ಹೆಸರಿನ ಕೊನೆಯಲ್ಲಿ ತಗಲಿಸಿಕೊಂಡಿದ್ದಾರೆ. ನಂತರ ಸ್ವಲ್ಪಕಾಲ ಕಳೆದನಂತರ ಉಳಿದ ಗೊಲ್ಲರು ಸಹ ಯಾದವ ಎನ್ನುವ ಹೆಸರು ತಗಲಿಸಿಕೊಳ್ಳುತ್ತಾ ಬಂದಿದ್ದಾರೆ. ಹೀಗೆ ಒಬ್ಬರನ್ನು ನೋಡಿಕೊಂಡು ಮತ್ತೊಬ್ಬರು ತಮ್ಮ ಹೆಸರಿನ ಕೊನೆಯಲ್ಲಿ ಯಾದವ ಪದವನ್ನು ತಗಲಿಸಿಕೊಂಡಿದ್ದಾರೆ. ಕೊನೆಗೆ ಗೊಲ್ಲ ಕುಲವು ಯಾದವ ಕುಲವಾಗಿ ಬದಲಾಗಿಹೋಗಿದೆ. ಹಾಗೆ ಬದಲಾದ ಯಾದವ ಪದವು ಈ ಮಧ್ಯಕಾಲದಲ್ಲಿಯೇ ದಕ್ಷಿಣ ದೇಶದೊಳಗೂ ಸಹ ಹರಡಿದೆ. ಇಲ್ಲಿನ ಗೊಲ್ಲರು ಸಹ ನಾವು ಯಾದವರೆಂದು ಹೇಳಿಕೊಳ್ಳುತ್ತಿದ್ದಾರೆ. ಒಂದು ಹಳ್ಳಿಯಲ್ಲಿ ಒಬ್ಬ ಗೊಲ್ಲಕುಲಸ್ಥನನ್ನು ಬೇಟಿಯಾಗಿ ನಿನ್ನೆ ಮೊನ್ನೆಯವರೆಗು ನೀವು ಗೊಲ್ಲರೆಂದು ಹೇಳಿಕೊಂಡಿದ್ದೀರಾ! ಇದ್ದಕ್ಕಿದ್ದಂತೆ ಈಗ ಯಾದವರು ಎಂದು ಹೇಳುತ್ತಿದ್ದೀರೇ, ಏನು ವಿಷಯ ಎಂದು ಕೇಳಿದಾಗ! "ಆಗ ಗೊಲ್ಲರೆ ಆದರೆ ಈಗ ಯಾದವರು" ಎಂದು ಹೇಳಿದ್ದಾರೆ.

ಮೊದಲು ಕೃಷ್ಣನನ್ನು ಭೀಷ್ಮನು ಯಾದವ ಎಂದು ಕರೆದಾಗ ನಂತರ ಕೃಷ್ಣನು ಜ್ಞಾನಿಗಳಾಗಿ ಬದಲಾದ ಗೊಲ್ಲವೃದ್ಧರನ್ನು ಯಾದವರು ಎಂದಿದ್ದಾನೆ.

ಯಾದವ ಎನ್ನುವ ಪದಕ್ಕೆ ಜ್ಞಾನಿ ಎನ್ನುವ ಅರ್ಥ ಇದೆಯೆನ್ನುವ ಉದ್ದೇಶದಿಂದ ಭೀಷ್ಮನು ಕೃಷ್ಣನನ್ನು ಯಾದವ ಎಂದು ಉದ್ಘೋಷಿಸಿದ್ದಾನೆ. ನಂತರ ಅದೇ ಉದ್ದೇಶದಿಂದ ಕೃಷ್ಣನು ಸ್ವಲ್ಪಜನರನ್ನು ಯಾದವರೆಂದು ಕರೆದಿದ್ದಾನೆ. ಆ ವಿಧವಾಗಿ ಉದ್ಭವಿಸಿದ ಯಾದವ ಎನ್ನುವ ಪದ ಈದಿನ ಕುಲವಾಗಿ ಬದಲಾಗಿಹೋಗಿದೆ. ಯಾದವ ಎನ್ನುವ ಪದಕ್ಕೆ ಅರ್ಥ ಜ್ಞಾನಿ ಆದಾಗ, ಆ ಹೆಸರು ಇಟ್ಟುಕೊಂಡವರು ಆ ಹೆಸರಿಗೆ ಸಾರ್ಥಕತೆಯನ್ನು ಕೈಗೂಡಿಸುವುದಕ್ಕೆ, ಸ್ವಲ್ಪವಾದರೂ ದೈವಜ್ಞಾನವನ್ನು ತಿಳಿದುಕೊಂಡರೆ ಚೆನ್ನಾಗಿರುತ್ತದೆ. ಕೃಷ್ಣನು ಹೇಳಿದ ಜ್ಞಾನವನ್ನು ತಿಳಿದುಕೊಳ್ಳುವುದು, ಯಾದವ ಎನ್ನುವ ಹೆಸರಿಟ್ಟು ಕೊಂಡವರು ಮೊದಲು ಮಾಡಬೇಕಾದ ಕೆಲಸ. ಈದಿನ ಗೊಲ್ಲರೆಲ್ಲರೂ ಯಾದವರೆಂದು ಹೇಳಿಕೊಳ್ಳುವುದು ಸಂತೋಷವೆ, ಆದರೆ ಅವರೆಲ್ಲರೂ ಕೃಷ್ಣನ ಗೀತೆಯನ್ನು ತಿಳಿದುಕೊಳ್ಳುವುದು ಸಹ ಮಾಡಬೇಕು. ಹಾಗೆ ಗೀತಾಜ್ಞಾನವನ್ನು ತಿಳಿದುಕೊಳ್ಳದವರು ಕೃಷ್ಣನಿಗೆ ಗೌರವಕೊಡದವರಾಗುತ್ತಾರೆ. ಅಂತಹವರು ಯಾದವರೆಂದು ಹೇಳಿಕೊಂಡರೂ ನಿಜವಾದ ಯಾದವರು ಅಲ್ಲವೆಂದು ತಿಳಿಯಬೇಕು. ಕೃಷ್ಣನ ವಾರಸುದಾರರಾಗಿ ಗೊಲ್ಲರು ನಿಜವಾದ ಯಾದವರಾಗಿ ಬದಲಾಗಬೇಕೆಂದರೆ, ಕೃಷ್ಣನು ಹೇಳಿದ ಜ್ಞಾನವನ್ನು ತಿಳಿಯಬೇಕು. ಆಗಲೇ ಯಾದವ ಹೆಸರಿಗೆ ಸಾಫಲ್ಯ ಏರ್ಪಡುತ್ತದೆ. ಜ್ಞಾನವಿಲ್ಲದ ಗೊಲ್ಲರು ಯಾದವರು ಅಲ್ಲ. ಜ್ಞಾನ ಇರುವ ಯಾವ ಕುಲದವನಾದರೂ ಅರ್ಥದ ಪ್ರಕಾರ ಯಾದವನೆ ಆಗುತ್ತಾನೆ. ಆದ್ದರಿಂದ ಕೃಷ್ಣನು ಹೇಳಿದ ಜ್ಞಾನವನ್ನು ತಿಳಿದುಕೊಂಡು, ಎಲ್ಲರೂ ಯಾದವರಾಗಿ ಬದಲಾಗುವುದಕ್ಕೆ ಪ್ರಯತ್ನಿಸೋಣ. ಕೃಷ್ಣನು ಯಾದವನು ಮತ್ತು ಮಾಧವನು ಎಂದು ಸಹ ಹೇಳಬಹುದು. ನಾವು ಪ್ರಯತ್ನಮಾಡಿ ಭಗವಂತನು ಹೇಳಿದ ಜ್ಞಾನವನ್ನು ತಿಳಿದುಕೊಂಡು ಯಾದವರಾಗಿ ಬದಲಾಗ ಬಹುದು. ಆದರೆ ಈ ಜನ್ಮದಲ್ಲಾಗಲಿ ಮತ್ತ್ಯಾವ ಜನ್ಮದಲ್ಲಾಗಲಿ ಪ್ರಯತ್ನಿಸಿದರೂ ಕೃಷ್ಣನಂತೆ ಮಾಧವನಾಗಿ ಬದಲಾಗಲಾರೆವು. ಕೃಷ್ಣನು ಯಾದವನು, ಮಾಧವನು ಆದಾಗ, ನಾವು ಸಹ ಯಾದವನಾಗಿ ಬದಲಾದಾಗ, ಮಾಧವನಾಗಿ ಏಕೆ ಬದಲಾಗುವುದಿಲ್ಲ? ಎನ್ನುವ ಪ್ರಶ್ನೆಬರಬಹುದು. ಅದಕ್ಕೆ ಸಮಾಧಾನ

ಸಿಗಬೇಕೆಂದರೆ ಯಾದವನೆಂದರೆ ಅರ್ಥವೇನೊ ತಿಳಿದಂತೆ ಮಾಧವನು ಎಂದರೆ ಅರ್ಥವೇನೊ ತಿಳಿಯಬೇಕು. ಆದ್ದರಿಂದ ಈಗ ಮಾಧವನು ಎಂದರೆ ಯಾರು? ಕೃಷ್ಣನು ಮಾಧವನು ಹೇಗೆ ಆಗಿದ್ದಾನೆ? ಎನ್ನುವ ವಿವರವನ್ನು ತಿಳಿದುಕೊಳ್ಳೋಣ.

ಪರಮಾತ್ಮ, ಪ್ರಕೃತಿ ಎರಡು ಶಾಶ್ವತವಾದವು. ಪರಮಾತ್ಮ ಪುರುಷನು, ಪ್ರಕೃತಿ ಸ್ತ್ರೀ ಎಂದು ಮೊದಲೆ ಹೇಳಿಕೊಂಡಿದ್ದೇವೆ. ಭಗವಂತನು ಪರಮಾತ್ಮ ಅಂಶದಿಂದ ಹುಟ್ಟಿದವನು, ಆದ್ದರಿಂದ ಆತನು ಪುರುಷನೆ ಆಗುತ್ತಾನೆ. ಉಳಿದ ಜಗತ್ತಿನಲ್ಲಿನ ಜೀವಿಗಳೆಲ್ಲರು ಪ್ರಕೃತಿ ಪುರುಷರಿಂದ ಹುಟ್ಟಿದರೂ, ಅವನ ತಲೆಯಲ್ಲಿ ಪುರುಷತ್ವ ಒಂದುಭಾಗ, ಸ್ತ್ರೀತತ್ತ್ವ ಮೂರು ಭಾಗಗಳಿರುವುದರಿಂದ ಪ್ರತಿ ಜೀವರಾಶಿಯನ್ನು ಸ್ತ್ರೀತತ್ತ್ವ ಇರುವುದಾಗಿ ಹೇಳಬಹುದು. ಧರಿಸಿದ ಶರೀರ ಪುರುಷಾಕಾರದಿಂದ ಇದ್ದರೂ, ಇಲ್ಲವೆ ಸ್ತ್ರೀ ಆಕಾರದಿಂದ ಇದ್ದರೂ, ಆ ಶರೀರದಲ್ಲಿನ ಜೀವಿಯನ್ನು ಮಾತ್ರ ಸ್ತ್ರೀಯಾಗಿ ಲೆಕ್ಕಹಾಕಬೇಕಾಗಿದ್ದೇಯೆಂದು, ಆಧ್ಯಾತ್ಮಿಕ ಅರ್ಥದಿಂದ ಹೇಳಬಹುದು. ಆ ಲೆಕ್ಕದ ಪ್ರಕಾರ ಭೂಮಿಮೇಲೆ ಇರುವ ಜೀವರಾಶಿಗಳೆಲ್ಲ ಸ್ತ್ರೀಯರಾಗಿದ್ದು, ಭಗವಂತನೊಬ್ಬನೆ ಪುರುಷನೆಂದು ಹೇಳಬಹುದು. ಮೀರಾಬಾಯಿಯೂ ಸಹ ಇದೇ ಸೂತ್ರವನ್ನು ಹೇಳಿದಂತೆ ನಾವು ಹೇಳಿಕೊಂಡಿದ್ದೇವೆ. ಆಧ್ಯಾತ್ಮಿಕ ಜ್ಞಾನದ ಪ್ರಕಾರ ಮತ್ತು ಮೀರಾಬಾಯಿ ಹೇಳಿದಂತೆ, ಶರೀರ ಧರಿಸಿದವರಲ್ಲಿ ಕೃಷ್ಣನು ಒಬ್ಬನೇ ಪುರುಷನು. ಆದ್ದರಿಂದ ಆತನನ್ನು "ಜಗದ್ಭರ್ತ" ಎಂದಿದ್ದಾರೆ. ಅಷ್ಟೇ ಅಲ್ಲದೆ ಆತನನ್ನು "ಜಗತ್ ಗುರು" ಎಂದು ಸಹ ಕರೆದಿದ್ದಾರೆ. ಭೂಮಿಮೇಲೆ ಪತಿ ಒಬ್ಬನೇ ಇರುತ್ತಾನೆ, ಹಾಗೆಯೇ ಗುರು ಒಬ್ಬನೇ ಇರುತ್ತಾನೆ. ಎಲ್ಲರಿಗೂ ಗುರುವಾಗಲಿ, ಪತಿಯಾಗಲಿ ಭಗವಂತನು ಒಬ್ಬನೇ ಎಂದು ತಿಳಿಯಬೇಕು. ಈಗ ಕೆಲವರಿಗೆ ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೆ! "ಜ್ಞಾನವನ್ನು ತಿಳಿಸುವವನು ಗುರು ಅಲ್ಲವೆ! ಗುರು ಸ್ತ್ರೀ ಶರೀರದಲ್ಲಿ ಹುಟ್ಟಬಹುದಾ? ಅಂದರೆ ಭಗವಂತನು ಪುರುಷ ಶರೀರದಲ್ಲಿಯೇ ಹುಟ್ಟದಂತೆ ಭಗವತಿಯಾಗಿ ಸ್ತ್ರೀ ಶರೀರದಲ್ಲಿ ಬರಬಾರದಾ?" ಎಂದು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಪುರುಷನಾದ

ಭಗವಂತನು ಸ್ತ್ರೀ ಶರೀರವನ್ನು ಧರಿಸುವುದಿಲ್ಲ. ಸ್ತ್ರೀ, ಪುರುಷ ಶರೀರಗಳು ಪ್ರಕೃತಿ ಪುರುಷರಿಗೆ ಗುರುತಾಗಿ ಇರುವಾಗ ಪುರುಷನಾದ ಭಗವಂತನು ಪುರುಷನ ಶರೀರದೊಂದಿಗೆ ಹುಟ್ಟುತ್ತಾನೆ. ಆದರೆ ಸ್ತ್ರೀ ಶರೀರದಲ್ಲಿ ಹುಟ್ಟುವುದಿಲ್ಲ. ಜಗದ್ಭರ್ತ ಎಂದು ಕರೆಸಿಕೊಂಡವನು ಸ್ತ್ರೀ ಶರೀರದಲ್ಲಿ ಇರುವುದು ಧರ್ಮವಿರುದ್ಧವಾಗುತ್ತದೆ. ಗುರು ಅಥವಾ ಭಗವಂತನು ಎಂದಿಗಾದರೂ ಪುರುಷ ಶರೀರವನ್ನೇ ಧರಿಸಿ ತಾನು ಪುರುಷನೆಂದು ತಿಳಿಸುತ್ತಾನೆ. ಜಗತ್ತಿಗೆಲ್ಲ ಭರ್ತ (ಪತಿ) ಅದವನು, ಪ್ರಕೃತಿಗೇ ಪುರುಷನಾದವನು, ಸೂತ್ರದ ಪ್ರಕಾರ ಪುರುಷ ಶರೀರವನ್ನೇ ಧರಿಸುತ್ತಾನೆಂದು ತಿಳಿಯಬೇಕು.

ಈಗ ಮೂಲ ವಿಷಯಕ್ಕೆ ಬರೋಣ. ಧವ ಎಂದರೆ ಭರ್ತ (ಪತಿ) ಎಂದು ಅರ್ಥ. ಮಾಧವನು ಎಂದರೆ ನಮ್ಮೆಲ್ಲರಿಗೂ ಪತಿ ಎಂದು ಅರ್ಥ. ಮಾ ಮತ್ತು ನಾವು ಎನ್ನುವುದು ಬಹುವಚನವನ್ನು ಸೂಚಿಸುತ್ತಿದೆ. ಬೃಂದಾವನದಲ್ಲಿ ಗೋಪಿಕೆಯರು ಎಲ್ಲರೂ ಕೃಷ್ಣನನ್ನು ಮಾಧವ ಎಂದಿದ್ದಾರೆ. ಆದರೆ ಕೃಷ್ಣನಿಗೆ ಮದುವೆಯಾದ ನಂತರ ಎಂಟುಜನ ಪತ್ನಿಯರಲ್ಲಿ ಸತ್ಯಭಾಮೆ ಮಾತ್ರ ಕೃಷ್ಣನನ್ನು ನಾಧವ ಎಂದಳಂತೆ. ಎಲ್ಲರೂ ನಮ್ಮ ಪತಿ (ಭರ್ತ) ಎಂದು ಅಂದಾಗ ಒಬ್ಬ ಸತ್ಯಭಾಮ ನನ್ನ ಭರ್ತ (ಪತಿ) ಎಂದು ಹೇಳಿದ್ದಾಳೆ. ಭಗವಂತನು ಜಗತ್ತಿನಲ್ಲಿನ ಎಲ್ಲರಿಗೂ ಪತಿ ಎಂದು ಮೀರಾಬಾಯಿ ಜಗತ್‌ಪತಿ ಎಂದು ಹೇಳಿದ್ದಾಳೆ. ಜಗತ್‌ಪತಿ ಆದವರನ್ನು ಬಹುವಚನದಲ್ಲಿ ನಮ್ಮಪತಿ ಎಂದು ಹೇಳುವುದರಲ್ಲಿ ತಪ್ಪಿಲ್ಲ. ಆದ್ದರಿಂದ ಕೃಷ್ಣನನ್ನು ಮಾಧವ ಎಂದು ಕರೆದಿದ್ದಾರೆ. ಕೃಷ್ಣನು ಯಾದವನೇ ಅಲ್ಲದೆ ಮಾಧವನು ಎಂದು ಸಹ ಹೆಸರುವಾಸಿಯಾಗಿದ್ದಾನೆ. ಮಾಧವಾ ಎನ್ನುವ ಪದ ಕೃಷ್ಣನಿಗೆ ಮಾತ್ರ ಸರಿಹೋಗುತ್ತದೆ, ಆದರೆ ಹೊರಗಿನ ಪ್ರಜೆಗಳಿಗೆ ಸರಿಹೋಗುವುದಿಲ್ಲ. ಏಕೆಂದರೆ ಮನುಷ್ಯರೆಲ್ಲರೂ ಪ್ರಕೃತಿಕಡೆ ಇರುವವರೆ ಅಂದರೆ ಸ್ತ್ರೀತತ್ತ್ವ ಇರುವವರೆ, ಆದ್ದರಿಂದ ಪುರುಷನು ಆದರೂ ಯಾರನ್ನು ಪತಿ ಎನ್ನುವುದಕ್ಕೆ ಸಾಧ್ಯವಿಲ್ಲ ಅಲ್ಲವೆ! ಸ್ತ್ರೀತತ್ತ್ವ ಇರುವ ಯಾರೂ ಧವುಡು (ಪತಿ) ಆಗಲಾರರು. ಆದರೆ

ಜ್ಞಾನವನ್ನು ತಿಳಿದ ಯಾರಾದರೂ ಯಾದವನು ಆಗಬಹುದು. ಇದರಿಂದ ತಿಳಿಯುವುದೇನೆಂದರೆ! ಕೃಷ್ಣನು ಒಬ್ಬನೇ ಮಾಧವನು ಉಳಿದ ಯಾರೂ ಅಲ್ಲ, ಆಗಲಾರರೆಂದು ತಿಳಿಯುತ್ತಿದೆ.

# ರಾಮನು ಕೃಷ್ಣನು ಒಬ್ಬರೇನಾ?

ಶ್ರೀರಾಮನು ತ್ರೇತಾಯುಗದಲ್ಲಿ ದಶರಥನಿಗೆ ಹುಟ್ಟಿದವನು. ಶ್ರೀಕೃಷ್ಣನು ದ್ವಾಪರಯುಗದಲ್ಲಿ ಹುಟ್ಟಿದವನು. ತ್ರೇತಾಯುಗದಲ್ಲಿ ರಾಮನ ಚರಿತ್ರೆ ಇದೆ. ಹಾಗೆಯೇ ದ್ವಾಪರಯುಗದಲ್ಲಿ ಕೃಷ್ಣನ ಚರಿತ್ರೆಯು ಇದೆ. ಎರಡು ಚರಿತ್ರೆಗಳನ್ನು ಗಮನಿಸಿ ನೋಡಿದರೆ, ಇವರಿಬ್ಬರು ಒಬ್ಬರಿಗೊಬ್ಬರು ಭಿನ್ನವಾದ ಚರಿತ್ರೆ ಇರುವವರು. ರಾಮನು ಏಕಪತ್ನಿ ಇರುವವನು, ಕೃಷ್ಣನು ಎಂಟುಜನ ಪತ್ನಿಯರು ಇರುವವನು. ಈ ವಿಧವಾಗಿ ಇಬ್ಬರೂ ಬೇರೆಬೇರೆ ಭಾವಗಳಿರುವ ವ್ಯಕ್ತಿಗಳೆಂದು ತಿಳಿಯುತ್ತಿದೆ. ಯಾವೊಂದು ಪ್ರಪಂಚ ವಿಷಯದಲ್ಲಾಗಲಿ, ಅವರ ಭಾವನೆಗಳನ್ನು ಒಂದಾಗಿ ತೋರಿಸಲಾರೆವು. ಇನ್ನು ಹೇಳಿದರೆ ದೈವಜ್ಞಾನ ವಿಷಯದಲ್ಲಿ ಕೃಷ್ಣನು ಬ್ರಹ್ಮವಿದ್ಯೆಯಾದ ಗೀತೆಯನ್ನು ಬೋಧಿಸಿದ್ದಾನೆ, ರಾಮನು ದೈವಜ್ಞಾನವನ್ನು ಬೋಧಿಸಿದಂತೆ ಎಲ್ಲಿಯೂ ಕಾಣಿಸಲಿಲ್ಲ. ಕೃಷ್ಣನು ವಿಲಾಸವಂತವಾದ ಜೀವನವನ್ನು ಅನುಭವಿಸಿದ್ದಾನೆ. ರಾಮನು ತನ್ನ ಜೀವನದಲ್ಲಿ ಹೆಚ್ಚಾಗಿ ಮಾನಸಿಕ ದುಃಖಗಳನ್ನು ಅನುಭವಿಸುವುದಲ್ಲದೆ, ಅರಣ್ಯವಾಸ 14 ವರ್ಷಗಳು ಯಾವ ಸೌಖ್ಯಗಳು ಇಲ್ಲದಂತಹ ಜೀವನವನ್ನು ಅರಣ್ಯದಲ್ಲಿ ಕಳೆದಿದ್ದಾನೆ. ಹೆಚ್ಚಿನ ಜೀವನವನ್ನು ಪತ್ನಿಯ ವಿಯೋಗದಿಂದಲೇ ಕಳೆದಿದ್ದಾನೆ. ಹೀಗೆ ರಾಮನ, ಕೃಷ್ಣನ ಜೀವನದಲ್ಲಿ ಎಷ್ಟೋ ವ್ಯತ್ಯಾಸಗಳು ಕಾಣಿಸಿದರೂ, ರಾಮನು ಕೃಷ್ಣನು ಒಬ್ಬರೇನಾ ಎನ್ನುವುದಕ್ಕೆ ಕೇವಲ ಆಧ್ಯಾತ್ಮಿಕ ವಿಷಯಗಳನ್ನೇ ಆಧಾರ ಮಾಡಿ ಕೊಂಡು ನೋಡಬೇಕು. ಇಲ್ಲಿ ಒಂದು ಆಧ್ಯಾತ್ಮಿಕ ವಿಷಯಗಳನ್ನೇ ನೋಡಬೇಕಾದ ಅವಶ್ಯಕತೆ ಏನೆಂದರೆ! ಕೃಷ್ಣನನ್ನು ಭಗವಂತನನ್ನಾಗಿ ಲೆಕ್ಕಿಸಿದಾಗ, ರಾಮನನ್ನು ಸಹ ಭಗವಂತನಾಗಿಯೇ ಲೆಕ್ಕಿಸಬೇಕಾ ಎನ್ನುವುದೇ ಪ್ರಶ್ನೆ. ಒಂದು ದೈವ

ಧರ್ಮಗಳ ಅನುಸಾರವಾಗಿ ಕೃಷ್ಣನನ್ನು ಭಗವಂತನು ಎಂದಿದ್ದೇವೆ. ಆದ್ದರಿಂದ ರಾಮನನ್ನು ಸಹ ದೈವಧರ್ಮಗಳ ಆಧಾರದಿಂದಲೇ ನೋಡಬೇಕಾದ ಅವಶ್ಯಕತೆ ಇದೆ. ಕೃಷ್ಣನನ್ನು ಭಗವಂತನೆಂದು ಯಾವ ಸೂತ್ರಗಳಿಂದ ಹೇಳಿದ್ದೇವೊ, ಆ ಸೂತ್ರಗಳಿಂದಲೇ ರಾಮನನ್ನು ಸಹ ಲೆಕ್ಕಿಸಿ ನೋಡಬೇಕು.

ಈಗಿನ ಕಾಲದಲ್ಲಿ ಕೆಲವರು ಆಧ್ಯಾತ್ಮಿಕವಾದಿಗಳು ರಾಮನು, ಕೃಷ್ಣನು ಇಬ್ಬರು ಒಬ್ಬರೇ ಎನ್ನುವ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಹಾಗೆ ವ್ಯಕ್ತಪಡಿಸಿದವರ ಮೇಲಿರುವ ಅಭಿಮಾನದಿಂದ, ಅವರನ್ನು ಅನುಸರಿಸುವ ಕೆಲವರು ಸಹ ರಾಮನನ್ನು ಕೃಷ್ಣನನ್ನು ಒಬ್ಬರೆ ಎಂದು ತಿಳಿದುಕೊಂಡಿದ್ದಾರೆ. ಈ ವಿಧವಾಗಿ ಕೆಲವರು ತಿಳಿದುಕೊಂಡಿರುವುದನ್ನು ನೋಡಿ ಉಳಿದ ಪ್ರಜೆಗಳು ಸಹ ಹಾಗೆಯೇ ತಿಳಿದುಕೊಂಡಿದ್ದಾರೆ. ಸ್ವಲ್ಪಕಾಲ ಕಳೆದನಂತರ ಕೃಷ್ಣಭಕ್ತಿಯನ್ನು ಪ್ರದರ್ಶಿಸುವ ಒಂದು ಸಂಸ್ಥೆ ರಾಮನು ಕೃಷ್ಣನು ಒಬ್ಬರೇಯೆಂದು ಪ್ರಚಾರ ಮಾಡಿ, ರಾಮನ ಭಕ್ತರೆಲ್ಲರನ್ನು ತಮ್ಮ ಸಂಸ್ಥೆಯಲ್ಲಿ ಸೇರುವಂತೆ ಮಾಡಿದೆ. ಅಷ್ಟೇ ಅಲ್ಲದೆ "ಹರೇಕೃಷ್ಣ ಹರೇಕೃಷ್ಣ ಕೃಷ್ಣಕೃಷ್ಣ ಹರೇಹರೇ, ಹರೇರಾಮ ಹರೇರಾಮ ರಾಮರಾಮ ಹರೇಹರೇ" ಎನ್ನುವ ಒಂದು ಮಂತ್ರವನ್ನು ಸಹ ಹಾಡಿನಂತೆ ತಯಾರು ಮಾಡಿದ್ದಾರೆ. ಹಾಗೆ ಮಾಡಿರುವುದರಿಂದ ಪಂಡಿತರು, ಪಾಮರರು ಎಲ್ಲರು ರಾಮನು, ಕೃಷ್ಣನು ಇಬ್ಬರೂ ಒಂದೇಯೆನ್ನುವ ಭಾವನೆಗೆ ಬಂದಿದ್ದಾರೆ. ಅಷ್ಟೇ ಅಲ್ಲದೆ ಕೆಲವು ಚಲನಚಿತ್ರಗಳು ಸಹ ತ್ರೇತಾಯುಗದಲ್ಲಿ ಹುಟ್ಟಿದ ರಾಮನೆ ದ್ವಾಪರ ಯುಗದಲ್ಲಿ ಹುಟ್ಟಿದ ಕೃಷ್ಣನೆಂದು ತೋರಿಸುವುದರಿಂದ, ಇವತ್ತಿಗೂ ಸರ್ವಪ್ರಜೆಗಳು ರಾಮನು ಕೃಷ್ಣನು ಇಬ್ಬರೂ ಒಬ್ಬರೇಯೆನ್ನುವ ಭಾವನೆಯಲ್ಲಿ ಮುಳುಗಿದ್ದಾರೆ. ಕೆಲವರು ರಾಮನ ಭಕ್ತರು ರಾಮನನ್ನು ದೊಡ್ಡದಾಗಿ ತಿಳಿಸುವುದಕ್ಕೆ ತ್ರೇತಾಯುಗದಲ್ಲಿ ಮರಣಿಸಿದ ಆಂಜನೇಯನನ್ನು ಚಿರಂಜೀವಿ ಎಂದು ವರ್ಣಿಸಿ, ಆಂಜನೇಯನು ದ್ವಾಪರಯುಗದಲ್ಲಿರುವ ಕೃಷ್ಣನನ್ನು, ರಾಮನನ್ನಾಗಿ ಗುರುತಿಸಿದ್ದಾನೆಂದು, ತ್ರೇತಾಯುಗದ ರಾಮನೇ ದ್ವಾಪರಯುಗದಲ್ಲಿನ ಕೃಷ್ಣನೆಂದು ಆಂಜನೇಯನೇ ತಿಳಿದು ಕೃಷ್ಣನಿಗೆ ನಮಸ್ಕರಿಸಿದ್ದಾನೆಂದು ಹೇಳಿರುವುದರಿಂದ

ಅಲ್ಲಿಯವರೆಗೂ ನಂಬದವರು ಸಹ ಕೃಷ್ಣನನ್ನು ರಾಮನೆಂದು, ರಾಮನನ್ನು ಕೃಷ್ಣನೆಂದು ತಿಳಿಯುವುದು ನಡೆಯುತ್ತಿದೆ.

ರಾಮನು, ಕೃಷ್ಣನು ಒಬ್ಬರಲ್ಲ ಎನ್ನುವ ಸಂಶಯ ಯಾರಿಗೂ ಬಾರದೆಹೋದರೂ, ಈಗ ಆ ವಿಷಯವನ್ನು ಅನೇಕ ಕೋನಗಳಿಂದ ನೋಡಿ, ಕೊನೆಗೆ ಆಧ್ಯಾತ್ಮಿಕ ಕೋನದಲ್ಲಿ ಸಹ ನೋಡಬೇಕಾಗಿದೆ. ಮೊದಲು ಹುಟ್ಟುವ ವಿಷಯದಲ್ಲಿ ನೋಡೋಣ. ದಶರಥನು ಪುತ್ರಕಾಮೇಷ್ಠಿ ಯಾಗ ಮಾಡಿರುವುದರಿಂದ, ಯಜ್ಞಫಲದಿಂದ ರಾಮನು ಹುಟ್ಟಿದ್ದಾನೆ ಎಂದು ಹೇಳುತ್ತಿದ್ದಾರೆ. ಯಜ್ಞಫಲದಿಂದ ಮಕ್ಕಳು ಹುಟ್ಟಿದ್ದಾರೆ ಎನ್ನುವುದು ಯಜ್ಞಗಳಿಗೆ ಬೆಲೆ ಕಲ್ಪಿಸುವ ಕೆಲಸವೆ, ಹೊರತು ಯಜ್ಞಗಳಿಂದ ಮಕ್ಕಳು ಹುಟ್ಟುತ್ತಾರೆನ್ನುವುದು ವಿಡ್ಡೂರ. ಯಜ್ಞಗಳು ಮಾಡಿದ್ದೇವೆಂಬ ಮಾನಸಿಕ ತೃಪ್ತಿಯಿಂದ ಇರುವಾಗ, ಆ ಸಂತೋಷಕ್ಕೆ ವೀರ್ಯಕಣ ಚಲನೆ ಹೆಚ್ಚಾಗಿ ಸಂತಾನ ಉಂಟಾಗಿರಬಹುದು. ಹಾಗೆ ವೀರ್ಯ ಕಣಕ್ಕೆ ಹುಟ್ಟಿದವನು ರಾಮನು ಆದರೆ ಕೃಷ್ಣನು ಆ ರೀತಿ ಹುಟ್ಟಲಿಲ್ಲ. ದಶರಥ, ಕೌಸಲ್ಯ ದಂಪತಿಗಳಿಗೆ ಯಜ್ಞಸಂತೋಷದ ಸಮಯದಲ್ಲಿ ಗರ್ಭಧಾರಣೆ ನಡೆದಾಗ ರಾಮನು ಹುಟ್ಟಿದ್ದಾನೆ. ಆದರೆ ವಸುದೇವ, ದೇವಕಿ ದಂಪತಿಗಳಿಗೆ ಕಾರಾಗಾರದಲ್ಲಿ ದುಃಖದಿಂದಿರುವ ಕಾಲದಲ್ಲಿ ಗರ್ಭಧಾರಣೆ ನಡೆಯದಂತೆ ಜನಿಸಿದವನು ಕೃಷ್ಣನು. ದಶರಥ ಪುತ್ರನು ರಾಮನಾಗಲಿ, ವಸುದೇವ ಪುತ್ರನು ಕೃಷ್ಣನಲ್ಲ. ಕೃಷ್ಣನಿಗೆ ಯಾವ ಮಾನವನೂ ತಂದೆಯಲ್ಲ. ಆತ ದೇವರಿಂದ ಉದ್ಭವಿಸಿದವನೆಂದು, ಆದ್ದರಿಂದ ದೇವರ ಕುಮಾರನೆಂದು ಕೃಷ್ಣನನ್ನು ಹೇಳಬಹುದು. ದೇವರ ಅಂಶ ಇಲ್ಲವೆ ಶಕ್ತಿ ಭೂಮಿ ಮೇಲೆ ಮನುಷ್ಯನ ಆಕಾರವನ್ನು ತೆಗೆದುಕೊಂಡು ಹುಟ್ಟಿದಾಗ ಅದನ್ನು ಭಗವಂತನ ಜನ್ಮವಾಗಿ ಹೇಳಬಹುದು. ಇಲ್ಲಿ ಕೃಷ್ಣನ ಜನ್ಮ ಪ್ರತ್ಯೇಕವಾಗಿ ದೇವರಿಂದ ಉಂಟಾಗಿರುವುದು, ಆದ್ದರಿಂದ ಕೃಷ್ಣನನ್ನು ಭಗವಂತನು ಎನ್ನುತ್ತಿದ್ದೇವೆ. ಆದರೆ ರಾಮನು ದಶರಥನಿಂದ ಹುಟ್ಟಿದವನು, ಆದ್ದರಿಂದ ರಾಮನನ್ನು ಮನುಷ್ಯನಾಗಿ ಹೇಳಬಹುದು, ಆದರೆ ಭಗವಂತನಾಗಿ ಹೇಳಲಾರೆವು.

ದೇವರ ಕುಮಾರನಾದ ಭಗವಂತನು ಭೂಮಿಮೇಲೆ ಅಧರ್ಮಗಳು ಮಿತಿಮೀರಿದಾಗ ಹುಟ್ಟುತ್ತಾನೆ. ಹುಟ್ಟಿದ ಭಗವಂತನು ಅಧರ್ಮಗಳನ್ನು ಇಲ್ಲದಂತೆ ಮಾಡುವುದಕ್ಕೆ ಧರ್ಮಗಳನ್ನು ಬೋಧಿಸುತ್ತಾನೆ. ಅಷ್ಟೇ ಅಲ್ಲದೆ ಅಧರ್ಮವರರಿಗೆ ಶತ್ರುವಾಗಿ, ಧರ್ಮವರರಿಗೆ ಮಿತ್ರನಾಗಿ ಬದಲಾಗಿಹೋಗುತ್ತಾನೆ. ಕೃಷ್ಣನು ಅಧರ್ಮಗಳು ಮುಗಿಲು ಮುಟ್ಟಿರುವಾಗ ಹುಟ್ಟಿ, ಧರ್ಮಗಳ ರಕ್ಷಣೆಗೋಸ್ಕರ ಹೋರಾಡಿದ್ದಾನೆ. ಅಧರ್ಮವರರಿಗೆ ಶತ್ರುವಾಗಿದ್ದಾನೆ. ರಾಮನು ಹಾಗಲ್ಲದೆ ಅಧರ್ಮಗಳನ್ನು ಕಾಪಾಡುವುದಕ್ಕೆ ಹುಟ್ಟಿದ್ದಾನೆ. ಧರ್ಮಗಳಿಗೆ ಶತ್ರುವಾಗಿದ್ದಾನೆ. ಕೃಷ್ಣನು ತನ್ನ ಬೋಧನೆಯಲ್ಲಿ ಯಜ್ಞಗಳು, ವೇದಾಧ್ಯಯನಗಳು, ತಪಸ್ಸುಗಳು, ಅಧರ್ಮಗಳೆಂದು ತಿಳಿಸಿರುವಾಗ, ರಾಮನು ಯಜ್ಞಗಳನ್ನು ರಕ್ಷಿಸುವುದಕ್ಕೆ, ತಪಸ್ವಿಕರನ್ನು ಕಾಪಾಡುವುದಕ್ಕೆ ಕೃಷಿ ಮಾಡಿದ್ದಾನೆ. ಅಧರ್ಮಗಳಾದ ಯಜ್ಞಗಳನ್ನು ನಾಶಮಾಡಿ, ಅಧರ್ಮವರರಾದ ತಪಸ್ವಿಕರನ್ನು ಶಿಕ್ಷಿಸುವಂತಹ ರಾವಣಬ್ರಹ್ಮನಿಗೆ ಶತ್ರುವಾಗಿದ್ದಾನೆ. ಕೃಷ್ಣನು ಯಜ್ಞಯಾಗಾದಿಗಳು ಅತಿಹೆಚ್ಚಾಗಿ ಬೆಳೆದುಹೋದ ಕಾಲದಲ್ಲಿ, ತಪಸ್ವಿಕರು ಮಿತಿಮೀರಿದ ಕಾಲದಲ್ಲಿ, ಅಧರ್ಮಗಳು ಬೆಳೆದು ಹೋಗಿವೆಯೆಂದು ತಿಳಿದು, ಧರ್ಮ ರಕ್ಷಣೆಗೋಸ್ಕರ ಕೃಷ್ಣನು ಅವತರಿಸಿದ್ದಾನೆ. ವ್ಯಾಸನು ಹದಿನೆಂಟು ಪುರಾಣಗಳು ಬರೆದ ಸಮಯದಲ್ಲಿ ಭಗವಂತನಾದ ಕೃಷ್ಣನು ಹುಟ್ಟಿದ್ದಾನೆ. ಪುರಾಣಗಳನ್ನು ಬರೆದ ವ್ಯಾಸನು ಅದಕ್ಕೂ ಮೊದಲೆ ವೇದಗಳನ್ನು ಬರೆದು ಅಧರ್ಮಗಳನ್ನು ವಿಸ್ತರಿಸಿದ್ದಾನೆಂದು, ಆಗ ಧರ್ಮಗಳಿಗೆ ಪೂರ್ತಿ ಹಾನಿ ಉಂಟಾಗಿದೆಂದು, ಭಗವಂತನು ಕೃಷ್ಣನಾಗಿ ಹುಟ್ಟಿದ್ದಾನೆ. ಕೃಷ್ಣನು ಹೇಳಿದ ಭಗವದ್ಗೀತೆಯನ್ನು ಅರ್ಜುನನ ಮೂಲಕ ತಿಳಿದುಕೊಂಡ ವ್ಯಾಸನು ತಾನು ವೇದಗಳನ್ನು, ಪುರಾಣಗಳನ್ನು ಬರೆದು ಮಾಡಿದ ತಪ್ಪನ್ನು ತಿಳಿದುಕೊಂಡು ಪಶ್ಚಾತ್ತಾಪಪಟ್ಟು, ನಂತರ ಗೀತೆಯನ್ನು ಶ್ಲೋಕಗಳ ರೂಪದಲ್ಲಿ ಬರೆದಿದ್ದಾನೆ. ಗೀತೆಯನ್ನು ಬರೆದ ನಂತರ ವ್ಯಾಸನು ಧರ್ಮವರನಾಗಿದ್ದಾನೆ. ಗೀತೆಯನ್ನು ಕೃಷ್ಣನು ಹೇಳಿದ ನಂತರ ಮೊಟ್ಟಮೊದಲು ಧರ್ಮವರನಾಗಿ ಬದಲಾಗಿರುವುದು ವ್ಯಾಸನೆ ಎಂದು ತಿಳಿಯಬೇಕು.

ಕೃಷ್ಣನು ಭಗವಂತನಾಗಿ ಹುಟ್ಟಿ ಅಧರ್ಮವರರನ್ನು ಧರ್ಮವರರಾಗಿ ಬದಲಾಯಿಸಿದ್ದು, ಸಾಧಾರಣ ಮನುಷ್ಯನಾಗಿ ಹುಟ್ಟಿದ ರಾಮನು ಒಬ್ಬ ಅಧರ್ಮವರನನ್ನು ಸಹ ಧರ್ಮವರನನ್ನಾಗಿ ಬದಲಾಯಿಸಲಿಲ್ಲ. ಇಲ್ಲಿ **ಧರ್ಮವರನು, ಅಧರ್ಮವರನು** ಎನ್ನುವ ಎರಡು ಹೊಸ ಪದಗಳನ್ನು ಬಳಸಿದ್ದೇನೆ. ಈ ಪದಗಳನ್ನು ಧರ್ಮಪರನು, ಅಧರ್ಮಪರನು ಎನ್ನುವ ಪದಕ್ಕೆ ಬದಲಾಗಿ ಬಳಸಿರುವುದು ನಡೆದಿದೆ. ಧರ್ಮಪರನು ಎಂದು ಧರ್ಮಗಳನ್ನು ಆಚರಿಸುವವನನ್ನು ಕರೆಯುವುದು ಎಲ್ಲರಿಗೂ ಅಭ್ಯಾಸವಾಗಿಹೋಗಿದೆ. ಆದ್ದರಿಂದ ಎಲ್ಲರಿಗೂ ಅಭ್ಯಾಸವಾದಂತೆ ನಾವು ಸಹ ಧರ್ಮಪರನು, ಅಧರ್ಮಪರನೆಂದು ಅನೇಕ ಕಡೆ ಬರೆದಿರುವುದು ನಡೆದಿದೆ. ವಾಸ್ತವಿಕವಾಗಿ ಆ ಪದಗಳನ್ನು ಹಾಗೆ ಬಳಸಬಾರದು. ಏಕೆಂದರೆ! ಪರ ಎಂದರೆ ಬೇರೆಯಾಗಿರುವುದೆಂದು ಅರ್ಥವು. ತನ್ನ, ಪರ ಎಂದು ಅಂದಾಗ ತನ್ನ ಎಂದರೆ ಸ್ವಂತದ್ದು, ಪರ ಎಂದರೆ ತನಗಿಂತ ಬೇರೆಯಾಗಿರುವುದೆಂದು ಅರ್ಥವು. ಪರಮಾತ್ಮ ಎಂದರೆ ಆತ್ಮಕ್ಕಿಂತ ಬೇರೆಯಾಗಿ ಇರುವುದೆಂದು, ಆತ್ಮವಲ್ಲದ ಮತ್ತೊಂದು ಎಂದು ಅರ್ಥವು. ಪರದೇಶಿ ಎಂದರೆ ಈ ದೇಶ ಅಲ್ಲದವನು, ಇತರ ದೇಶಸ್ಥನು ಎಂದು ಅರ್ಥವು. ಇಹ ಎಂದರೆ ಇಲ್ಲಿ ಎಂದು, ಪರ ಎಂದರೆ ಇಲ್ಲಿಯಲ್ಲದಿರುವುದೆಂದು ಅರ್ಥವು. ಈ ವಿಧವಾಗಿ 'ಪರ' ಎನ್ನುವ ಪದವು ಬೇರೆಯಾಗಿರುವುದನ್ನು ಸೂಚಿಸುವ ಪದ ಎಂದು ತಿಳಿಯುತ್ತಿದೆ. ಧರ್ಮ ಅಲ್ಲದಿರುವುದನ್ನು ಅಧರ್ಮ ಎನ್ನುತ್ತೇವೆ. ಭಗವದ್ಗೀತೆಯಲ್ಲಿ ಸ್ವಧರ್ಮ, ಪರಧರ್ಮ, ಎನ್ನುವ ಪದಗಳು ಕರ್ಮಯೋಗ 35ನೇ ಶ್ಲೋಕದಲ್ಲಿ ಬಳಸಲಾಗಿದೆ. ಸ್ವಧರ್ಮ, ಪರಧರ್ಮ ಎನ್ನುವ ಪದಗಳಲ್ಲಿ ಸ್ವ, ಪರ ಎನ್ನುವ ಶಬ್ದಗಳು ಬೇರೆಬೇರೆಯಾಗಿ ಕಾಣಿಸುತ್ತಿವೆ. ಇಲ್ಲಿ ಸ್ವಧರ್ಮ ಎಂದರೆ ತನ್ನ ಧರ್ಮವೆಂದು, ಪರಧರ್ಮ ಎಂದರೆ ತನ್ನದಲ್ಲದ ಇತರ ಧರ್ಮವೆಂದು ತಿಳಿಯುತ್ತಿದೆ. ಇದರ ಪ್ರಕಾರ ಧರ್ಮಪರನು ಎಂದರೆ ಧರ್ಮಗಳಿಗಿಂತ ಬೇರೆಯಾಗಿ ಇರುವವನೆಂದು, ಧರ್ಮಗಳನ್ನು ಆಚರಿಸುವವನಲ್ಲ ವೆಂದು, ಅಧರ್ಮಗಳನ್ನು ಆಚರಿಸುವವನೆಂದು ಹೇಳಬಹುದು. ಆದರೆ ಧರ್ಮಪರನು ಎನ್ನುವ ಪದವನ್ನು ಧರ್ಮಗಳನ್ನು ಆಚರಿಸುವವನನ್ನು ಕುರಿತು

ಬಳಸುತ್ತಿದ್ದೇವೆ. ಹಾಗೆಯೇ ಅಧರ್ಮಗಳನ್ನು ಆಚರಿಸುವವನನ್ನು ಅಧರ್ಮಪರನೆಂದು ಕರೆಯುತ್ತೇವೆ. ವಾಸ್ತವವಾಗಿ ಹಾಗೆಂದು ಕರೆಯುವುದು ಪೂರ್ತಿ ತಪ್ಪು. ಅಧರ್ಮಗಳನ್ನು ಆಚರಿಸುವವನನ್ನು ವಾಸ್ತವವಾಗಿ ಧರ್ಮಪರನು ಎಂದು ಕರೆಯಬೇಕು, ಹಾಗೆ ಧರ್ಮಗಳನ್ನು ಆಚರಿಸದವನನ್ನು ಅಧರ್ಮ ಪರನೆಂದು ಕರೆಯಬೇಕು.

ಪೂರ್ವದಲ್ಲಿ ಧರ್ಮಗಳನ್ನು ಆಚರಿಸುವವನನ್ನು ಧರ್ಮವರನು ಎಂದು, ಅಧರ್ಮಗಳನ್ನು ಆಚರಿಸುವವನನ್ನು ಅಧರ್ಮವರನು ಎಂದು ಕರೆಯುತ್ತಿದ್ದರು. ವರನು ಎಂದರೆ ಕೋರಿದವನು, ಹೊಂದಿದವನು ಎಂದು ಅರ್ಥ. ಧರ್ಮವರನು ಎಂದರೆ ಧರ್ಮಗಳನ್ನು ಕೋರಿದವನೆಂದು, ಧರ್ಮಗಳನ್ನು ಹೊಂದಿದವನೆಂದು ಅರ್ಥ. ಹಾಗೆಯೇ ಅಧರ್ಮವರನು ಎಂದರೆ ಅಧರ್ಮಗಳನ್ನು ಕೋರಿ ಆಚರಿಸುವವನೆಂದು ಅರ್ಥ. ಪೂರ್ವಕಾಲದಲ್ಲಿ ಧರ್ಮಗಳನ್ನು ಕೋರಿ ಆಚರಿಸುವವನನ್ನು ಧರ್ಮವರನು ಎಂದು ಹೇಳುತ್ತಿದ್ದರು. ಆದರೆ ಕಾಲಕ್ರಮವಾಗಿ ಧರ್ಮವರನು ಎನ್ನುವ ಪದ ಧರ್ಮಪರನಾಗಿ ಬದಲಾಗಿಹೋಗಿದೆ ವರನು ಎನ್ನುವ ಪದದಲ್ಲಿನ "ವ" ಎನ್ನುವ ಶಬ್ದ "ಪ" ಎನ್ನುವ ಶಬ್ದವಾಗಿ ಬದಲಾಗಿಹೋಗಿದೆ. ಆಗಿನಿಂದ ಧರ್ಮವರನನ್ನು ಧರ್ಮಪರನಾಗಿ, ಅಧರ್ಮ ವರನನ್ನು ಅಧರ್ಮಪರನನ್ನಾಗಿ ಕರೆಯುತ್ತಿರುವುದು ನಡೆಯುತ್ತಿದೆ. ವಿವರ ತಿಳಿದ ನಂತರ ಇತರರಿಗೆ ಅರ್ಥವಾಗುವಂತೆ ಉಚ್ಚರಿಸುವುದಕ್ಕೆ ಚಿತ್ತವು ಒಪ್ಪುವುದಿಲ್ಲ. ನಮಗೆ ತಿಳಿದಂತೆ ನಮ್ಮ ಚಿತ್ತವು ಒಪ್ಪುವಂತೆ ಹೇಳಿದರೆ, ಧರ್ಮಗಳನ್ನು ಬೋಧಿಸಿ ಧರ್ಮಗಳ ಪ್ರಕಾರ ನಡೆದ ಕೃಷ್ಣನನ್ನು ಅಧರ್ಮಪರನು ಎನ್ನಬೇಕು. ಅಧರ್ಮಗಳಿಗೆ ಬೇರೆಯಾಗಿ ಇರುವವನೆನ್ನುವ ಅರ್ಥ ಕೃಷ್ಣನಿಗೆ ಸರಿಹೋಗುತ್ತದೆ. ಧರ್ಮವರನಾದ ಕೃಷ್ಣನನ್ನು ಇತರರು ಬಳಸುವ ಪದದಲ್ಲಿ ಹೇಳಿದರೆ ಅಧರ್ಮಪರನು ಆಗುತ್ತಾನೆ. ಹಾಗೆಯೇ ಅಧರ್ಮವರನಾದವನನ್ನು ಧರ್ಮಪರನು ಎನ್ನಬೇಕು.

ವ್ಯಾಸನು ನಾಲ್ಕು ವೇದಗಳನ್ನು ಬರೆದು, ವೇದವ್ಯಾಸನು ಎಂಬ ಹೆಸರುವಾಸಿಯಾಗಿದ್ದಾನೆ. ಹಾಗೆಯೇ 18 ಪುರಾಣಗಳನ್ನು ಬರೆದು ಪುರಾಣ

ಪುರುಷನೆಂದು, ಪುರಾಣಕರ್ತ ಎಂದು ಹೆಸರು ತಂದುಕೊಂಡಿದ್ದಾನೆ. ಕೃಷ್ಣನು ಹೇಳಿದ ಬೋಧನೆ ಪ್ರಕಾರ ವೇದಗಳೆಂದರೆ ಮೂರು ಗುಣವಿಷಯಗಳು **(ತ್ರೈಗುಣ್ಯ ವಿಷಯಾವೇದಾ)**. ಆ ಮೂರು ಗುಣಗಳೆ ನನ್ನೊಂದರ ಮಾಯೆ (ಗುಣಮಯಿ ಮಮ ಮಾಯಾ) ಎಂದು ಹೇಳಿದ್ದಾನೆ. ವೇದಗಳಲ್ಲಿ ಮೂರು ಗುಣಗಳೆ ಇವೆ. ಆ ಗುಣಗಳೆ ನನ್ನ ಮಾಯೆ. ನನ್ನ ಮಾಯೆಯನ್ನು ದಾಟುವುದು ದುಸ್ಸಾಧ್ಯ ***(ಮಮ ಮಾಯಾ ದುರತ್ಯಯಾ)*** ಎಂದು ಹೇಳಿದ್ದಾನೆ. ಭಗವಂತನು ಹೇಳಿದ ಮಾತುಗಳನ್ನನುಸರಿಸಿ ನೋಡಿದರೆ ಯಾರಿಗೂ ಸಾಧ್ಯವಾಗದ ಮಾಯೆಯಿಂದ ಕೂಡಿಕೊಂಡ ವೇದಗಳನ್ನು ವ್ಯಾಸನು ಬರೆದಿದ್ದಾನೆ. ದೇವರು ಧರ್ಮಗಳಿಂದ ಕೂಡಿಕೊಂಡವನು. ದೇವರಿಗೆ ಪ್ರತಿಪಕ್ಷವಾದ ಮಾಯೆ ಅಧರ್ಮ ಗಳಿಂದ ಕೂಡಿಕೊಂಡು ಇದೆ. ಅಧರ್ಮಯುಕ್ತವಾದ ವೇದಗಳನ್ನು ವ್ಯಾಸನು ಬರೆದಿದ್ದಾನೆ, ಆದ್ದರಿಂದ ವ್ಯಾಸನನ್ನು ಅಧರ್ಮಗಳನ್ನು ಬೋಧಿಸಿದವನಾಗಿ ಲೆಕ್ಕಿಸಬೇಕು. ಈ ಲೆಕ್ಕ ಪ್ರಕಾರ ವ್ಯಾಸನನ್ನು "ಧರ್ಮಪರನು" ಎಂದು ಹೇಳಬೇಕು. ಧರ್ಮಗಳನ್ನು ಬೋಧಿಸಿದ ಕೃಷ್ಣನನ್ನು "ಅಧರ್ಮಪರನು" ಎಂದು ಹೇಳಬೇಕು. ವ್ಯಾಸನು ಧರ್ಮಪರನು ಆದಾಗ "ಅಧರ್ಮವರನು" ಆಗುತ್ತಾನೆ. ಹಾಗೆ ಕೃಷ್ಣನು ಅಧರ್ಮಪರನು ಆದಾಗ "ಧರ್ಮವರನು" ಆಗುತ್ತಾನೆ. ಇಲ್ಲಿ ಪರನು, ವರನು ಎನ್ನುವ ಪದಗಳಿಗೆ ವಿವರ ತಿಳಿದು ಓದಬೇಕಾಗಿದೆ.

ವೇದಗಳನ್ನು ಹೇಳಿದ ವೇದವ್ಯಾಸನು, ಪುರಾಣಗಳನ್ನು ಬರೆದ ವ್ಯಾಸನು, ಕೆಲವರಿಂದ "ವ್ಯಾಸೋ ನಾರಾಯಣೋ ಹರಿ" ಎಂದು ಹೊಗಳಲ್ಪಟ್ಟ ವ್ಯಾಸನು, ಮತ್ತೆ ಕೆಲವರಿಂದ ವ್ಯಾಸಭಗವಾನನು ಎಂದು ಕರೆಸಿಕೊಂಡ ವ್ಯಾಸನು, ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ, ಭಗವಂತನು ಹೇಳಿದ ಭಗವದ್ಗೀತೆ ಪ್ರಕಾರ ವ್ಯಾಸನು ಅಧರ್ಮಯುಕ್ತನು, ಅಧರ್ಮವರನು, ಅಧರ್ಮಗಳನ್ನು ಬೋಧಿಸಿದ ಧರ್ಮಪರನು. ವ್ಯಾಸನ ಕಾಲದಲ್ಲಿಯೇ ವೇದಗಳು, ಪುರಾಣಗಳು ಮನುಷ್ಯ ರೊಳಗೆ ನೆಲೆಯೂರಿ ಧರ್ಮಗಳಿಗೆ ಹಾನಿ ಏರ್ಪಟ್ಟಾಗ, ತಪ್ಪದೆ ಭಗವಂತನು ಭೂಮಿಮೇಲಕ್ಕೆ ಬಂದು ಧರ್ಮಗಳನ್ನು ತಿಳಿಹೇಳಬೇಕಾಗಿ ಬಂದಿದೆ. ಈ

ನಮ್ಮ ಮಾತುಗಳು ಕೆಲವರಿಗೆ ವಿಡ್ಡೂರವಾಗಿ ಕಾಣಿಸಿದರೂ, ನಮ್ಮ ಮಾತುಗಳೆಲ್ಲ ವಾಸ್ತವಗಳೆ. ನಾವು ಈಗ ಹೇಳುವುದೆ ಅಲ್ಲ. ಆದಿನ ವ್ಯಾಸನೆ ಸ್ವತಃವಾಗಿ ತಾನು ಮಾಡಿರುವುದು ತಪ್ಪೆಂದು ಗ್ರಹಿಸಿದ್ದಾನೆ. ಆಗಲೆ ಎಂದರೆ ಭಗವದ್ಗೀತೆ ತನಗೆ ತಿಳಿಯುವ ಸಮಯಕ್ಕೆ 80 ವರ್ಷಗಳ ಮೊದಲೆ ವೇದಗಳು, ಪುರಾಣಗಳು ತನ್ನ ಮೂಲಕ ಬರೆಯಲ್ಪಟ್ಟು ಪ್ರಜೆಗಳೊಳಗೆ ಹೊರಟುಹೋಗಿವೆ. ತನ್ನ ತಪ್ಪು ಎಂತಹದ್ದೊ ಗೀತೆ ಮೂಲಕ ತಿಳಿದುಕೊಂಡ ವ್ಯಾಸನು, ತಾನು ಗೀತೆಯನ್ನು ದಾಟಿ ಪ್ರವರ್ತಿಸಿದ್ದಾನೆಂದು ತಿಳಿದು ಪಶ್ಚಾತ್ತಾಪ ಪಟ್ಟಿದ್ದಾನೆ. ತಾನು ಮಾಡಿದ ತಪ್ಪನ್ನು ಸರಿತಿದ್ದುಕೊಳ್ಳುವುದಕ್ಕೆ, ಅರ್ಜುನನ ಮೂಲಕ ಕೇಳಿದ ಸುಮಾರು ಆರು ನಿಮಿಷಗಳ ಸಮಾಚಾರವನ್ನು 578 ಶ್ಲೋಕಗಳ ರೂಪದಲ್ಲಿ ಬರೆದಿದ್ದಾನೆ. ಹಾಗೆ ಗೀತೆಯನ್ನು ಬರೆದ ವ್ಯಾಸನು ಅದರಲ್ಲಿನ ಧರ್ಮಗಳನ್ನು ಜೀರ್ಣಿಸಿಕೊಂಡು ಆಚರಿಸುತ್ತಾ ಗೀತೆಯ ಮೂಲಕ ಬದಲಾದ ಮೊಟ್ಟ ಮೊದಲಯವನಾಗಿದ್ದಾನೆ. ಆದಿನ ವ್ಯಾಸನು ಬರೆದ ಗೀತೆ 578 ಶ್ಲೋಕಗಳಾಗಿದ್ದು, ಈ ದಿನ ಸ್ವಲ್ಪ ಕಲುಷಿತವಾಗಿ 700 ಶ್ಲೋಕಗಳ ರೂಪದಲ್ಲಿ ನಮ್ಮ ಮುಂದಿದೆ. ಆ ಕಲುಷಿತ ಶ್ಲೋಕಗಳನ್ನು ನಮ್ಮ ರಚನೆಯಾದ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಯಲ್ಲಿ ಹೊರಗೆ ಇಟ್ಟಿರುವುದು ನಡೆದಿದೆ.

ಜಗತ್ತಿನಲ್ಲಿ ತ್ರೇತಾಯುಗದಲ್ಲಿ ಆದಿಕವಿಯಾದ ವಾಲ್ಮೀಕಿ ಇತಿಹಾಸವಾದ ರಾಮಾಯಣವನ್ನು ಬರೆದರೆ, ದ್ವಾಪರಯುಗದಲ್ಲಿ ವ್ಯಾಸನು ವೇದಗಳನ್ನು, ಪುರಾಣಗಳನ್ನು, ಇತಿಹಾಸವಾದ (ಚರಿತ್ರೆಯಾದ) ಭಾರತದಲ್ಲಿಯೇ ಭಗವದ್ಗೀತೆ ಯನ್ನು ಸಹ ಯುದ್ಧಕಾಂಡದಲ್ಲಿ ಹೊಂದಿಸಿ ಬರೆದಿದ್ದಾನೆ. ತ್ರೇತಾಯುಗದಲ್ಲಿನ ರಾಮಾಯಣದಲ್ಲಿ ವಾಲ್ಮೀಕಿ ಬರಹದಲ್ಲಿ, ರಾಮನು ದ್ವಾಪರಯುಗದಲ್ಲಿ ಕೃಷ್ಣನಾಗಿ ಹುಟ್ಟುತ್ತಾನೆಂದು ಎಲ್ಲಿಯೂ ಬರೆದಿಲ್ಲ. ಅದೇ ವಿಧವಾಗಿ ದ್ವಾಪರಯುಗದಲ್ಲಿನ ವ್ಯಾಸನು ಶ್ರೀಕೃಷ್ಣನು ಹಿಂದಿನ ಜನ್ಮದಲ್ಲಿ ರಾಮನೆಂದು ಬರೆದಿಲ್ಲ. ಅತ್ತ ವಾಲ್ಮೀಕಿಯಾಗಲಿ, ಇತ್ತ ವ್ಯಾಸನಾಗಲಿ ಬರೆಯದ ವಿಷಯವನ್ನು ಮಧ್ಯದಲ್ಲಿನ ಕವಿಗಳು ರಾಮನು, ಕೃಷ್ಣನು ಒಂದೇಯೆಂದು ಬರೆದಿದ್ದಾರೆ. ಈಗಿನ ಕವಿಗಳು

ಬರೆದ ಪ್ರಕಾರ ರಾಮನು ದೇವರಲ್ಲ, ಭಗವಂತನು ಅಲ್ಲ. ಹಾಗೆಯೇ ಕೃಷ್ಣನು ದೇವರು ಅಲ್ಲ, ಆದರೆ ಭಗವಂತನೆಂದು ಹೇಳಬಹುದು. ದೇವರಿಗೂ, ಭಗವಂತನಿಗೂ, ಮನುಷ್ಯನಿಗೂ ಅರ್ಥ ತಿಳಿದಾಗ ರಾಮನು ಕೃಷ್ಣನು ಏನಾಗುತ್ತಾರೋ ಹೇಳಬಹುದು. ರಾಮನನ್ನು ಕೃಷ್ಣನನ್ನು ಇಬ್ಬರನ್ನು ದೇವರಲ್ಲ ಎಂದು ಹೇಳಿದ್ದೇವೆ. ಇವರೆ ಅಲ್ಲ ಜಗತ್ತಿನಲ್ಲಿ ಶರೀರವನ್ನು ಧರಿಸಿ ಆಕಾರದಿಂದ ಯಾರು ಹುಟ್ಟಿದರೂ ಅವರು ದೇವರು ಅಲ್ಲ. ಕೃಷ್ಣನನ್ನು ರಾಮನನ್ನು ಪರಿಶೀಲಿಸಿ ನೋಡಿದರೆ ರಾಮನು ಸಾಧಾರಣ ಮನುಷ್ಯನಾಗಿ ಲೆಕ್ಕಿಸಲ್ಪಡುತ್ತಾನೆ. ಕೃಷ್ಣನು ಮಾತ್ರ ಭಗವಂತನಾಗಿ ಲೆಕ್ಕಿಸಲ್ಪಡುತ್ತಾನೆ. ಹಾಗೆ ಲೆಕ್ಕಿಸುವುದಕ್ಕೆ ಆಧಾರವು ಬ್ರಹ್ಮವಿದ್ಯಾಶಾಸ್ತ್ರವೇ. ದೇವರು ಭಗವಂತನು, ಮನುಷ್ಯ ಎನ್ನುವ ಈ ತ್ರೈತದಲ್ಲಿ ಯಾರು ದೇವರು, ಯಾರು ಭಗವಂತನು, ಯಾರು ಮನುಷ್ಯ ಎಂದು ನಿರ್ಣಯಿಸಿ ಹೇಳುವುದಕ್ಕೆ ದೈವಧರ್ಮಗಳಿಂದ ಕೂಡಿಕೊಂಡ ಬ್ರಹ್ಮವಿದ್ಯಾಶಾಸ್ತ್ರವೇ ಆಧಾರವು.

ಬ್ರಹ್ಮವಿದ್ಯಾಶಾಸ್ತ್ರದಲ್ಲಿ ದೈವಶಾಸನಗಳ ಪ್ರಕಾರ ಭಗವಂತನು ಮನುಷ್ಯ ಕುಮಾರನಾಗಿ ಹುಟ್ಟಿದ್ದಾನೆ. ಭಗವಂತನಾಗಿ ಹುಟ್ಟಿದವನು ಸಾಧಾರಣ ಮನುಷ್ಯ ಶರೀರವನ್ನು ಧರಿಸಿದರೂ ತಾಯಿಗರ್ಭದಿಂದ ಹುಟ್ಟುತ್ತಿದ್ದಾನೆ, ಆದ್ದರಿಂದ ಆತನು ಭಗವಂತನೇ. ಏಕೆಂದರೆ ತಾಯಿಗರ್ಭ ಒಳಗಿನಿಂದ ಸಜೀವವಾಗಿ ಹುಟ್ಟಿದವನು ಭಗವಂತನು. ತಾಯಿಗರ್ಭ ಒಳಗಿನಿಂದ ನಿರ್ಜೀವ ಶರೀರವು ಹುಟ್ಟಿದ ನಂತರ, ಆ ಶರೀರದೊಳಗೆ ಸೇರಿದವನು (ಜೀವಿಯು) ಭಗವಂತನಲ್ಲ, ಆತ ಸಾಧಾರಣ ಮನುಷ್ಯನೇ ಆಗುತ್ತಾನೆ. ಮನುಷ್ಯನಿಗೂ ಭಗವಂತನಿಗೂ ವ್ಯತ್ಯಾಸ ಹುಟ್ಟುವು ದರಲ್ಲಿಯೇ ಇದೆ. ತಾಯಿಗರ್ಭ (ಭಗ) ದಿಂದ ಹುಟ್ಟುವವನು ಭಗವಂತನು. ತಾಯಿಗರ್ಭದಲ್ಲಿ ಜೀವಿಯು ಯಾವಮಾತ್ರ ಇಲ್ಲದಂತೆ ಚೈತನ್ಯವಿಲ್ಲದ ಶರೀರ ಹುಟ್ಟಿದ ನಂತರ, ಆ ಶರೀರದೊಳಗೆ ಸೇರುವವನು ಮನುಷ್ಯ (ಜೀವಿ) ಎಂದು, ಆತನು ಭಗವಂತನು ಅಲ್ಲ ಎಂದು ಹೇಳಬಹುದು. ಯಾರು ಸಜೀವವಾಗಿ ಹುಟ್ಟುತ್ತಿದ್ದಾರೆ, ಯಾರು ಸಜೀವವಾಗಿ ಹುಟ್ಟಲಿಲ್ಲ ಎನ್ನುವ ವಿಷಯ ಪ್ರಸವ (ಹೆರಿಗೆ) ಸಮಯದಲ್ಲಿ ಹೆರಿಗೆ ಮಾಡುವ ವೈದ್ಯರಿಗೂ

ಸಹ ತಿಳಿಯದೆ ಇರುವುದರಿಂದ, ಭಗವಂತನನ್ನು ಗುರುತಿಸುವುದಕ್ಕೆ ಸಾಧ್ಯವಿಲ್ಲದಂತೆ ಹೋಗಿದೆ. ರಾಮನು ಹುಟ್ಟಿರುವುದು ನೋಡಿದರೆ, ತಾಯಿಗರ್ಭ ದಿಂದ ರಾಮನ ಶರೀರ ಹುಟ್ಟಿದ ನಂತರ ಹೊರಗಿರುವ ಶರೀರದೊಳಗೆ, ರಾಮನು ಎಂದು ಹೆಸರಿಟ್ಟಿರುವ ಜೀವಿಯು ಬಂದು ಸೇರಿದ್ದಾನೆ. ಕೃಷ್ಣನು ಹುಟ್ಟಿರುವುದನ್ನು ವಿವರಿಸಿಕೊಂಡು ನೋಡಿದರೆ, ಕೃಷ್ಣನು ಎದುರು ಕಾಲುಗಳಿಂದ ಹುಟ್ಟುವುದಲ್ಲದೆ, ಕಾಲು ಹೊರಬಿದ್ದಾಗ ತನ್ನ ಕಾಲುಗಳನ್ನು ಕದಲಿಸಿದ್ದಾನೆ. ಹಾಗೆ ಕದಲಿಸಿ ತಾನು ತಾಯಿಗರ್ಭದಲ್ಲಿಯೇ ಸಜೀವವಾಗಿ ಇದ್ದಂತೆ ಹೊರಗೆ ತಿಳಿಸಿದ್ದಾನೆ. ಇದರಿಂದ ಕೃಷ್ಣನು ಭಗದಿಂದ ಹುಟ್ಟಿದವನೆಂದು ಭಗವಂತನೆಂದು ತಿಳಿಯುತ್ತಿದೆ. ಈ ಒಂದು ಆಧಾರದಿಂದಲೇ ರಾಮನು ಮನುಷ್ಯ, ಕೃಷ್ಣನು ಭಗವಂತನು ಎಂದು ಹೇಳುತ್ತಿದ್ದೇವೆ. ಅಷ್ಟೇ ಅಲ್ಲದೆ ಭಗವಂತನು ದೈವ ಧರ್ಮಗಳನ್ನು ತಿಳಿಸುವುದಕ್ಕೆ ಬರುತ್ತಾನೆ, ಆದ್ದರಿಂದ ಕೃಷ್ಣನು ಭಗವದ್ಗೀತೆಯನ್ನು ಬೋಧಿಸಿದ್ದಾನೆ. ರಾಮನು ಸಾಧಾರಣ ಮನುಷ್ಯ, ಆದಕಾರಣ ರಾಮನು ತನ್ನ ಜೀವನದಲ್ಲಿ ಯಾವೊಂದು ದೈವಧರ್ಮವನ್ನು ತಿಳಿಸಲಿಲ್ಲ. ರಾಮನು ಗತಜನ್ಮದಲ್ಲಿ ಮಾಡಿಕೊಂಡ ಪ್ರಾರಬ್ಧಕರ್ಮದಿಂದ ಹುಟ್ಟಿ ಸುಖದುಃಖಗಳನ್ನು ಅನುಭವಿಸಿದ್ದಾನೆ. ಕೃಷ್ಣನು ಗತ ಜನ್ಮದಲ್ಲಿ ಮಾಡಿಕೊಂಡ ಕರ್ಮಪ್ರಕಾರ ಹುಟ್ಟಲಿಲ್ಲ. ಪ್ರತಿ ಹುಟ್ಟುವಿಕೆಗೆ ಕರ್ಮ ಇರುತ್ತದೆ, ಎನ್ನುವ ಸೂತ್ರದ ಪ್ರಕಾರ ಕೃಷ್ಣನು ಕರ್ಮದಿಂದಲೇ ಹುಟ್ಟಿದ್ದರೂ, ಆ ಕರ್ಮ ಆತನು ಮಾಡಿಕೊಂಡಿರುವುದು ಅಲ್ಲ. ಕೃಷ್ಣನ ಹುಟ್ಟುವಿಕೆಯಾಗಲಿ, ಜೀವನವಾಗಲಿ, ಮರಣವಾಗಲಿ ಕರ್ಮ ದಿಂದಲೇ ನಡೆದರೂ, ಆ ಕರ್ಮ ಆತನು ಮಾಡಿಕೊಂಡಿರುವುದು ಯಾವಮಾತ್ರವೂ ಅಲ್ಲ. ಆತನು ಬರೆದುಕೊಂಡ ಕರ್ಮ ಎಂದು ಹೇಳಬಹುದು. ಒಂದು ಜನ್ಮಕ್ಕೆ ಬೇಕಾದ ಕರ್ಮವನ್ನು ಕೃಷ್ಣನು ತಾನೇ ಸೃಷ್ಟಿಸಿಕೊಂಡು, ಅದರ ಪ್ರಕಾರ ಬಂದು ಹೋಗಿದ್ದಾನೆ. ತಾನು ಸೃಷ್ಟಿಸಿಕೊಂಡ ಕರ್ಮ ಪ್ರಕಾರ ಆತನು ಕೆಲಸಗಳು ಮಾಡಿದರೂ, ಆ ಕರ್ಮದಿಂದ ಕೃಷ್ಣನು ದುಃಖಪಡಲಿಲ್ಲ. ಏಕೆಂದರೆ ಆತನ ಕರ್ಮ ಆತನಿಗೆ ಮೊದಲೆ ತಿಳಿದಿದೆ. ಏನು ನಡೆಯುತ್ತದೋ ಮೊದಲೆ ತಿಳಿದಿರುವುದರಿಂದ ಆತನಿಗೆ ದುಃಖವಿಲ್ಲ. ಅದೇ ರಾಮನ ವಿಷಯದೊಳಗೆ

ಬಂದರೆ ಆತನ ಕರ್ಮ ಹೇಗಿದೆಯೋ ಆತನಿಗೆ ತಿಳಿದಿಲ್ಲ. ಆದ್ದರಿಂದ ಅನೇಕ ಸಂದರ್ಭಗಳಲ್ಲಿ ರಾಮನು ದುಃಖಪಟ್ಟಿದ್ದಾನೆ. ಸೀತೆಯನ್ನು ಕಳೆದುಕೊಂಡಾಗ ಮುಂದೆ ನಡೆಯುವುದು ಏನೂ ತಿಳಿದಿಲ್ಲ, ಆದ್ದರಿಂದ ರಾಮನು ಬಹಳ ದುಃಖಪಟ್ಟಿದ್ದಾನೆ. ಸಾಧಾರಣ ಮನುಷ್ಯನ ಜೀವನದಲ್ಲಿ ಕರ್ಮ ಹೇಗಿದೆಯೋ, ಹಾಗೆಯೇ ರಾಮನ ಜೀವನದಲ್ಲಿಯೂ ಸಹ ಕರ್ಮ ಇದೆ. ಸಾಧಾರಣ ಮನುಷ್ಯ ಕರ್ಮದಿಂದ ಎಂತಹ ಅನುಭವಗಳನ್ನು ಹೊಂದುತ್ತಿದ್ದಾನೋ, ಹಾಗೆಯೇ ರಾಮನೂ ಸಹ ಅಂತಹ ಅನುಭವಗಳನ್ನೇ ಹೊಂದಿದ್ದಾನೆ. ಆದ್ದರಿಂದ ರಾಮನನ್ನು ಮನುಷ್ಯನೆಂದು, ಕೃಷ್ಣನನ್ನು ಭಗವಂತ ನೆಂದು ಹೇಳುತ್ತಿದ್ದೇವೆ. ಇವರಿಬ್ಬರಲ್ಲಿ ಯಾರೂ ದೇವರು ಅಲ್ಲ ಎನ್ನುವುದು ಎಲ್ಲರಿಗೂ ಅರ್ಥ ವಾಗಿರುತ್ತದೆ.

ಹೀಗೆ ಎಷ್ಟೋ ವಿಧಗಳಿಂದ ನೋಡಿದಾಗ ರಾಮನು, ಕೃಷ್ಣನು ಒಂದೇ ಅಲ್ಲವೆಂದು ತಿಳಿಯುತ್ತಿದೆ. ಆಧ್ಯಾತ್ಮಿಕ ವಿಷಯಗಳಲ್ಲಿ ನೋಡಿದರೆ ರಾಮನು ಯಜ್ಞಗಳನ್ನು ರಕ್ಷಿಸಿ, ಯಜ್ಞಗಳನ್ನು ಮಾಡುವವರನ್ನು ಪ್ರೋತ್ಸಹಿಸಿದ್ದಾನೆ. ಕೃಷ್ಣನು ತನ್ನ ಗೀತೆಯಲ್ಲಿ ಯಜ್ಞಗಳು ಎರಡೇ ಇವೆಯೆಂದು, ಅವು ಶರೀರಾಂತರ್ಗತದಲ್ಲಿ ನಡೆಯುತ್ತಿವೆಯೆಂದು, ಶರೀರಾಂತರ್ಗತ ಯಜ್ಞದಿಂದ ಮೋಕ್ಷವನ್ನು ಹೊಂದಿ ದೇವರಲ್ಲಿ ಸೇರಬಹುದೆಂದು ತಿಳಿಸಿದ್ದಾನೆ. ಅಷ್ಟೇ ಅಲ್ಲದೆ ಹೊರಗೆ ಅನೇಕ ವಿಧಗಳ ಹೆಸರುಗಳಿಂದ ಮಾಡುವ ಯಾವೊಂದು ಯಜ್ಞದಿಂದಾಗಲಿ ದೇವರನ್ನು ಸೇರುವುದಕ್ಕೆ, ಮೋಕ್ಷ ಪಡೆಯುವುದಕ್ಕೆ ಸಾಧ್ಯವಿಲ್ಲವೆಂದು ಹೇಳಿದ್ದಾರೆ. ಬಾಹ್ಯಯಜ್ಞಗಳು ಅಧರ್ಮಗಳೆಂದು, ಧರ್ಮಗಳು ಅಲ್ಲದವುಗಳಿಂದ ದೇವರು ತಿಳಿಯುವುದಿಲ್ಲವೆಂದು ಸಹ ಹೇಳಿದ್ದಾನೆ. ಈವಿಧವಾಗಿ ಹೊರಗಿನ ಯಜ್ಞಗಳನ್ನು ಖಂಡಿಸಿದ ಕೃಷ್ಣನು ಭಗವಂತನೆಂದು, ಬಾಹ್ಯಯಜ್ಞ ಗಳನ್ನು ಪ್ರೋತ್ಸಹಿಸಿ ಕಾಪಾಡಿದ ರಾಮನು ಸಾಧಾರಣ ಮನುಷ್ಯನೆಂದು ಹೇಳಬಹುದು. ಇಷ್ಟು ವಿಧಗಳ ರಾಮನು, ಕೃಷ್ಣನು ಒಂದಲ್ಲ. ಅವರಿಬ್ಬರು ಬೇರೆಬೇರೆಯೆಂದು, ರಾಮನು ದೇವರಲ್ಲ ಮನುಷ್ಯ ಎಂದು, ಕೃಷ್ಣನು ಸಹ ದೇವರಲ್ಲ, ಆದರೆ ಭಗವಂತನೆಂದು ಹೇಳಬಹುದು.

ತ್ರೇತಾಯುಗದಲ್ಲಿ ರಾಮನಿಗಿಂತ ಮೊದಲು ಹುಟ್ಟಿದವನು ರಾವಣನು. ರಾವಣನು ಲಂಕೆಯ ಚಕ್ರವರ್ತಿ, ರಾಮನ ತಂದೆಯಾದ ದಶರಥನಿಗಿಂತ ರಾವಣನು ದೊಡ್ಡವನೆ. ರಾಮನಿಗಿಂತ ರಾವಣನು 65 ವರ್ಷಗಳು ದೊಡ್ಡವನು. ರಾವಣನು ದೈವಧರ್ಮಗಳನ್ನು ಸಂಪೂರ್ಣವಾಗಿ ತಿಳಿದವನು. ತ್ರೇತಾಯುಗದಲ್ಲಿ ಸಂಪೂರ್ಣ ಜ್ಞಾನಿಯಾಗಿ ರಾವಣಬ್ರಹ್ಮ, ತ್ರಿಕಾಲ ಜ್ಞಾನಿ ಎನ್ನುವ ಬಿರುದನ್ನು ಹೊಂದಿದವನು ರಾವಣನು ಒಬ್ಬನೇ. ಇಲ್ಲಿಯವರೆಗೂ ಜಗತಿಯಲ್ಲಿ ಬ್ರಹ್ಮ ಎನ್ನುವ ಬಿರುದನ್ನು ಹೊಂದಿದವನು ರಾವಣನು ಒಬ್ಬನೆ. ಬ್ರಹ್ಮವಿದ್ಯಾ ಶಾಸ್ತ್ರವನ್ನು ಸವಿವರವಾಗಿ ತಿಳಿದ ರಾವಣನಿಗೆ ಬಾಹ್ಯಯಜ್ಞಗಳು ಅಧರ್ಮಗಳೆಂದು ಸಹ ತಿಳಿದಿರುತ್ತದೆ. ಅಷ್ಟೇ ಅಲ್ಲದೆ ಭಗವದ್ಗೀತೆಯಲ್ಲಿ ಹೇಳಿದಂತೆ ವೇದಾಧ್ಯಯನವು, ತಪಸ್ಸು ಸಹ ಅಧರ್ಮಗಳೆಂದೇ ತಿಳಿದವನು. ತನ್ನ ಲಂಕಾರಾಜ್ಯದಲ್ಲಿ ದೈವಧರ್ಮಗಳಿಗೆ ವಿರುದ್ಧವಾಗಿ ವೇದಪಠನವಾಗಲಿ, ತಪಸ್ಸಾಗಲಿ, ಯಜ್ಞಗಳನ್ನಾಗಲಿ ಯಾರೂ ಮಾಡಬಾರದೆಂದು ಶಾಸಿದ್ದಾನೆ. ಲಂಕಾರಾಜ್ಯವು ಆದಿನ ಲಂಕಾದ್ವೀಪದಲ್ಲಿಯೇ ಅಲ್ಲದೆ ದಕ್ಷಿಣ ಭಾರತದೇಶದಲ್ಲಿ ಸಹ ವ್ಯಾಪಿಸಿದ್ದು, ಈದಿನ ಇರುವ ಆಂಧ್ರ, ತಮಿಳುನಾಡು, ಕರ್ನಾಟಕ, ಕೇರಳ ನಾಲ್ಕು ರಾಜ್ಯಗಳು ಆದಿನ ರಾವಣಬ್ರಹ್ಮನ ಪಾಲನೆಯಲ್ಲಿಯೇ ಇದ್ದವು. ಆ ಕಾಲದಲ್ಲಿ ಉತ್ತರ ಭಾರತದೇಶದಲ್ಲಿ ಯಜ್ಞಗಳು, ತಪಸ್ಸುಗಳು, ವೇದಾಧ್ಯಯನಗಳು ಹೆಚ್ಚಾಗಿ ಇದ್ದವು. ಉತ್ತರದೇಶ ಒಂದರ ಅಭ್ಯಾಸಗಳು ದಕ್ಷಿಣ ದೇಶದಲ್ಲಿ ಸಹ ಅಲ್ಲಲ್ಲಿ ಇದ್ದವು. ರಾವಣಬ್ರಹ್ಮನ ಆಧೀನದಲ್ಲಿರುವ ದಕ್ಷಿಣ ಭಾರತ ದೇಶದಲ್ಲಿ ಯಾರಾದರೂ ವೇದಗಳನ್ನು ಓದಿದರೂ, ಯಜ್ಞಗಳನ್ನು ಮಾಡಿದರೂ, ತಪಸ್ಸುಗಳನ್ನು ಮಾಡಿದರೂ ರಾವಣಬ್ರಹ್ಮ ಶಿಕ್ಷಿಸುತ್ತಿದ್ದನು. ದೈವಧರ್ಮಗಳಾದ ಯೋಗಗಳನ್ನು ಆಚರಿಸಿರೆಂದು, ಯೋಗಗಳನ್ನು ಆಚರಿಸದೆ ಯಜ್ಞ, ತಪಸ್ಸುಗಳನ್ನು ಮಾಡುವವರು, ವೇದಗಳು ಓದುವವರು ದೇವರಿಗೆ ವಿರುದ್ಧವಾದ ಅಧರ್ಮಗಳನ್ನು ಆಚರಿಸಿದಂತೆ ಆಗುತ್ತದೆಂದು, ಹಾಗೆ ಮಾಡಿದವರು ಶಿಕ್ಷಾರ್ಹರೆಂದು ಸಹ ತಿಳಿಸಿದ್ದಾನೆ. ಆದರೂ ಉತ್ತರ ಭಾರತದೇಶದವರು ರಾವಣಬ್ರಹ್ಮನಿಗೆ

ವಿರುದ್ಧವಾಗಿ ಆತನು ಹೇಳಿದಹಾಗೆ ಕೇಳದಂತೆ ಕೆಲವರನ್ನು ಪ್ರೇರೇಪಿಸಿ ಕಳ್ಳತನದಿಂದ ಯಜ್ಞಗಳನ್ನು ಮಾಡಿಸುತ್ತಿದ್ದರು.

ಆ ಕಾಲದಲ್ಲಿಯೇ ರಾವಣಬ್ರಹ್ಮವೊಂದರ ರಾಜ್ಯವಾದ ದಕ್ಷಿಣ ಭಾರತ ದೇಶದಲ್ಲಿನವರು, ಲಂಕೆಯಲ್ಲಿನವರು ಎಲ್ಲರೂ ರಾಕ್ಷಸರೆಂದು, ಉತ್ತರ ಭಾರತ ದೇಶದಲ್ಲಿನವರು ದೇವತೆಗಳೆಂದು ಉತ್ತರ ದೇಶದಲ್ಲಿನ ಕೆಲವರು ಪ್ರಚಾರ ಮಾಡಿದ್ದಾರೆ. ಆದ್ದರಿಂದ ಲಂಕೆಯೊಂದಿಗೂ ಸಹ ದಕ್ಷಿಣ ದೇಶದವರೆಲ್ಲರೂ ಒಂದು ಗುಂಪೆಂದು, ಉತ್ತರ ದೇಶದವರೆಲ್ಲರು ಮತ್ತೊಂದು ಗುಂಪು ಎಂದು ಎಲ್ಲರಿಗೂ ತಿಳಿಯುವಂತೆ ಪ್ರಚಾರ ನಡೆದುಹೋಗಿದೆ. ಆಗಲೇ ಅಲ್ಲ ಈ ಕಾಲದಲ್ಲಿ ಸಹ ದಕ್ಷಿಣದಕಡೆ ಇರುವವರೆಲ್ಲರೂ ದ್ರಾವಿಡರೆಂದು, ಉತ್ತರಕಡೆ ಇರುವವರೆಲ್ಲರೂ ಆರ್ಯರೆಂದು ಪ್ರಚಾರದಲ್ಲಿ ಇದೆ. ದ್ರಾವಿಡರೆಲ್ಲರೂ ರಾಕ್ಷಸಜಾತಿಯೆಂದು, ಆರ್ಯರೆಲ್ಲರು ದೇವತೆಗಳ ಜಾತಿಯೆಂದು ಈಗಲೂ ತಿಳಿದುಕೊಳ್ಳುವುದು ನಡೆಯುತ್ತಿದೆ. ಆ ಲೆಕ್ಕಪ್ರಕಾರ ಪ್ರಸ್ತುತ ಆಂಧ್ರ, ಕರ್ನಾಟಕ, ತಮಿಳುನಾಡು, ಕೇರಳದವರೆಲ್ಲರೂ ರಾಕ್ಷಸಜಾತಿಯೆಂದು, ದ್ರಾವಿಡರೆಂದು ಹೇಳಿರುವುದು ನಡೆಯುತ್ತಿದೆ. ಕೇವಲ ಎರಡು ನೂರು ವರ್ಷಗಳ ಪೂರ್ವದಲ್ಲಿ ಸಹ ಉತ್ತರ ಭಾರತದೇಶದಲ್ಲಿ ಸಂಸ್ಕೃತ ಬಂದ ಪಂಡಿತರು ಹೆಚ್ಚಾಗಿ ಇದ್ದರು, ದಕ್ಷಿಣ ಭಾರತದಲ್ಲಿ ಎಲ್ಲರೂ ಓದುಬಾರದ ಅನಕ್ಷಸ್ತರಾಗಿ ಇದ್ದರು, ಅದಕ್ಕಿಂತ ಪೂರ್ವದಲ್ಲಿ ದ್ರಾವಿಡ ರಾಜ್ಯದಲ್ಲಿ ಯಾರೂ ಪಾಂಡಿತ್ಯ ಇರುವವರು ಇಲ್ಲ. ಉತ್ತರದೇಶವೆಲ್ಲಾ ಪಾಂಡಿತ್ಯ ಇರುವವರು, ಸಂಸ್ಕೃತ ಭಾಷೆಯಮೇಲೆ ಪಟ್ಟುಇರುವವರು ಇರುವುದರಿಂದ, ತಾವು ಆರ್ಯರೆಂಬ ಭಾವನೆ ಅವರಲ್ಲಿ ಇರುವುದರಿಂದ, ದ್ರಾವಿಡರೆಲ್ಲರು ರಾಕ್ಷಸರೆಂಬ ಕಡಿಮೆಭಾವನೆ ದಕ್ಷಿಣ ದೇಶದವರ ಮೇಲೆ ಇತ್ತು. ಆರ್ಯರು ಅವರ ಪಾಂಡಿತ್ಯದಿಂದ ತಮ್ಮ ಪ್ರಾಂತ್ಯದವನಾದ ರಾಮನನ್ನು ದೊಡ್ಡದಾಗಿ ಚಿತ್ರಿಸಿ, ದ್ರಾವಿಡ ಪ್ರಾಂತದವನಾದ ರಾವಣನನ್ನು ನೀಚವಾಗಿ ಚಿತ್ರಿಸಿ, ಪುಸ್ತಕಗಳನ್ನು ಬರೆದಿರುವುದು ನಡೆದಿದೆ. ಅವುಗಳನ್ನು ಓದಿದವರೆಲ್ಲರು ರಾಮನನ್ನು ಒಳ್ಳೆಯವನು, ಉತ್ತಮನು ಎಂದು ತಿಳಿದು

ಕೊಂಡಿದ್ದಾರೆ. ರಾವಣಬ್ರಹ್ಮನನ್ನು ಕೆಟ್ಟವನು, ನೀಚನೆಂದು ತಿಳಿದುಕೊಂಡಿದ್ದಾರೆ. ಈ ವಿಧವಾಗಿ ಆರ್ಯರು ರಾಮನನ್ನು ದೊಡ್ಡದಾಗಿ, ರಾವಣನನ್ನು ನೀಚವಾಗಿ ಪ್ರಚಾರ ಮಾಡಿದ್ದಾರೆ. ಗತವನ್ನು ಕುರಿತು ಯೋಚಿಸದ ಪ್ರಜೆಗಳು, ತಾವು ಓದಿರುವುದೆ ನಿಜವೆಂದುಕೊಂಡು ನಂಬಿ ರಾಮನನ್ನು ದೇವರನ್ನಾಗಿ ರಾವಣನನ್ನು ರಾಕ್ಷಸನನ್ನಾಗಿ ಅರ್ಥ ಮಾಡಿಕೊಂಡಿದ್ದಾರೆ. ನಿಜಕ್ಕೆ ಆರ್ಯರು ತಮ್ಮ ಕುಟಿಲ ಕುತಂತ್ರ ರಚನೆಗಳನ್ನು ಬಿಟ್ಟು ಸತ್ಯವನ್ನು ಗ್ರಹಿಸಿದರೆ, ರಾಮನು ಸಾಧಾರಣ ಮನುಷ್ಯ, ರಾವಣನು ಬ್ರಹ್ಮಜ್ಞಾನಿ, ರಾಮನಿಗೆ ಆತ್ಮಜ್ಞಾನ ಯಾವಮಾತ್ರವೂ ತಿಳಿದಿಲ್ಲ. ರಾಮನ ಚಿಕ್ಕವಯಸ್ಸಿನಲ್ಲಿ ವಿದ್ಯಾಭ್ಯಾಸ ಮುಗಿದು ನಂತರ 16 ವರ್ಷಗಳಿಗೆ ಸೀತೆಯೊಂದಿಗೆ ಮದುವೆ ನಡೆದಿದೆ. ಮದುವೆ ನಡೆದ ತಕ್ಷಣ ಪಟ್ಟಾಭಿಷೇಕವೊಂದರ ಜಗಳಗಳು ನಡೆದಿವೆ. ತದನಂತರ ಆಕಸ್ಮಿಕವಾಗಿ ರಾಮನು ಅರಣ್ಯಕ್ಕೆ ಹೊರಟಿರುವುದು ನಡೆದಿದೆ. 14 ವರ್ಷಗಳ ವನವಾಸ ಮುಗಿಯುವ ಕೊನೆಯ ವರ್ಷದಲ್ಲಿ ರಾವಣನು ಸೀತೆಯನ್ನು ತನ್ನ ಲಂಕೆಗೆ ತೆಗೆದುಕೊಂಡು ಹೋಗಿದ್ದಾನೆ. ಆಗ ರಾಮನ ವಯಸ್ಸು ಕೇವಲ 30 ವರ್ಷಗಳಾಗಿದ್ದು, ರಾವಣಬ್ರಹ್ಮನ ವಯಸ್ಸು ಸುಮಾರು 95 ವರ್ಷಗಳಿರಬಹುದು. ನಂತರ ರಾವಣನ ತಮ್ಮನು ವಿಭೀಷಣನೊಂದಿಗೆ ರಾಮನು ಕುತಂತ್ರಮಾಡಿ ರಾವಣನನ್ನು ಸಾಯಿಸಿ, ಸುಮಾರು ಒಂದು ವರ್ಷಕ್ಕೆ ಸೀತೆಯನ್ನು ತಂದುಕೊಂಡಿದ್ದಾನೆ, ನಂತರ ಒಂದು ವರ್ಷಕ್ಕೆ ಸೀತೆಯನ್ನು ಅರಣ್ಯಕ್ಕೆ ಕಳಿಸಿದನು. ಆಗಿನಿಂದ ಮಾನಸಿಕ ಕ್ಷೋಭೆಯಿಂದ ತುಂಬಿಹೋಗಿದ್ದಾನೆ. ನಂತರ ಸುಮಾರು ಹತ್ತು ವರ್ಷಗಳಿಗೆ ತಮ್ಮ ಮಕ್ಕಳಾದ ಲವಕುಶರನ್ನು ಬೇಟಿಯಾಗಿದ್ದಾನೆ ಸೀತೆ ತನ್ನ ಹಿಂದೆ ಬರುವುದಕ್ಕೆ ನಿರಾಕರಿ ಸಿದ್ದಾಳೆ. ಆಗ ರಾಮನ ವಯಸ್ಸು ಸುಮಾರು 42 ವರ್ಷಗಳು. ನಂತರ ಜೀವನದಲ್ಲಿ ಕೂಡ ಸೀತೆಯನ್ನು ಕುರಿತು ಚಿಂತಿಸಿದ್ದು, ತಾನು ತಪ್ಪು ಮಾಡಿದ್ದೇನೆಂದು ದುಃಖಪಟ್ಟಿದ್ದು ನಡೆದಿದೆ. ಆದರೆ ಯಾವತ್ತೂ ರಾಮನು ದೈವಜ್ಞಾನದ ಕಡೆ ನೋಡಲಿಲ್ಲ. ಆತ ಜೀವನದಲ್ಲಿ ದೈವಜ್ಞಾನವನ್ನು ತಿಳಿದುಕೊಳ್ಳುವ ಅವಕಾಶವೆ ಬರಲಿಲ್ಲ. ದೈವಜ್ಞಾನದ ಮೇಲೆ ರಾಮನು ಎಂದೂ ಶ್ರದ್ಧೆಯನ್ನು ತೋರಿಸಲಿಲ್ಲ. ಸ್ವಲ್ಪವಾದರೂ ದೈವಜ್ಞಾನವಿಲ್ಲದ ರಾಮನನ್ನು

ಸಂಪೂರ್ಣ ಜ್ಞಾನನಿಧಿಯಾದ ಕೃಷ್ಣನೊಂದಿಗೆ ಹೋಲಿಸುವುದಕ್ಕೆ ಯಾವಮಾತ್ರ ಸಾಧ್ಯವಿಲ್ಲ. ಕೃಷ್ಣನು ದೇವರಿಂದ ಬಂದು ಹುಟ್ಟಿದ ದೇವರ ಅಂಶವಾದ ಭಗವಂತನು. ರಾಮನು ದೇವರ ಜ್ಞಾನವೇನೊ ತಿಳಿಯದ ವ್ಯಕ್ತಿ. ಕೃಷ್ಣನು ನಶಿಸಿಹೋಗುತ್ತಿದ್ದರು ಧರ್ಮಗಳನ್ನು ಮತ್ತೆ ಪುನರುದ್ಧರಿಸಿದ ಪ್ರವಕ್ತ, ರಾಮನು ಪ್ರಪಂಚ ಸಂಬಂಧ ನೀತಿ, ನ್ಯಾಯವನ್ನು ಕೂಡ ಆಚರಿಸದೆ, ತನ್ನ ಸ್ವಾರ್ಥಕ್ಕಾಗಿ ವಾಲಿಯನ್ನು ಕೊಂದ ಹಂತಕನು. ಅಷ್ಟೇ ಅಲ್ಲದೆ ತನ್ನಲ್ಲಿ ವೇಧಿಸುತ್ತಿರುವ ಅನುಮಾನದೊಂದಿಗೆ ಯಾವುದೊ ಒಂದು ಕುಂಟು ನೆಪ ತೋರಿಸಿ ತುಂಬು ಗರ್ಭಿನಿಯಾದ ತನ್ನ ಹೆಂಡತಿಯನ್ನು ಕ್ರೂರವಾಗಿ ಅರಣ್ಯಕ್ಕೆ ಕಳಿಸಿದನು. ಯಾವ ಶತ್ರುತ್ವವಿಲ್ಲದ ವಾಲಿಯನ್ನು ಸಾಯಿಸಿರುವುದು ಕ್ರೂರ ಹತ್ಯೆ ಅಲ್ಲವಾ ಎಂದು ಮುಸ್ಲಿಮ್‌ರು ಪ್ರಶ್ನಿಸಿದಾಗ ಏನು ಉತ್ತರ ಹೇಳಲಾರದೆ ತಲೆ ತಗ್ಗಿಸಿಕೊಳ್ಳಬೇಕಾಗಿ ಬಂದಿದೆ. ಸೀತೆಯನ್ನು ಅರಣ್ಯಕ್ಕೆ ಕಳಿಸಿರುವುದು ಅನ್ಯಾಯ ಅಲ್ಲವೆ! ಅದೇ ನಿಮ್ಮ ತಂಗಿಯನ್ನೊ, ಅಕ್ಕನನ್ನೊ ನಿಮ್ಮಬಾವ ಮೃಗಗಳಿರುವ ಅರಣ್ಯದೊಳಗಾಗಲಿ, ಮಾನವಮೃಗಗಳಿರುವ ದೊಡ್ಡ ನಗರದೊಳಗಾಗಲಿ ಒಂಟಿಯಾಗಿ ಬಿಟ್ಟರೆ ನಿಮ್ಮ ಬಾವನನ್ನು ಮನುಷ್ಯನೇ ಅಲ್ಲವೆಂದು ಅವನನ್ನು ಸಾಯಿಸುತ್ತೇನೆಂದು ದೂಷಿಸುವ ನೀವು, ರಾಮನನ್ನು ಏನು ಅನ್ನದಂತೆ ದೇವರೆಂದು ಹೊಗಳುತ್ತೀರಾ! ಎಂದು ಒಬ್ಬ ಕ್ರೈಸ್ತವನು ಕೇಳಿದಾಗ ಸಹ ಏನು ಉತ್ತರ ಹೇಳಲಾರದಿದ್ದೇವೆ. ಅಂತಹ ಸಂದರ್ಭಗಳೆಲ್ಲವನ್ನು ಅತಿಕ್ರಮಿಸಿ, ದೈವಾಂಶ ಸಂಭೂತನಾದ ಕೃಷ್ಣನಿಗೆ ಸಮಾನವಾಗಿ ಹೋಲಿಸಲಾರೆವು. ಆದ್ದರಿಂದ ರಾಮನು, ಕೃಷ್ಣನು ಒಂದು ಅಲ್ಲವೇ ಅಲ್ಲ ಎಂದು ಹೇಳುತ್ತಿದ್ದೇವೆ.

ಪ್ರಾಂತೀಯ ದ್ವೇಷದಿಂದ ಆರ್ಯರು ರಾವಣಬ್ರಹ್ಮನನ್ನು ಕಡಿಮೆ ಮಾಡುವುದೇ ಅಲ್ಲದೆ, ರಾಮನ ಲೋಪಗಳು ಕಾಣಿಸದಂತೆ ಇರುವುದಕ್ಕೆ ಕೃಷ್ಣನನ್ನು ಬಳಸಿಕೊಂಡು ರಾಮನು ಕೃಷ್ಣನು ಇಬ್ಬರು ಒಂದೇಯೆಂದಿದ್ದಾರೆ. ರಾಮನಿಗೆ ದೈವಜ್ಞಾನ ತಿಳಿದಿಲ್ಲವೆಂದು ಯಾರಾದರೂ ಅಂದರೆ, ದ್ವಾಪರ ಯುಗದಲ್ಲಿ ರಾಮನೇ ಕೃಷ್ಣಾವತಾರವೆತ್ತಿ ದೇವರ ಜ್ಞಾನವನ್ನು ಬೋಧಿಸಿದ್ದಾನೆಂದು

ಕೃಷ್ಣನನ್ನು ಬಳಸಿಕೊಳ್ಳುತ್ತಿದ್ದಾರೆ. ಕೃಷ್ಣನು ತುಂಟನು. ಎಷ್ಟೋಜನ ಸ್ತ್ರೀಯರೊಂದಿಗೆ ಸಂಬಂಧ ಇರುವವನು, ಎಂಟುಜನ ಪತ್ನಿಯರಿರುವವನು ಅಂದರೆ ಕೃಷ್ಣನ ತಪ್ಪನ್ನು ಮುಚ್ಚಿಡುವುದಕ್ಕೆ ರಾಮಾವತಾರದಲ್ಲಿ ಏಕಪತ್ನೀವ್ರತನೆಂದು ರಾಮನನ್ನು ತೋರಿಸುತ್ತಿದ್ದಾರೆ. ಈ ವಿಧವಾಗಿ ರಾಮನ ತಪ್ಪುಗಳನ್ನು ಮುಚ್ಚಿಡುವುದಕ್ಕೆ ಕೃಷ್ಣನನ್ನು, ಕೃಷ್ಣನ ತಪ್ಪುಗಳನ್ನು ಕೇಳಿದರೆ ರಾಮನನ್ನು ತೋರಿಸುವುದಕ್ಕೆ ಆರ್ಯರು ರಾಮನು ಕೃಷ್ಣನು ಒಂದೇ ಎಂದಿದ್ದಾರೆ. ಆದರೆ ಅದು ಎಷ್ಟು ನೋಡಿದರೂ ಸತ್ಯವಲ್ಲ.

ರಾಮನು ಅಯೊಧ್ಯದಲ್ಲಿ ಹುಟ್ಟುವುದಕ್ಕಿಂತ ಮುನ್ನವೆ 'ರಾಮ' ಎನ್ನುವ ಅಕ್ಷರಗಳ ಹೆಸರು ಇತ್ತು. ಆದರೆ ಕೃಷ್ಣನು ಮಧುರೆಯಲ್ಲಿ ಹುಟ್ಟುವುದಕ್ಕಿಂತ ಮುನ್ನ 'ಕೃಷ್ಣ' ಎಂಬ ಹೆಸರು ಎಲ್ಲಿಯೂ ಇಲ್ಲ. ರಾಮನು ತ್ರೇತಾಯುಗದಲ್ಲಿ ಹುಟ್ಟಿದ್ದಾನೆ. ಆದರೆ ರಾಮ ಎನ್ನುವ ಪದ ಕೃತಯುಗದಲ್ಲಿಯೇ ಇದೆ. ರಾಮ ಎನ್ನುವ ಎರಡಕ್ಷರಗಳ ಪದದಲ್ಲಿ ಎಷ್ಟೋ ಉನ್ನತವಾದ ದೈವಜ್ಞಾನ ಭಾವವು ಒಳಗೊಂಡಿದೆ. ಅದು ಏನೆಂದರೆ! "ರಾಮ" ಎನ್ನುವ ಎರಡಕ್ಷರಗಳ ಶಬ್ದವನ್ನು ಪ್ರಜೆಗಳಿಗೆ ಕೃತಯುಗದಲ್ಲಿನ ಜ್ಞಾನಿಗಳೆ ಪರಿಚಯ ಮಾಡಿದ್ದಾರೆ. ರಾಮನು ಹುಟ್ಟದ ಆ ಕಾಲದಲ್ಲಿ 'ರಾಮ' ಎನ್ನುವ ಎರಡಕ್ಷರಗಳಿಗೆ ಆಧ್ಯಾತ್ಮಿಕರೀತಿಯಲ್ಲಿ ವಿಶೇಷವಾದ ಅರ್ಥವಿರುತ್ತಿತ್ತು. 'ರ' ಎನ್ನುವುದರ ಅರ್ಥ ನಾಶ ಎಂದು ಮೊದಲೇ ತಿಳಿದುಕೊಂಡಿದ್ದೇವೆ. 'ರ' ಎಂದರೂ 'ರಾ' ಎಂದರೂ ಎರಡು ಒಂದೇ ಅರ್ಥಕೊಡುತ್ತಿವೆ, ದಶರಾ ಹಬ್ಬವನ್ನು ಕುರಿತು ಹೇಳಿಕೊಂಡಾಗಲೇ ತಿಳಿದುಕೊಂಡಿದ್ದೇವೆ. 'ಮ' ಎಂದರೆ **ನಾನು ಅಥವಾ ನನ್ನ** ಎಂಬ ಅರ್ಥ ಇದೆಯೆಂದು, ಮಮ ಎಂದರೆ ನನ್ನೊಂದರ ಎಂದೂ **"ಸುಬೋಧ"** ಗ್ರಂಥದಲ್ಲಿ 'ಮಾಮ' ನನ್ನು ಕುರಿತು ಹೇಳಿಕೊಂಡಾಗ ತಿಳಿದುಕೊಂಡಿದ್ದೇವೆ. ಆ ಪ್ರಕಾರ ನೋಡಿದರೆ ರಾಮ ಎನ್ನುವ ಮಾತಿನಲ್ಲಿ ನನ್ನದು ಎನ್ನುವುದು ನಾಶವಾಗ ಬೇಕೆನ್ನುವ ಅರ್ಥವನ್ನು ಒಳಗೊಂಡಿದೆ. ನಾನು ಎನ್ನುವವನಾದ ಜೀವಿಯು ನಾಶವಾಗಬೇಕೆಂದು ಅರ್ಥವು, ಆ ಎರಡಕ್ಷರಗಳ ಶಬ್ದದಲ್ಲಿ ಇದೆ. ಜೀವಿಯು

ನಾಶವಾದರೆ ದೇವರಾಗಿ ಬದಲಾಗಿಹೋಗುತ್ತಾನೆ, ಎಂದರೆ ದೇವರಲ್ಲಿ ಬೆರೆತು ಹೋಗುತ್ತಾನೆ. ಒಬ್ಬ ಜೀವಿಯು ಜನ್ಮರಾಹಿತ್ಯವನ್ನು ಕೋರಿಕೊಳ್ಳುತ್ತಾ, ದೇವರಲ್ಲಿ ಐಕ್ಯವಾಗುವ ಅರ್ಥ "ರಾಮ" ಎಂಬ ಶಬ್ದದಲ್ಲಿ ಒಳಗೊಂಡಿದೆ. ಬ್ರಹ್ಮಜ್ಞಾನದ ಪ್ರಕಾರ ಪ್ರತಿ ಜೀವಿಯು ದೇವರಲ್ಲಿ ಐಕ್ಯವಾಗುವಂತೆ ಕೋರಿಕೊಳ್ಳಬೇಕು. ಆ ವಿಧವಾಗಿಯೇ ಪ್ರವರ್ತಿಸಬೇಕು. ಜೀವಿಯು ಎಂದಿಗಾದರೂ ಜೀವಿಯಲ್ಲಿ ಸೇರಿ ಹೋಗಬೇಕಾದವನೆ. ಜೀವಿ ಎನ್ನುವ ಮಾತು ಇಲ್ಲದಂತೆ ಹೋಗಿ, ದೇವರೆನ್ನುವ ಮಾತಾಗಿ ಬದಲಾವಣೆ ಹೊಂದಬೇಕಾಗಿದ್ದೆ. ಆದ್ದರಿಂದ ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗವೆಂಬ ಅಧ್ಯಾಯದಲ್ಲಿ ಜೀವಿಯು ಕ್ಷರನು ಎಂದಿದ್ದಾರೆ. ಕ್ಷರನು ಎಂದರೆ ನಾಶವಾಗುವವನೆಂದು ಅರ್ಥ. "ನಾಶಹೊಂದುವವನು ನಾನು" ಎನ್ನುವ ಜ್ಞಾಪಕವನ್ನು ಯಾವಾಗಲೂ ಮನುಷ್ಯ ಮರೆತುಹೋಗದಂತೆ "ರಾಮ" ಎನ್ನುವ ಮಾತನ್ನು ಸಂದರ್ಭದಲ್ಲಾಗಲಿ, ಆಸಂದರ್ಭದಲ್ಲಾಗಲಿ ಆಗಾಗ ಹೇಳುವಂತೆ ಹಿರಿಯರು ಅಭ್ಯಾಸಮಾಡಿದ್ದಾರೆ. ಪೂರ್ವದಲ್ಲಿ ಎರಡಕ್ಷರಗಳ ರಾಮ ಎನ್ನುವ ಮಾತಿನಲ್ಲಿ ಎಷ್ಟು ಅರ್ಥವಿದೆಯೋ ಎಲ್ಲರಿಗೂ ತಿಳಿದಿರುತ್ತಿತ್ತು. ಕೃತಯುಗ ದಲ್ಲಿಯೇ ರಾಮ ಎನ್ನುವ ಶಬ್ದ ಆಧ್ಯಾತ್ಮಿಕಕ್ಕೆ ಆದರ್ಶವಾಗಿರುತ್ತಿತ್ತು. ನಾನು ನಾಶವಾಗುವವ ನೆಂದು ಅದರಲ್ಲಿ ದೃಢಭಾವ ರಾಮ ಎನ್ನುವ ಎರಡಕ್ಷರಗಳಿಂದ ಇರುತ್ತಿತ್ತು. ಭಗವದ್ಗೀತೆಯಲ್ಲಿ ಹೇಳಿದ ಕ್ಷರ ಭಾವ, ಎಂದರೆ ನಾಶ ಭಾವನೆ 'ರ' ಯಿಂದ, ನಾನು ಎನ್ನುವ ಭಾವನೆ 'ಮ' ಯಿಂದ ಉಂಟಾಗುತ್ತಿದೆ. ಆದು ದರಿಂದ 'ರಾಮ' ಶಬ್ದ ಪರಮ ಪವಿತ್ರ ಅರ್ಥದಿಂದ ಕೂಡಿಕೊಂಡ ಶಬ್ದವಾಗಿ ಪೂರ್ವದಲ್ಲಿ ಭಾವಿಸುತ್ತಿದ್ದರು. ದೊಡ್ಡ ಭಾವವಿರುವ ರಾಮ ಶಬ್ದವನ್ನು ದಶರಥಪುತ್ರನಿಗೆ ನಾಮಧೇಯವಾಗಿ ಇಟ್ಟುಕೊಂಡಿದ್ದಾರೆ. ಆ ದಿನದಿಂದ ಆಧ್ಯಾತ್ಮಿಕ ಜ್ಞಾನ ಪ್ರಜೆಗಳಲ್ಲಿ ಕಡಿಮೆಯಾಗುವುದರಿಂದ, ರಾಮ ಎನ್ನುವ ಎರಡಕ್ಷರಗಳು ಶ್ರೀರಾಮ ಎನ್ನುವ ಮೂರಕ್ಷರಗಳಾಗಿ ಬದಲಾಗುವುದೂ, ದಶರಥ ಪುತ್ರನಿಂದಲೇ ರಾಮ ಎನ್ನುವ ಹೆಸರು ಬಂದಿದೆಂದು, ರಾಮ ಎಂದರೆ ದಶರಥ ರಾಮನೇ ಎನ್ನುವ ಭಾವನೆ ಎಲ್ಲರಲ್ಲಿಯೂ ಇದೆ. ಅದೇ ಭಾವನೆ ಈ ದಿನಕ್ಕು ಉಳಿದುಹೋಗಿದೆ.

ರಾಮ ಎಂದರೆ ದಶರಥಪುತ್ರನೇ ಎಂದು ರಾಮದಾಸು ಎಂದುಕೊಂಡರೆ, ರಾಮದಾಸನಿಗಿಂತ ದೊಡ್ಡವನಾದ ಕಬೀರ್‌ದಾಸು ತಾನು ಭಾವಿಸಿಕೊಂಡ ರಾಮ ದಶರಥ ರಾಮನಲ್ಲ ಎಂದಿದ್ದಾನೆ. ಆದ್ದರಿಂದ ಒಂದು ಸಂದರ್ಭದಲ್ಲಿ ದಶರಥ ರಾಮನೇ ಕಾಣಿಸಿದರೂ "ನೀನು ನನ್ನ ರಾಮನು ಅಲ್ಲ ಹೋಗು!" ಎಂದಿದ್ದಾನಂತೆ. ನಾನು ನೆನೆಯುವ ರಾಮನು ನೀನು ಅಲ್ಲವೆಂದು ಶ್ರೀರಾಮನನ್ನು ಕಬೀರ್ ಅಂದಿದ್ದಾನೆಂದರೆ, ಕಬೀರ್‌ಗೆ ಪೂರ್ವದಲ್ಲಿನ ಜ್ಞಾನ ಆಧ್ಯಾತ್ಮಿಕದ ಪ್ರಕಾರ ತಿಳಿದಿದೆಯೆನ್ನುವ ಮಾತು. ರಾಮದಾಸನಿಗೆ ಆಧ್ಯಾತ್ಮಿಕ ತಿಳಿಯದೆ ರಾಮ ಎನ್ನುವ ಮಾತು ಶ್ರೀರಾಮನ ಹೆಸರೇ ಎಂದುಕೊಂಡಿದ್ದಾನೆ ಒಬ್ಬ ರಾಮದಾಸನೇ ಅಲ್ಲ, ಆದಿನದ ತ್ರೇತಾಯುಗದಿಂದ ಎಷ್ಟೋಜನ ದಶರಥ ರಾಮನೇ ನಿಜವಾದ ರಾಮನೆಂದು ನೆನೆದವರೂ ಇದ್ದಾರೆ. ಅಂತಹವರೆಲ್ಲರೂ ಶ್ರೀರಾಮನ ಮೇಲಿನ ಭಕ್ತಿಯಿಂದ ಗುಡಿಕಟ್ಟಿ ರಾಮನನ್ನು ಪೂಜಿಸುತ್ತಿದ್ದಾರೆ. ವಿಶೇಷವೇನೆಂದರೆ ಕೃಷ್ಣನ ಗುಡಿ ಒಂದಿದ್ದರೇ ರಾಮನ ಗುಡಿಗಳು ಹತ್ತು ಇರುತ್ತವೆ. ಆ ಲೆಕ್ಕ ಪ್ರಕಾರ ಕೃಷ್ಣನಿಗಿಂತ ರಾಮನೆ ಪ್ರಜೆಗಳಿಗೆ ಉತ್ತಮನಾಗಿ ಕಾಣಿಸಿದ್ದಾನೆಂದು ಅರ್ಥವಾಗುತ್ತಿದೆ. ರಾಮನು ಕೃಷ್ಣನು ಇಬ್ಬರು ಒಂದೇಯೆಂದು ಹೇಳುವವರು ಸಹ ರಾಮನ ಭಕ್ತರಾಗಿಯೇ ಇರುತ್ತಾರೆ. ಕೃಷ್ಣನು ಹುಟ್ಟಿದ ಉತ್ತರದೇಶದಲ್ಲಿ ಸಹ ಕೃಷ್ಣನ ದೇವಾಲಯಗಳು ಕಡಿಮೆ ಇರುವುದನ್ನು ಗಮನಿಸಬಹುದು. ರಾಮ ಎನ್ನುವ ಎರಡಕ್ಷರಗಳು ಎಷ್ಟೋ ಜ್ಞಾನದಿಂದ ಕೂಡಿಕೊಂಡಿರುವವಾಗಿ ಇರುವುದರಿಂದ, ಆ ಎರಡಕ್ಷರಗಳನ್ನು ಒಂದೇಸಲ ಉಚ್ಚರಿಸಿದರೂ ಅದರ ಅರ್ಥವನನ್ನುಸರಿಸಿ ಎಷ್ಟೋ ಸಾರ್ಥಕತೆಯಾಗುತ್ತದೆಂದು ಜ್ಞಾನಿಗಳು ಹೇಳಿದ್ದಾರೆ. ಅದೆಲ್ಲವೂ ನಿಜವೇ ಆದರೂ ರಾಮ ಎನ್ನುವ ಪದ ಅಯೋಧ್ಯರಾಮನಿಗಿಂತ ಮೊದಲಿನಿಂದ ಇದೆಯೆಂದು ಯಾರಿಗೂ ತಿಳಿಯದಂತೆ ಹೋಗುವುದು, ಈದಿನ ಮನುಷ್ಯರಲ್ಲಿನ ದೊಡ್ಡ ಅಜ್ಞಾನವಾಗಿದೆ. ಇಂಥಹ ಪರಿಸ್ಥಿತಿ ಭವಿಷ್ಯತ್ತಿನಲ್ಲಿ ಬರುತ್ತದೇನೊ ಎಂದು ತ್ರೇತಾಯುಗದಲ್ಲಿಯೇ ಊಹಿಸಿದ ಹಿರಿಯರು ಅಂತಹ ಪರಿಸ್ಥಿತಿ ಬರದಂತಿರುವುದಕ್ಕೆ, 'ರಾಮ' ಎನ್ನುವ ಎರಡಕ್ಷರಗಳ

ಶಬ್ದಕ್ಕೆ ಆಧ್ಯಾತ್ಮಿಕ ಬೆಲೆ ಇರುವುದಕ್ಕೆ, ದಶರಥಪುತ್ರನಿಗೆ ರಾಮ ಎಂದು ಹೆಸರಿಟ್ಟ ದಿನವೇ ಒಂದು ನಿರ್ಣಯಕ್ಕೆ ಬಂದಿದ್ದಾರೆ. ಆಧ್ಯಾತ್ಮಿಕ 'ರಾಮ' ನಿಗೆ, ಮನುಷ್ಯನಾಗಿ ಹುಟ್ಟಿದ 'ರಾಮ' ನಿಗು ವ್ಯತ್ಯಾಸ ಇರುವಂತೆ, ಆ ವ್ಯತ್ಯಾಸವನ್ನು ಪ್ರಜೆಗಳು ಸುಲಭವಾಗಿ ಗ್ರಹಿಸುವಂತೆ ಮಾಡಬೇಕೆಂದುಕೊಂಡಿದ್ದಾರೆ. ಆದುದರಿಂದ ಹುಟ್ಟಿದ ವ್ಯಕ್ತಿಯ ಹೆಸರು 'ರಾಮ' ಎಂದರೂ ಇದು ವ್ಯಕ್ತಿಯ ಹೆಸರು ಎಂದು ತಿಳಿಯವಹಾಗೆ ಗುರುತುಗಳಿಡ ಬೇಕೆಂದುಕೊಂಡಿದ್ದಾರೆ. ಆದ್ದರಿಂದ ಹುಟ್ಟಿದ ರಾಮನನ್ನು 'ದಶರಥ ರಾಮ' ಎಂದು ರಾಮನಿಗಿಂತ ಮೊದಲು ತಂದೆ ಹೆಸರನ್ನು ಗುರುತಿಗಾಗಿ ಉಚ್ಛರಿಸುವಂತೆ ಮಾಡಿದ್ದಾರೆ. ಆಧ್ಯಾತ್ಮಿಕ ರಾಮ ಶಬ್ದಕ್ಕೆ ಮುಂದೆ ಹಿಂದೆ ಗುರುತು ಏನು ಇರುವುದಿಲ್ಲ. ಶರೀರದಿಂದ ಹುಟ್ಟಿದ ರಾಮನಿಗೆ ಮಾತ್ರ ಮುಂದೆ ಬಹಳ ಗುರುತುಗಳಿವೆ. ಅವುಗಳನ್ನು ನೋಡಿದರೆ ಸೀತಾರಾಮ, ಅಯೊಧ್ಯ ರಾಮ, ಕೋದಂಡರಾಮ, ಪಟ್ಟಾಭಿರಾಮ, ದಶರಥರಾಮ, ಕೌಸಲ್ಯರಾಮ ಎಂದು ರಾಮನಿಗೆ ಬಹಳ ಗುರುತುಗಳು ಇವೆ. ಈ ವಿಷಯ ತಿಳಿಯದ ರಾಮದಾಸು ಕಾಣಿಸುವ ಅಯೊಧ್ಯ ರಾಮನನ್ನು ಆರಾಧಿಸಿದ್ದಾನೆ. ಗುರುತುಗಳ ಜ್ಞಾನ ತಿಳಿದ ಕಬೀರ್‌ದಾಸ್ ಕಾಣಿಸದ ಆತ್ಮಾರಾಮನನ್ನು ಆರಾಧಿಸಿದ್ದಾನೆ. ಆದ್ದರಿಂದ ಅಯೊಧ್ಯ ರಾಮನು ಕಾಣಿಸಿದರೂ ನೀನು ನನ್ನ ರಾಮನಲ್ಲ ಹೋಗು ಎಂದನು.

ಸ್ವಲ್ಪ ಜ್ಞಾನ ತಿಳಿದು ನಿತ್ಯ ರಾಮ ಶಬ್ದವನ್ನು ಉಚ್ಚರಿಸಿದ ಕಬೀರ್‌ದಾಸ್ ಅಯೊಧ್ಯ ರಾಮನನ್ನು, ನೀನು ನನ್ನ ರಾಮನು ಅಲ್ಲ ಎಂದಾಗ, ದೇವರೊಂದರ ಅಂಶವಾಗಿ ಬಂದಿರುವ ಭಗವಂತನಾದ ಕೃಷ್ಣನನ್ನು ಕೇವಲ ಮಾನವ ಮಾತ್ರನಾದ ರಾಮನನ್ನು ಸೇರಿಸಿ ಒಂದೇ ಎನ್ನುವುದು ತಪ್ಪಾಗುತ್ತದೆ. ಆದ್ದರಿಂದ ಎಲ್ಲಾ ವಿಧಗಳಲ್ಲಿ ಯೋಚಿಸಿ ರಾಮನು ಕೃಷ್ಣನು ಒಂದೇ ಅಲ್ಲವೆಂದು ಹಿರಿಯರಾದ ಜ್ಞಾನಿಗಳೆನ್ನುತ್ತಿದ್ದಾರೆ. ಅವರ ಮಾತನ್ನೇ ಸಮರ್ಥಿಸುತ್ತಾ ನಾವೂ ಸಹ ರಾಮನು ಬೇರೆ, ಕೃಷ್ಣನು ಬೇರೆ ಎನ್ನುತ್ತಿದ್ದೇವೆ. ಈ ವಿಧವಾಗಿ ಹೇಳುವುದರಿಂದ ಅಯೊಧ್ಯ ರಾಮನ ಭಕ್ತರಿಗೆ ಸ್ವಲ್ಪ ಬಾಧೆಯಾಗಿರಬಹುದು. ಇಲ್ಲಿ ಗಮನಿಸಬೇಕಾದ

ವಿಷಯವೇನೆಂದರೆ ಇಬ್ಬರೂ ಒಂದು ಅಲ್ಲವೆನ್ನುತ್ತಿದ್ದೇವೆ ಹೊರತು ಅಯೊಧ್ಯ ರಾಮನನ್ನು ಪೂಜಿಸಬೇಡೆಂದಾಗಲಿ, ಆತನನ್ನು ಬಿಟ್ಟು ಕೃಷ್ಣನನ್ನು ಹಿಡಿದುಕೊಳ್ಳಿ ರೆಂದು ಹೇಳಲಿಲ್ಲ. ಆಧ್ಯಾತ್ಮಿಕ ಜ್ಞಾನರೀತ್ಯಾ ಇಬ್ಬರು ಒಂದಲ್ಲವೆನ್ನುತ್ತಿದ್ದೇವೆ ಹೊರತು, ಆರಾಧಿಸುವುದಕ್ಕೆ ಅನರ್ಹನೆಂದು ಹೇಳುತ್ತಿಲ್ಲವೆಂದು ಗ್ರಹಿಸಬೇಕು. ಅಯೊಧ್ಯ ರಾಮನನ್ನು ಪೂಜಿಸಿದರೂ ಅಂತರಂಗದಲ್ಲಿನ ರಾಮನನ್ನು ಮರೆಯಬಾರದೆಂದು, ರಾಮ ಎನ್ನುವ ಎರಡಕ್ಷರಗಳ ಶಬ್ದ ಪವಿತ್ರವಾದುದೆಂದು, ರಾಮ ಜಪವನ್ನು ಮಾಡಿದವರು ಎಷ್ಟೋಜನ ಪವಿತ್ರರಾಗಿದ್ದಾರೆಂದು ತಿಳಿಸುತ್ತಿದ್ದೇವೆ.



## ಶ್ರೀಕೃಷ್ಣನು ನವಿಲುಗರಿಯನ್ನು ಏಕೆ ಧರಿಸಿದ್ದಾನೆ?

ಬಹುಶಃ ನವಿಲುಗರಿಯನ್ನು ನೋಡದವರಿರುವುದಿಲ್ಲ. ನವಿಲುಗರಿ ಯನ್ನು ಚೆನ್ನಾಗಿ ಗಮನಿಸಿದರೆ ಅದರಲ್ಲಿ ನಾಲ್ಕು ದುಂಡನೆ ಭಾಗಗಳು ನಾಲ್ಕು ಪ್ರತ್ಯೇಕವಾದ ಬಣ್ಣಗಳಲ್ಲಿ ಕಂಡುಬರುತ್ತವೆ. ನಾಲ್ಕು ಬಣ್ಣಗಳ ಬಲೆಯಾ ಕಾರದಲ್ಲಿರುವ ನವಿಲುಗರಿಯನ್ನು ಕೃಷ್ಣನು ತಲೆಮೇಲೆ ಎಲ್ಲರಿಗೂ ಕಾಣಿಸುವಂತೆ ಧರಿಸಿದ್ದಾನೆ. ಆ ವಿಧವಾಗಿ ಬಣ್ಣಗಳ ಗರಿಯನ್ನು ಧರಿಸುವುದು ಅಲಂಕಾರಕ್ಕೆಂದು ಕೆಲವರಂದು ಕೊಂಡಿರಬಹುದು. ನವಿಲುಗರಿಯನ್ನು ಕುರಿತು ಏನು ಆಲೋಚಿಸದವರು ಸಹ ಕೆಲವರು ಇದ್ದಾರೆ. ಕೃಷ್ಣನು ಎಷ್ಟೋ ದೊಡ್ಡವನು, ಧನಿಕನಾಗಿರುವವನು, ಯಾವುದೋ ಅರ್ಥದಿಂದ ಧರಿಸಿರುತ್ತಾನೆಂದು ತಿಳಿದುಕೊಳ್ಳುವವರು ಕೆಲವರು ಇದ್ದಾರೆ. ಕೆಲವರೇನೊ ದೃಷ್ಟಿದೋಷ (ಜಿಷ್ಠಿ) ತಗಲದಂತಿರುವುದಕ್ಕೆ ಹಾಗೆ ಇಟ್ಟುಕೊಂಡಿದ್ದಾನೆಂದು ಹೇಳಿಕೊಂಡಿದ್ದಾರೆ. ಮತ್ತೆ ಕೆಲವರು ಸ್ತ್ರೀಯರ ಆಕರ್ಷಣೆಗಾಗಿ ಅದನ್ನು ಇಟ್ಟುಕೊಂಡಿದ್ದಾನೆಂದು ಭಾವಿಸಿಕೊಳ್ಳುವುದು ನಡೆದಿದೆ. ಈ ವಿಧವಾಗಿ ಯಾರಿಗೆ ತೋಚಿದ್ದು ಅವರು

ತಿಳಿದುಕೊಳ್ಳುವುದು ನಡೆದಿದೆ. ಕೃಷ್ಣನು ಸಾಕ್ಷಾತ್ತು ಭಗವಂತನು ಅಲ್ಲವೆ! ಭಗವಂತನು ಮನುಷ್ಯರಿಗೆ ದೈವ ಧರ್ಮಗಳನ್ನು, ಆತ್ಮಜ್ಞಾನವನ್ನು ತಿಳಿಸುವುದಕ್ಕೆ ಭೂಮಿಮೇಲೆಕ್ಕೆ ಬಂದಿದ್ದಾನೆ ಅಲ್ಲವೆ! ಅಷ್ಟು ದೊಡ್ಡವನು ನವಿಲುಗರಿಯನ್ನು ದೃಷ್ಟಿದೋಷಕ್ಕೊ, ಅಲಂಕಾರಕ್ಕೊ, ಆಕರ್ಷಣೆಗೋ ಧರಿಸಿದ್ದಾನೆಂದುಕೊಳ್ಳುವುದು ತಪ್ಪಾಗುತ್ತದೆ. ಆತನ ಜೀವನವೆಲ್ಲಾ ಜ್ಞಾನಸಂದೇಶದಿಂದಲೇ ಕೂಡಿಕೊಂಡಿರುತ್ತದೆ. ಆತನು ನವಿಲುಗರಿಯನ್ನು ಧರಿಸಿದರೂ ಜ್ಞಾನಸಂದೇಶದಿಂದ ಕೂಡಿಕೊಂಡ ಅರ್ಥವೇ ಇರುತ್ತದೆ. ಹಾಗೆ ಧರಿಸುವುದು ಯಾವ ಭಾವನೆಯಿಂದ ಕೂಡಿಕೊಂಡಿ ದೆಯೇ ನಾವು ಹುಡಿಕಿ ನೋಡಿಕೊಳ್ಳಬೇಕು. ಹಾಗೆ ವಿವರಿಸಿಕೊಂಡು ನೋಡಿದರೆ, ಕೃಷ್ಣನು ನವಿಲುಗರಿಯನ್ನು ತಲೆಮೇಲೆ ಧರಿಸಿರುವುದು ಯಾವುದಕ್ಕಾಗಿ ಎಂದು ಮೊದಲು ನೋಡಬೇಕು. ಮನುಷ್ಯನಿಗೆ ಶಿರಸ್ಸೇ ಅಜ್ಞಾನಕ್ಕಾಗಲಿ, ಜ್ಞಾನಕ್ಕಾಗಲಿ ನಿಲಯವಾಗಿ ಇದೆ. ಭಗವಂತನಾದ ಕೃಷ್ಣನು ತನ್ನ ತಲೆಮೇಲೆ ನವಿಲುಗರಿಯನ್ನು ಧರಿಸಿದ್ದಾನೆ. ಕೃಷ್ಣನ ತಲೆ ಜ್ಞಾನಕ್ಕೆ ನಿಲಯವಾಗಿದೆ. ತಲೆಯಲ್ಲಿರುವ ಜ್ಞಾನವನ್ನು ಬಾಹ್ಯವಾಗಿ ನೋಡುವುದಕ್ಕೆ ನವಿಲುಗರಿಯನ್ನು ಧರಿಸಿದ್ದಾನೆಂದು ಅರ್ಥ ವಾಗುತ್ತಿದೆ.

ಪ್ರತಿ ಮನುಷ್ಯನ ತಲೆಯೊಳಗೆ, ತಲೆ ಮಧ್ಯಭಾಗದಲ್ಲಿ ಭ್ರೂಮಧ್ಯ ಸ್ಥಾನದಲ್ಲಿ ನಾಲ್ಕುಚಕ್ರಗಳ ಸಮುದಾಯವಿದೆ. ಈ ನಾಲ್ಕು ಚಕ್ರಗಳು ಬ್ರಹ್ಮನಾಡಿಯಲ್ಲಿನ ಆತ್ಮವನ್ನು ಆಧಾರವಾಗಿ ಮಾಡಿಕೊಂಡು ಜೋಡಣೆ ಯಾಗಿರುತ್ತದೆ. ಎಲ್ಲದಕ್ಕಿಂತ ಮೇಲಿರುವ ಚಕ್ರದ ಹೆಸರು ಬ್ರಹ್ಮಚಕ್ರ. ಅದಕ್ಕಿಂತ ಕೆಳಗಿರುವ ಚಕ್ರವೊಂದರ ಹೆಸರು ಕಾಲಚಕ್ರ, ಅದಕ್ಕಿಂತ ಕೆಳಗಿರುವ ಚಕ್ರದ ಹೆಸರು ಕರ್ಮಚಕ್ರ. ಕರ್ಮಚಕ್ರಕ್ಕಿಂತ ಕೆಳಗೆ ಕೊನೆಯಲ್ಲಿರುವ ಚಕ್ರದ ಹೆಸರು ಗುಣಚಕ್ರ. ಈ ವಿಧವಾಗಿರುವ ನಾಲ್ಕು ಚಕ್ರಗಳಿಗೂ ಆಧಾರವಾಗಿ ಇರುಸಾಗಿರುವ ಬ್ರಹ್ಮನಾಡಿಯಲ್ಲಿ ಆತ್ಮವಿದೆ. ಈ ನಾಲ್ಕು ಚಕ್ರಗಳು ಮತ್ತು ಆಧಾರವಾಗಿರುವ ಬ್ರಹ್ಮನಾಡಿಯನ್ನು ಕೆಳಗೆ ಚಿತ್ರದಲ್ಲಿ ನೋಡಿರಿ.




**ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳು**

ಮೇಲಿರುವ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳಲ್ಲಿ ಕೆಳಗಿನ ಚಕ್ರವಾದ ಗುಣಚಕ್ರವನ್ನು ತೆಗೆದುಕೊಳ್ಳೋಣ. ಉಳಿದ ಮೂರು ಚಕ್ರಗಳಿಗಿಂತ ಮನುಷ್ಯ ಹೆಚ್ಚಾಗಿ ತಿಳಿದುಕೊಳ್ಳಬೇಕಾಗಿರುವುದು ಗುಣಚಕ್ರವನ್ನು ಕುರಿತೆಂದು ಎಲ್ಲರೂ ಗುರುತುಮಾಡಿಕೊಳ್ಳಬೇಕು. ಈ ಚಕ್ರದಲ್ಲಿಯೇ ಮಾಯೆ ಪ್ರತಿಷ್ಠಿಸಲ್ಪಟ್ಟಿದೆ. ಆದ್ದರಿಂದ ಇದನ್ನು ಮಾಯಾಚಕ್ರವೆಂದು ಸಹ ಹೇಳಬಹುದು. ಗುಣ ಎಂದರೂ ಮಾಯೆ ಎಂದರೂ ಎರಡೂ ಒಂದೇ ಅರ್ಥ ಎಂದು ತಿಳಿದುಕೊಳ್ಳಬೇಕು. ಮೇಲಿನಿಂದ ನಾಲ್ಕನೇ ಚಕ್ರವಾದ ಗುಣಚಕ್ರವನ್ನು ಕುರಿತು ಸಂಪೂರ್ಣವಾಗಿ ತಿಳಿದವನನ್ನು ಸಂಪೂರ್ಣಜ್ಞಾನವನ್ನು ತಿಳಿದವನಾಗಿ ಲೆಕ್ಕಿಸಬಹುದು. ನಾಲ್ಕನೇ ಚಕ್ರಕ್ಕೆ ಏಕಷ್ಟು ಪ್ರಾಧಾನ್ಯತೆ ಇದೆಯೆಂದರೆ! ಆ ನಾಲ್ಕನೇ ಚಕ್ರದಲ್ಲಿಯೇ ನೀನು ಇದ್ದೀಯಾ. ಪ್ರತಿ ಜೀವಿಯು ನಿವಾಸವಾಗಿರುತ್ತಿರುವುದು ಕೆಳಗಿನ ಚಕ್ರವಾದ ನಾಲ್ಕನೇ ಚಕ್ರದಲ್ಲಿಯೇ. ನಾಲ್ಕನೇ ಚಕ್ರದಲ್ಲಿಯೇ ಮಾಯೆ ಇದೆ. ನಾಲ್ಕನೇ ಚಕ್ರದಲ್ಲಿಯೇ ಜೀವಿಯು ಇದ್ದಾನೆ. ಜೀವಿಯು ಮಾಯೆಯಲ್ಲಿ ಸಿಲುಕಿ ಕೊಂಡಿದ್ದಾನೆ ಎಂದರೆ ಅದು ಗುಣಚಕ್ರದಲ್ಲಿಯೇ ಎಂದು, ಜೀವಿಯು ಮಾಯೆಯಿಂದ ಹೊರಬೀಳ ಬೇಕೆಂದರೆ ಅದು ಸಹ ಗುಣಚಕ್ರದಲ್ಲಿಯೇ ಎಂದು ಜ್ಞಾಪಕ ಇಟ್ಟುಕೊಳ್ಳಬೇಕು. ಆತ್ಮಜ್ಞಾನವನ್ನು ತಿಳಿದುಕೊಳ್ಳಬೇಕಾಗಿರುವುದು ಜೀವಿಯೇ ಯೆಂದು, ದೇವರು ಭಗವಂತನಾಗಿ ಬಂದಿರುವುದು ಜೀವಿಗೆ

ಆತ್ಮಜ್ಞಾನವನ್ನು ತಿಳಿಸುವುದಕ್ಕೆಯೆಂದು, ಆತ್ಮಜ್ಞಾನವನ್ನು ತಿಳಿದುಕೊಳ್ಳುವ ಜೀವಿಯು ನಿವಾಸವಿರುವುದು ಗುಣಚಕ್ರದಲ್ಲಿಯೇ ಎಂದು, ಆದುದರಿಂದ ಗುಣಚಕ್ರವನ್ನು ತಿಳಿದುಕೊಳ್ಳುವುದು ವಿಶೇಷ ಜ್ಞಾನವೆಂದು ತಿಳಿಯಬೇಕು. ಭಗವಂತನಿಗೆ ಈ ವಿಷಯ ತಿಳಿಯುವುದರಿಂದ ಗುಣಚಕ್ರದೊಂದಿಗೆ ಸಮಾನ ಹೋಲಿಕೆಗಳಿರುವ ನವಿಲುಗರಿಯನ್ನು ತಲೆಮೇಲೆ ಧರಿಸಿ ತೋರಿಸಿದ್ದಾನೆ.

ಒಬ್ಬ ಮನುಷ್ಯನನ್ನು ಗುರುತಿಸುವುದಕ್ಕೆ, ಇತನು ಇಂತಹ ಮನುಷ್ಯ ಎಂದು ತಿಳಿಯುವುದಕ್ಕೆ ಮೊದಲು ಆತನ ಮುಖವನ್ನು ನೋಡಿ ಆತನು ಯಾರಾಗಿರುವುದು ತಿಳಿದುಕೊಳ್ಳುತ್ತೇವೆ. ಮೊದಲು ಪರಿಚಯ ಇರುವವನನ್ನು, ಮೊದಲು ನೋಡಿದವನನ್ನು ಅವನ ಮುಖವನ್ನು ನೋಡಿ ಇವನು ಇಂತಹವನೆಂದು ತಿಳಿಯಬಹುದು. ಮೊದಲು ಯಾವುದೆ ಪರಿಚಯ ಇಲ್ಲದ ವ್ಯಕ್ತಿಯನ್ನು ಕೂಡ ಮುಖವನ್ನು ನೋಡಿದ ನಂತರ ಇತನು ಹೊಸವ್ಯಕ್ತಿ ಎಂದು ಗುರುತಿಸುತ್ತೇವೆ. ಆದುದರಿಂದ ಒಬ್ಬ ಮನುಷ್ಯನನ್ನು ಗುರುತಿಸುವುದಕ್ಕೆ ಶರೀರದಲ್ಲಿ ಮೇಲ್ಭಾಗದಲ್ಲಿರುವ ತಲೆಭಾಗವನ್ನೇ ನೋಡುತ್ತೇವೆ ಎಂದು ಹೇಳಬಹುದು. ಕೃಷ್ಣನು ನಾನು ಇಂತಹವನೆಂದು ತಿಳಿಹೇಳುವುದಕ್ಕೆ, ಪ್ರತಿ ಮನುಷ್ಯ ತಿಳಿಯಬೇಕಾಗಿರುವುದು ಇದೇಯೆಂದು ಗುರುತು ಮಾಡುವುದಕ್ಕೆ, ತನ್ನ ತಲೆಮೇಲೆ ನವಿಲುಗರಿಯನ್ನು ಧರಿಸಿದ್ದಾನೆ. ನವಿಲುಗರಿ ಗುಣಚಕ್ರದೊಂದಿಗೆ ಸಮಾನಹೋಲಿಕೆಗಳು ಇರುವುದರಿಂದ ನವಿಲುಗರಿಯನ್ನು ಆತನು ಧರಿಸಿ ತೋರಿಸಿದ್ದಾನೆ. ಹಾಗೆ ತೋರಿಸುವುದರಲ್ಲಿ ಎರಡು ಭಾವನೆಗಳು ಒಳಗೊಂಡಿವೆ ಯೆಂದು ಹೇಳಬಹುದು. ಒಂದು ಎಲ್ಲರಿಗೂ ಮುಖ್ಯವಾದ ಜ್ಞಾನ ಇದೆಯೆಂದು, ಎಲ್ಲರೂ ತಿಳಿದುಕೊಳ್ಳಬೇಕಾದ ಜ್ಞಾನ ಇದೇಯೆಂದು ತಿಳಿಸುವುದರಿಂದ ಎಲ್ಲರೂ ನೋಡುವಂತೆ ತಲೆಮೇಲೆ ಧರಿಸಿರುವುದು ನಡೆದಿದೆ. ಎರಡನೆಯದು ನಾನು ಶರೀರದಲ್ಲಿ ಇದ್ದರೂ ಮಾಯೆಯಲ್ಲಿ ಇಲ್ಲದಂತೆ ಹಾಗೂ ಮಾಯೆಗೆ ಅತೀತವಾದ ಯೋಗಿಯಾಗಿ ಇದ್ದೇನೆಂದು ತಿಳಿಸುವುದರಿಂದಲೂ ಸಹ ಆ ವಿಧವಾಗಿ ಧರಿಸಿದ್ದಾನೆಂದು ತಿಳಿಯುತ್ತಿದೆ. ಈ ಅರ್ಥಗಳಲ್ಲಿ ಕೃಷ್ಣನು ನವಿಲುಗರಿಯನ್ನೆ

ಧರಿಸುವುದಕ್ಕೆ ಬಲವಾದ ಕಾರಣ ಇದೆ. ಅದು ಏನೆಂದರೆ **ಗುಣಚಕ್ರಕ್ಕೆ ಸಮಾನವಾದ ಹೋಲಿಕೆ ಪ್ರಪಂಚದಲ್ಲಿ ಒಂದೇವೊಂದು ನವಿಲುಗರಿಗೆ ಮಾತ್ರ ಇದೆ.** ಈಗ ನವಿಲುಗರಿಗು ಗುಣಚಕ್ರಕ್ಕು ಹೇಗೆ ಹೋಲಿಕೆಗಳಿವೆಯೊ ಗಮನಿಸೋಣ. ನವಿಲುಗರಿಯನ್ನು ಎಲ್ಲರೂ ನೋಡಿರುತ್ತಾರೆ. ಆದರೆ ಗುಣಚಕ್ರವನ್ನು ಇಲ್ಲಿಯವರೆಗೂ ಯಾರೂ ನೋಡಲಿಲ್ಲ. ಗುಣಚಕ್ರ ಕಣ್ಣಿಗೆ ಕಾಣಿಸುವುದು ಅಲ್ಲ. ಆದ್ದರಿಂದ ಯಾರೂ ನೋಡಲಾರರೆಂದು ಹೇಳುತ್ತಿದ್ದೇವೆ. ಕಣ್ಣಿಗೆ ಒಂದು ಗುಣಚಕ್ರವೇ ಅಲ್ಲ, ಉಳಿದ ಮೂರು ಚಕ್ರಗಳು ಸಹ ಕಾಣಿಸುವುದಿಲ್ಲ. ಅಂತಹ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳ ಸಮೂಹವನ್ನು ಕಣ್ಣಿಗೆ ಕಾಣಿಸುವ ಗೊಂಬೆಯಾಗಿ ತೋರಿಸಿದ್ದಾರೆ. ಅಷ್ಟೇ ಅಲ್ಲದೆ ಈ ದಿನ **ತ್ರೈತ ಸಿದ್ಧಾಂತವನ್ನು** ತಿಳಿದ ಪ್ರತಿಯೊಬ್ಬ ವ್ಯಕ್ತಿ ಮತಗಳಿಗೆ ಅತೀತವಾಗಿ ತನ್ನ ಮುಖದ ಮೇಲೆ ಹಣೆಯಭಾಗದಲ್ಲಿ ನಾಲ್ಕುಚಕ್ರಗಳ ಗುರುತನ್ನು ಧರಿಸಿಕೊಳ್ಳುತ್ತಿರುವುದು ನಡೆಯುತ್ತಿದೆ. ನಾಲ್ಕುಚಕ್ರಗಳನ್ನು ಚಿತ್ರಿಸಿ ತೋರಿಸಿದಾಗ ಕೆಳಗಿನ ಚಕ್ರವಾದ ಗುಣಚಕ್ರವನ್ನು ಕೂಡ ವಿವರವಾಗಿ ತಿಳಿಯುವಂತೆ ಗೊಂಬೆರೂಪದಲ್ಲಿ ತೋರಿಸಿದ್ದೇವೆ. ಗುಣಚಕ್ರವೊಂದರ ಚಿತ್ರವನ್ನು ಕೆಳಗಿನ ಪುಟದಲ್ಲಿ ನೋಡಬಹುದು.




**ಗುಣಚಕ್ರ**

ಈ ಚಿತ್ರದಲ್ಲಿ ಕಾಣಿಸುವಂತೆ ನಮ್ಮ ಶರೀರದಲ್ಲಿನ ಗುಣಚಕ್ರ ಇದೆ. ಗುಣಚಕ್ರದಲ್ಲಿ ಮುಖ್ಯವಾದ ನಾಲ್ಕು ಭಾಗಗಳು ಕಾಣಿಸುತ್ತಿವೆ. ಅದರಲ್ಲಿ ಹೊರಗಿನಿಂದ ಮೊದಲಿರುವುದನ್ನು ತಾಮಸ ಗುಣಭಾಗ ಎನ್ನುತ್ತೇವೆ. ಹಾಗೆಯೇ ಹೊರಗಿನಿಂದ ಎರಡನೆಯದು ರಾಜಸಗುಣಭಾಗ ಎನ್ನುತ್ತೇವೆ. ಮೂರನೆಯದನ್ನು ಸಾತ್ತ್ವಿಕ ಗುಣಭಾಗ ಎನ್ನುತ್ತೇವೆ. ನಾಲ್ಕನೆಯದು ಮತ್ತು ಎಲ್ಲದಕ್ಕಿಂತ ಮಧ್ಯದೊಳಗಿನದಾದ ಕೊನೆಯದನ್ನು ಗುಣರಹಿತ ಯೋಗ ಎನ್ನಬಹುದು ಅಥವಾ ಆತ್ಮ ಎಂದು ಸಹ ಹೇಳಬಹುದು. ಹೊರಗಿನಿಂದ ಮೊದಲ ಭಾಗವಾದ ತಾಮಸ ಭಾಗದಲ್ಲಿರುವ ಜೀವಿಯನ್ನು ತಾಮಸನು ಎನ್ನುತ್ತೇವೆ. ಎರಡನೆ ಭಾಗದಲ್ಲಿರುವ ಜೀವಿಯನ್ನು ರಾಜಸನು ಎಂದು ಹೇಳುತ್ತೇವೆ. ಮೂರನೆ ಭಾಗದಲ್ಲಿರುವ ಜೀವಿಯನ್ನು ಸಾತ್ತ್ವಿಕನು ಎನ್ನುತ್ತೇವೆ. ಇನ್ನು ನಾಲ್ಕನೆ ಕೊನೆಯ ಭಾಗ ಮಧ್ಯದಲ್ಲಿರುವ ಜೀವಿಯನ್ನು ಯೋಗಿ ಎನ್ನುತ್ತೇವೆ. ಗುಣಚಕ್ರ ಈ ವಿಧವಾಗಿ ನಾಲ್ಕು ಭಾಗಗಳಾಗಿ ಇರುವಾಗ, ಆಯಾ ಸಮಯಗಳಲ್ಲಿ, ಆಯಾ ಭಾಗದಲ್ಲಿರುವ ಜೀವಿಗಳಿಗೆ ಆ ಭಾಗವೊಂದರ ಹೆಸರನ್ನೆ ಇಟ್ಟಿದ್ದಾರೆ. ಜೀವಿಯು ಕರ್ಮಾನುಸಾರ ಕೆಲವು ಸಮಯಗಳಲ್ಲಿ ಒಂದು ಭಾಗದಲ್ಲಿ ಇರುತ್ತಾನೆ. ಮತ್ತೆ ಕೆಲವು ಸಮಯಗಳಲ್ಲಿ ಮತ್ತೊಂದು ಭಾಗಕ್ಕೆ ಬದಲಾಗಬಹುದು. ಶಾಶ್ವತವಾಗಿ ಭಾಗದಲ್ಲಿಯೇ ಇರುತ್ತಾನೆಂದು ಹೇಳಲಾರೆವು. ಯಾವಾಗ ಯಾವ ಭಾಗದಲ್ಲಿ ಇದ್ದರೆ ಆಗ ಆ ಭಾಗವೊಂದರ ಹೆಸರು ಆ ಜೀವಿಗೆ ಅನ್ವಯಿಸುತ್ತದೆ. ಇದರ ಪ್ರಕಾರ ಹೆಚ್ಚುಕಾಲ ತಾಮಸ ಗುಣಭಾಗದಲ್ಲಿರುವ ಜೀವಿಯು ಕೆಲವು ಸಮಯಗಳಲ್ಲಿ ರಾಜಸದೊಳಗೆ ಹೋಗಬಹುದು, ಇನ್ನು ಕೆಲವು ಸಮಯಗಳಲ್ಲಿ ಸಾತ್ತ್ವಿಕದೊಳಗೆ ಕೂಡ ಹೋಗಬಹುದು. ಆ ವಿಧವಾಗಿ ಹೋದ ಸಮಯಗಳಲ್ಲಿ ಆ ಭಾಗದ ಹೆಸರನ್ನು ಆತನಿಗೆ ಹೇಳಬಹುದು. ಹೆಚ್ಚುಕಾಲ ಯಾವ ಗುಣಭಾಗಗಳಲ್ಲಿ ಇದ್ದರೆ ಆ ಭಾಗವೊಂದರ ಹೆಸರನ್ನೆ ಅವನಿಗೆ ಇಡಬೇಕಾಗಿಬರುತ್ತದೆ. ಒಂದು ದಿನದಲ್ಲಿ 24 ಗಂಟೆಗಳ ಕಾಲದಲ್ಲಿ, ತಾಮಸ ಭಾಗದಲ್ಲಿ 23 ಗಂಟೆಗಳಿದ್ದು ಒಂದು ಗಂಟೆ ಕಾಲ ಮಾತ್ರ ರಾಜಸದಲ್ಲಿ ಸ್ವಲ್ಪಸಮಯ, ಸಾತ್ತ್ವಿಕದಲ್ಲಿ ಸ್ವಲ್ಪಸಮಯ

ಇರುವವನನ್ನು ತಾಮಸನೆಂದೇ ಕರೆಯಬೇಕು. ಅದೇ ವಿಧವಾಗಿ ಮಧ್ಯ ಭಾಗವಾದ ಅತ್ಮ ಭಾಗದಲ್ಲಿ ಹೆಚ್ಚು ಕಾಲ ಇರುವವನನ್ನು ಯೋಗಿ ಎಂದು ಕರೆಯಬೇಕು. ಹಾಗೆ ಉಳಿದ ರಾಜಸ, ಸಾತ್ತ್ವಿಕ ಗುಣಸ್ತರನ್ನು ಸಹ ಕರೆಯಬಹುದು.

ಗುಣಚಕ್ರ ಪ್ರತಿ ಜೀವರಾಶಿಗೆ ಇದ್ದರೂ, ಪ್ರತಿ ಜೀವಿಯು ಗುಣಚಕ್ರ ಭಾಗದಲ್ಲಿಯೇ ಸಿಲುಕಿಕೊಂಡಿದ್ದರೂ, ಜೀವಿಯು ಶಾಶ್ವತವಾಗಿ ಯಾವ ಗುಣಭಾಗಗಳಲ್ಲಿಯು ಇರದೆ ಆಗಾಗ ಬೇರೆ ಗುಣ ಭಾಗದೊಳಗೆ ಹೋಗುತ್ತಿರುತ್ತಾನೆ. ಗುಣಚಕ್ರದೊಂದಿಗೆ ಸಮಾನ ಹೋಲಿಕೆಗಳಿರುವ ನವಿಲುಗರಿಯಲ್ಲಿ ಗುಣಭಾಗಗಳು ಮೂರು, ಗುಣವಿಲ್ಲದ ಭಾಗ ಒಂದು, ಒಟ್ಟು ನಾಲ್ಕು ಭಾಗಗಳು ನಾಲ್ಕು ಬಣ್ಣಗಳಲ್ಲಿ ಕಾಣಿಸುತ್ತಿವೆ. ಆದರೆ ಆ ನಾಲ್ಕು ಭಾಗಗಳಲ್ಲಿ ಜೀವಿಯ ಹೋಲಿಕೆಯಾದ ಯಾವ ಬಣ್ಣವಾಗಲಿ, ಯಾವ ಗುರುತಾಗಲಿ ಇಲ್ಲ. ಈ ವಿಧವಾಗಿ ಎಷ್ಟೋ ವಿಶೇಷವಾದ ಜ್ಞಾನವನ್ನು ನವಿಲುಗರಿಯನ್ನು ನಮಗೆ ತಿಳಿಯಪಡಿಸುತ್ತಿದೆ. ಸೃಷ್ಟಿ ಮೊದಲುಗೊಂಡು ಇಲ್ಲಿಯವರೆಗು ಭಗವಂತನಿಗೆ ಹೊರತು ಯಾರಿಗೂ ಗುಣಚಕ್ರ ನಮ್ಮ ಶರೀರದಲ್ಲಿ ಇದೆಯೆಂದು, ಅದರಲ್ಲಿಯೇ ನಾವು ಇದ್ದೀವೆಂದು ತಿಳಿದಿಲ್ಲ. ಪ್ರತಿ ಜೀವಿಗು ನಿವಾಸಸ್ಥಳ ಶರೀರದಲ್ಲಿನ ಗುಣಚಕ್ರವೆ. ಶರೀರದಲ್ಲಿ ಗುಣಚಕ್ರದಲ್ಲಿರುವ ಜೀವಿಯು ಹೊರಗಿನ ಪ್ರಪಂಚದಲ್ಲಿ ಕಲೆಕ್ಟರ್ ಉದ್ಯೋಗ ಮಾಡಿದರೂ, ಕಂಡಕ್ಟರ್ ಉದ್ಯೋಗ ಮಾಡಿದರೂ, ತನ್ನ ಅಡ್ರಸ್ (ವಿಳಾಸ) ತನಗೆ ತಿಳಿಯದ ಸ್ಥಿತಿಯಲ್ಲಿ ಇದ್ದಾನೆ. ತಾನು ಶರೀರ ಅಲ್ಲವೆಂದು, ತಾನು ಶರೀರದಲ್ಲಿರುವ ಜೀವಿಯೆಂದು ತಿಳಿಯದೆ ನಾನೇ ಇಂತಹ ಮನುಷ್ಯನೆನ್ನುವ ಭಾವದಿಂದ ಇದ್ದಾನೆ. ದ್ವಾಪರಯುಗ ಅಂತ್ಯದಲ್ಲಿ ಇಲ್ಲಿಗೆ 5148 ವರ್ಷಗಳ ಕೆಳಗೆ ಭಗವಂತನು ಭಗವದ್ಗೀತೆಯನ್ನು ಹೇಳಿ, ಅದರಲ್ಲಿ ಗುಣಗಳನ್ನು ಕುರಿತು ವಿವರಿಸಿದರೂ, ಸಾತ್ತ್ವಿಕನು, ರಾಜಸನು, ತಾಮಸನು, ಯೋಗಿ ಎನ್ನುವ ನಾಲ್ಕುವರ್ಣಗಳ ಮನುಷ್ಯರನ್ನು ಹೇಳಿದ್ದರೂ, ಇಲ್ಲಿಯವರೆಗೂ ಭಗವಂತನು ಹೇಳಿದ ಜ್ಞಾನವನ್ನು ಅರ್ಥ ಮಾಡಿಕೊಳ್ಳದ ಮನುಷ್ಯರು ಅಜ್ಞಾನ ಕತ್ತಲಲ್ಲಿ ಮುಳಗಿ ನಾನು ಬಿಲ್‌ಕಲೆಕ್ಟರ್, ನಾನು ಜಿಲ್ಲಾ ಕಲೆಕ್ಟರ್, ನಾನು

ಗುಮಸ್ತಾ, ನಾನು ಗುಂಡಾ ಎಂದು ಹೇಳಿಕೊಳ್ಳುತ್ತಿದ್ದಾರೆ. ಹೊರಗಿನ ಪ್ರಪಂಚದಲ್ಲಿ ಎಷ್ಟು ಓದು ಓದಿದರೂ, ಎಷ್ಟು ಘನತೆ ಗೌರವ ಇದ್ದರೂ ತನ್ನ ಅಡ್ರಸ್ ತನಗೆ ತಿಳಿಯದವನನ್ನು ತಿಳುವಳಿಕೆ ಇಲ್ಲದವನೆಂದು ಹೇಳಬಹುದು.

ಗುಣಚಕ್ರವನ್ನೇ ಮಾಯಾಚಕ್ರ ಎಂದು ಸಹ ಕರೆಯಬಹುದೆಂದು ಹೇಳಿಕೊಂಡಿದ್ದೇವೆ. ಮಾಯಾ ಚಕ್ರದಲ್ಲಿಯೇ ಮಾಯೆಬಲೆಯಲ್ಲಿ ಸಿಲುಕಿಕೊಂಡು ತನ್ನ ಸ್ಥಿತಿಯನ್ನು ತಾನೇ ತಿಳಿಯದೆ ಪ್ರತಿ ಜೀವಿಯು ಬಾಧೆ ಬೀಳುತ್ತಿದ್ದಾನೆಂದು, ಗುಣಚಕ್ರದ ಕುರಿತು ತಿಳಿದುಕೊಳ್ಳುವುದು ಪ್ರತಿ ಮನುಷ್ಯನ ಕರ್ತವ್ಯವೆಂದು, ಹಾಗೆ ತಿಳಿದುಕೊಳ್ಳುವುದು ಸ್ವಧರ್ಮವನ್ನು ತಿಳಿದುಕೊಂಡಂತೆಯೆಂದು ಭಗವಂತನು ಗೀತೆಯಲ್ಲಿ ಬೋಧಿಸಿದ್ದಾನೆ. ಹಾಗೆ ಬೋಧಿಸಿರುವುದಲ್ಲದೆ ತನ್ನ ಚಿಕ್ಕವಯಸ್ಸಿನಿಂದ ಕೃಷ್ಣನು ತನ್ನ ತಲೆಮೇಲೆ ನವಿಲುಗರಿಯನ್ನು ಧರಿಸಿದ್ದಾನೆ. ಹಾಗೆ ಧರಿಸಿರುವುದರಿಂದ ಇನ್ನೊಬ್ಬ ವ್ಯಕ್ತಿಗೆ ಅದು ಕಾಣಿಸುತ್ತದೆ. ಅದನ್ನು ನೋಡಿದ ವ್ಯಕ್ತಿ ಅದರ ಸಾರಾಂಶವನ್ನು ಕುರಿತು ತಿಳಿದುಕೊಳ್ಳುತ್ತಾನೆಂದು ಕೃಷ್ಣನು ನವಿಲುಗರಿಯನ್ನು ಧರಿಸಿದ್ದಾನೆ. ಅಷ್ಟೇ ಅಲ್ಲದೆ ಆತನು ಧರಿಸುವುದರಲ್ಲಿ ಇನ್ನೊಂದು ಮುಖ್ಯವಾದ ಭಾವವೂ ಸಹ ಇದೆ. ಅದೇನೆಂದರೆ! ನಾನು ಹೊರಗೆ ಒಬ್ಬ ವ್ಯಕ್ತಿಯಾಗಿ ಕಾಣಿಸಿದರೂ, ಎಲ್ಲಿ ತಿರುಗಿದರೂ ನಾನು ಮಾತ್ರ ತಲೆಯಲ್ಲಿ ಗುಣಚಕ್ರದಲ್ಲಿ ಮಧ್ಯಭಾಗದಲ್ಲಿ ಯೋಗಿಯಾಗಿದ್ದೇನೆಂದು ತಿಳಿಸುವುದಕ್ಕೆ ನವಿಲುಗರಿಯನ್ನು ಧರಿಸಿದ್ದಾನೆ. ನವಿಲುಗರಿಯಲ್ಲಿ ಮಧ್ಯದಲ್ಲಿರುವ ಆತ್ಮಭಾಗ ಪ್ರತ್ಯೇಕವಾದ ಗುರುತಿನಬಣ್ಣವಾಗಿ ಪಕ್ಕದಲ್ಲಿರುವ ಮೂರು ಬಣ್ಣಗಳಿಗಿಂತ ಗಾಢವಾಗಿ ಕಾಣಿಸುತ್ತಿರುತ್ತದೆ. ಹಾಗೆ ಕಾಣಿಸಿರುವುದರಿಂದ ಮೂರು ಗುಣಭಾಗಗಳಿಗಿಂತ ಮುಖ್ಯವಾದುದೆಂದು ಮಧ್ಯದಲ್ಲಿನ ಆತ್ಮಭಾಗವೆಂದು ನೋಡುತ್ತಲೇ ತಿಳಿಯುತ್ತಿದೆ. ಗಾಢವಾಗಿ ಕಾಣಿಸುವ ಮಧ್ಯ ಭಾಗದಲ್ಲಿ ಇದ್ದು ಕೃಷ್ಣನು ಕೆಲಸಗಳನ್ನು ಮಾಡುವುದರಿಂದ ಆತನು ಮಾಯೆಗೆ ಅತೀತನಾಗಿದ್ದಾನೆ. "ಗುಣಮಯಿ ಮಮ ಮಾಯಾ" ಎಂದು ಗೀತೆಯಲ್ಲಿ ಹೇಳಿದಂತೆ, ತ್ರಿಗುಣಗಳೇ

ಮಾಯೆ. ಮಾಯೆಗೆ ಮಧ್ಯದಲ್ಲಿ ಆತ್ಮ ಸ್ಥಾನದಲ್ಲಿ ಇರುವವನೇ ಯೋಗಿ. ನವಿಲುಗರಿ ಮಧ್ಯದಲ್ಲಿ ಗಾಢವಾಗಿರುವ ಬಣ್ಣ ಗುರುತಾಗಿ ಕಾಣಿಸುವುದರಿಂದ ಅದರಲ್ಲಿ ನಾನಿದ್ದೀನಿ ನೀವೂ ಸಹ ಅದರೊಳಗೆ ಬನ್ನಿರೆಂದು ಕೃಷ್ಣನು ತಿಳಿಸಿದಂತಿದೆ.

ಆಧ್ಯಾತ್ಮಿಕ ರಂಗದಲ್ಲಿ ಎಷ್ಟೋ ಪ್ರಾಮುಖ್ಯತೆಯನ್ನು ಹೊಂದಿರುವ ನವಿಲುಗರಿಯನ್ನು. ನವಿಲುಗರಿಯವೊಂದರ ರಹಸ್ಯವು ಕೃಷ್ಣನೊಬ್ಬನಿಗೆ ಹೊರತು ಯಾರಿಗೂ ತಿಳಿದಿಲ್ಲ. ನವಿಲುಗರಿಯನ್ನು ಕೃಷ್ಣನು ತಲೆಮೇಲೆ ಇಟ್ಟುಕೊಂಡು ತೋರಿಸಿದರೂ ಅದನ್ನು ಗುರುತಿಸಲಾರದ ಕುರುಡರಂತೆ ಪ್ರಜೆಗಳಿದ್ದಾರೆ. ನವಿಲುಗರಿಯನ್ನು ಅದರ ವಿವರವನ್ನು ತಿಳಿಯಬೇಕೆಂದರೆ ಮೊದಲು ಯಾರಿಗಾದರು ತನ್ನ ಶರೀರ ನಿರ್ಮಾಣ, ಶರೀರದಲ್ಲಿ ನಡೆಯುವ ಕೆಲಸದ ಬಗ್ಗೆ ತಿಳಿದಿರಬೇಕು. ಗೀತೆಯಲ್ಲಿ ಹೇಳುವ ಜ್ಞಾನ ಎಲ್ಲವೂ ಮತ್ತು ನವಿಲುಗರಿಯ ವೊಂದರ ಗುರುತೊಂದರ ಜ್ಞಾನ ಶರೀರದೊಳಗಿನದೆ. ಆದುದರಿಂದ ಶರೀರದಲ್ಲಿನ ಕೆಲಸ ತಿಳಿದವರಿಗೆ ಸುಲಭವಾಗಿ ನವಿಲುಗರಿಯವೊಂದರ ವಿವರ ಅರ್ಥ ವಾಗುತ್ತದೆ. ಆದರೆ ಇಂದಿನ ಕಾಲದಲ್ಲಿ ನವಿಲುಗರಿಯನ್ನು ಕುರಿತು ಆಲೋ ಚಿಸುವವರೆ ಇಲ್ಲ. ಅದನ್ನು ಧರಿಸಿದ ಕೃಷ್ಣನು ದೊಡ್ಡವ (ಶ್ರೇಷ್ಠ) ನೆಂದಾಗಲಿ, ಧರಿಸಲ್ಪಟ್ಟ ನವಿಲುಗರಿ ಭಗವದ್ಗೀತೆಯ **ಜ್ಞಾನಯೋಗದಲ್ಲಿ ಹೇಳಿದ "ಚಾತುರ್ವರ್ಣ್ಯಮ್"** ಎನ್ನುವ ಶ್ಲೋಕವೊಂದರ ಭಾವ ಎಂದಾಗಲಿ ಯಾರಿಗೂ ತಿಳಿಯದಂತೆ ಹೋಗಿದೆ. ಮನುಷ್ಯ ಅಜ್ಞಾನದಲ್ಲಿ ಮುಳುಗಿ ಮಾಯೆಯಲ್ಲಿ ಯಾವ ವಿಧವಾಗಿ ಸಿಲುಕಿಕೊಂಡಿದ್ದಾನೊ ಆ ವಿಧಾನವನ್ನು ತಿಳಿಸುವುದು ನವಿಲುಗರಿಯವೊಂದರ ಜ್ಞಾನ. ನವಿಲುಗರಿಯನ್ನು ಗುಣಚಕ್ರವಾಗಿ ಹೋಲಿಸಿ ಹೇಳಿದ್ದಾನೆ! ನವಿಲುಗರಿಯ ಆಕಾರವನ್ನು ನೋಡಿ ಅದರ ಪೂರ್ತಿ ನಿರ್ಮಾಣ ವಿವರವನ್ನು ಕುರಿತು ತಿಳಿದುಕೊಳ್ಳೋಣ. ನವಿಲುಗರಿವೊಂದರ ಚಿತ್ರವನ್ನು ನಂತರ ಚಿತ್ರದಲ್ಲಿ ನೋಡಿರಿ.




ನವಿಲುಗರಿವೊಂದರ ತಲೆ ಭಾಗವನ್ನೆ ಅಲ್ಲದೆ ಕೆಳಗಿನ ಬಾಲದ ಭಾಗವನ್ನು ಸಹ ಗಮನಿಸಿದರೆ ಬಿಳಿಯ ಕಾಡಿಗೆ ಎರಡು ಕಡೆಯು ನವಿಲುಗರಿಯೊಂದರ ಕೇಶಗಳು (ಕೂದಲಂತಿರುವ ಎಲೆಗಳು) ಇರುತ್ತವೆ. ನವಿಲುಗರಿಯನ್ನು ನೋಡಿದ ನಂತರ ನಮ್ಮ ಶರೀರದಲ್ಲಿ ತಲೆ ಭಾಗದಲ್ಲಿನ ಮೆದುಳನ್ನು ಅದರ ಕೆಳಗಿನ ಭಾಗದಲ್ಲಿನ ಬೆನ್ನಾವು (ಬೆನ್ನುಮೂಳೆ) ಎನ್ನುವ ದೊಡ್ಡನರವನ್ನು ಗಮನಿಸಿದರೆ ಪಕ್ಕದ ಪುಟದಲ್ಲಿ ತೋರಿಸಿದ ಚಿತ್ರದಲ್ಲಿನಂತೆ ಇರುತ್ತದೆ.




**ಶರೀರದಲ್ಲಿ ಮೆದುಳು ಅದರ ನರ – ನವಿಲುಗರಿ ಅದರ ಕೆಳಗಿನ ಕಾಂಡ**

ಮನುಷ್ಯ ಶರೀರದಲ್ಲಿನ ನಾಡೀಮಂಡಲವನ್ನು ಗಮನಿಸಿದರೆ ತಲೆಯಲ್ಲಿ ಸ್ಥೂಲವಾಗಿ ಕಾಣಿಸುವುದು ಮೆದುಳು ಮತ್ತು ಮೆದುಳಿನಿಂದ ಕೆಳಗೆ ಇಳಿದ ಬೆನ್ನುಮೂಳೆ(ಬೆನ್ನುಹುರಿ) ಎನ್ನುವ ದೊಡ್ಡನರ. ಅಷ್ಟೇ ಅಲ್ಲದೆ ಬೆನ್ನುಹಾವು ಎನ್ನುವ ದೊಡ್ಡನರದಿಂದ ಎರಡು ಕಡೆಯಲ್ಲಿಯೂ ಸೀಳಿಹೋದ ಚಿಕ್ಕ ಚಿಕ್ಕನರಗಳು ಕೆಳಗಿನವರೆಗು ಕಾಣಿಸುತ್ತವೆ. ಬೆನ್ನಿನ ನರದ ಮಧ್ಯದಲ್ಲಿ ಕೆಳಗಿನವರೆಗು ವ್ಯಾಪಿಸಿರುವ ಬೆನ್ನುಮೂಳೆಯಲ್ಲಿ ಜೋಡಣೆಯಾಗಿರುತ್ತದೆ. ತಲೆಯಿಂದ ಸೊಂಟದವರೆಗಿರುವ ಬೆನ್ನಿನ ನರ (ಬ್ರಹ್ಮನಾಡಿ) ತಲೆಯಿಂದ ಎರಡುಕಡೆ ಕೆಳಗಿನವರೆಗು ಚಿಕ್ಕ ಚಿಕ್ಕ ನರಗಳನ್ನು ಶರೀರವೆಲ್ಲಾ ವ್ಯಾಪಿಸುವಂತೆ ಮಾಡಿರುತ್ತದೆ. ಶರೀರವನ್ನು ಕುರಿತು ತಿಳಿದ ಪ್ರತಿಯೊಬ್ಬರಿಗು ಸ್ಥೂಲವಾಗಿರುವ ಮೆದುಳು, ಅದರಿಂದ ಕೆಳಗಿನವರೆಗಿರುವ ದೊಡ್ಡನಾಡಿ, ದೊಡ್ಡನಾಡಿಯಿಂದ ಕೆಳಗಿನವರೆಗು

ಎರಡುಕಡೆಯಲ್ಲಿ ವ್ಯಾಪಿಸಿದ ನರಗಳು ಸುಲಭವಾಗಿ ತಿಳಿದಿರುತ್ತದೆ. ಶರೀರದಲ್ಲಿನ ಬ್ರಹ್ಮನಾಡಿ ಅದರ ಜೋಡಣೆ ಆರನೇತರಗತಿ ಓದಿದ ಹುಡುಗನಿಗು ಸಹ ತಿಳಿಯುತ್ತದೆ. ಆದರೆ ಮೆದುಳಿನಲ್ಲಿ ಸೂಕ್ಷ್ಮವಾಗಿ ಕಾಣಿಸದಂತಿರುವ ಗುಣಚಕ್ರವೂ, ಅದರ ಭಾಗಗಳು ಪ್ರಪಂಚದಲ್ಲಿನ ಎಲ್ಲ ತರಗತಿಗಳು ಓದಿದ ದೊಡ್ಡವರಿಗು ಸಹ ತಿಳಿದಿಲ್ಲ. ಸೂಕ್ಷ್ಮವಾಗಿ ಕಾಣಿಸದೆ ಇರುವ ನಾಲ್ಕು ಚಕ್ರಗಳಾಗಲಿ, ಕೊನೆಗೆ ಕೆಳಗಿನ ಚಕ್ರವಾದ ಗುಣಚಕ್ರವಾಗಲಿ ಐದು ಶಾಸ್ತ್ರಗಳನ್ನು ಕಲಿತಿರುವ ಶಾಸ್ತ್ರಜ್ಞರಿಗೂ ಸಹ ತಿಳಿದಿಲ್ಲ. ಐದು ಶಾಸ್ತ್ರಗಳಿಗಿಂತ ಮೊದಲು ಹುಟ್ಟಿದ ಬ್ರಹ್ಮವಿದ್ಯಾಶಾಸ್ತ್ರವನ್ನು ತಿಳಿದವನಿಗೆ ಮಾತ್ರವೆ ಗುಣಚಕ್ರ, ಉಳಿದ ನಾಲ್ಕುಚಕ್ರಗಳ ವಿವರವು ತಿಳಿಯುತ್ತದೆ. ಗುಣ (ಮಾಯೆ) ಚಕ್ರವೊಂದರ ನಿರ್ಮಾಣವನ್ನು ತಿಳಿದವನು ಅದರೊಂದಿಗೆ ಸಮಾನ ಹೋಲಿಕೆಗಳಿರುವ ನವಿಲುಗರಿಯನ್ನು ಮತ್ತು ಅದರ ವಿವರವನ್ನು ಸುಲಭವಾಗಿ ಗ್ರಹಿಸಬಲ್ಲನು ಆದಿನ ಕೃಷ್ಣನು ಶರೀರದಲ್ಲಿನ ಕಾಣಿಸದ ವಿಧಾನವೆಲ್ಲವೂ ಮತ್ತು ನಾಲ್ಕು ಚಕ್ರಗಳ ಜ್ಞಾನವೆಲ್ಲವೂ ತಿಳಿದವನು. ಆದ್ದರಿಂದ ಗುಣಚಕ್ರದೊಂದಿಗೆ ಹೋಲಿಕೆಗಳಿರುವ ನವಿಲುಗರಿಯನ್ನು ತಲೆಮೇಲೆ ಧರಿಸಿ ಎಲ್ಲರೂ ನೋಡುವಂತೆ ಮಾಡಿದ್ದಾನೆ.

ಶರೀರದಲ್ಲಿಯೇ ಮನುಷ್ಯನನ್ನು ನಡೆಸುವ ಯಂತ್ರ ತಲೆಯಲ್ಲಿ ನಾಲ್ಕು ಚಕ್ರಗಳ ಸಮುದಾಯಗಳಲ್ಲಿ ಕೆಳಗಿನ ಚಕ್ರದಲ್ಲಿ ಅಳವಡಿಸಲ್ಪಟ್ಟಿದೆ. ಕೆಳಗಿನ ಚಕ್ರವಾದ ಮಾಯಾಚಕ್ರ ಮನುಷ್ಯನನ್ನು ಪ್ರಪಂಚದಲ್ಲಿ ಅನೇಕ ವಿಧಗಳು ನಡೆಸುವ ಮುಖ್ಯವಾದ ಯಂತ್ರ. ಅದನ್ನು ಕುರಿತು ತಿಳಿಯದವನು ಅವನ ಜೀವನವೆಲ್ಲಾ ಅದರಿಂದ ಹೊರಬೀಳಲಾರದೆ ಅದರ ಮಾಯೆಯಲ್ಲಿಯೇ ಇರುತ್ತಾನೆ. ಅದರಿಂದ ಹೊರಬೀಳಬೇಕೆಂದರೆ ದುಸ್ಸಾಧ್ಯವೆಂದು ಭಗವದ್ಗೀತೆಯಲ್ಲಿ ವಿಜ್ಞಾನ ಯೋಗದಲ್ಲಿ 14ನೇ ಶ್ಲೋಕದಲ್ಲಿ **"ಗುಣಮಯಿ ಮಮ ಮಾಯಾ ದುರತ್ಯಯಾ"** ಎಂದು ಭಗವಂತನೇ ಹೇಳಿದ್ದಾನೆ. ಈ ವಾಕ್ಯವನ್ನನುಸರಿಸಿ ಗುಣಚಕ್ರದಲ್ಲಿನ ಮಾಯೆ ಗುಣಗಳ ರೂಪದಲ್ಲಿ ಇದೆಯೆಂದು, ಅದನ್ನು ಜಯಿಸುವುದು ದುಸ್ಸಾಧ್ಯವೆಂದು ಅರ್ಥವಾಗುತ್ತಿದೆ. ಯಾವ ಮನುಷ್ಯನಾದರೂ ನನ್ನಂತೆ ನೀವು ಪ್ರವರ್ತಿಸಿರಿ

ಎಂದು ಆ ವಿಧವಾಗಿ ಪ್ರವರ್ತಿಸುವುದರಿಂದ ನೀವು ಸಹ ಮಾಯೆಯನ್ನು ಜಯಿಸಿದವರಾಗುತ್ತೀರೆಂದು ಎಲ್ಲರಿಗೂ ತಿಳಿಯುವಂತೆ ಕೃಷ್ಣನು ನವಿಲುಗರಿಯನ್ನು ಧರಿಸಿ ತೋರಿಸಿದ್ದಾನೆ. ನವಿಲುಗರಿಯನ್ನು ಗುಣಗಳಿಗೆ ನಿಲಯವಾದ ಗುಣಚಕ್ರವನ್ನು ಸೂಚಿಸುತ್ತಿದ್ದರೂ, ಗುಣಗಳಿಗೆ ಅತೀತವಾಗಿ ಆತ್ಮ ಇದೆಯೆಂದು ತಿಳಿಯುವಂತೆ ಮಧ್ಯದಲ್ಲಿ ಗಾಢವಾಗಿ ಕಪ್ಪಗೆ ಕಾಣಿಸುವ ಭಾಗವೂ ಸಹ ಇದೆ. ಅದರಲ್ಲಿಯೇ ನಾನಿದ್ದೀನೆಂದು ಕೃಷ್ಣನು ತಿಳಿಸಿದ್ದಾನೆ. ಗುಣಚಕ್ರದಲ್ಲಿ ನಾನು ಮಧ್ಯದಲ್ಲಿ ಇದ್ದೇನೆ, ನೀವು ಮಧ್ಯದಲ್ಲಿ ಇಲ್ಲದಂತೆ ಪಕ್ಕಕ್ಕೆ ಮೂರು ಭಾಗಗಳಲ್ಲಿ ಇದ್ದೀರಾ. ಆದ್ದರಿಂದ ನಾನು ಮಾಯೆಯಲ್ಲಿ ಇಲ್ಲ, ನೀವು ಮಾಯೆಯಲ್ಲಿ ಇದ್ದೀರಾ ಎಂದು ಭಗವಂತನು ತನ್ನ ನವಿಲುಗರಿಯ ಮೂಲಕ ತೋರಿಸಿ, ಗೀತೆಯ ಮೂಲಕ ಬೋಧಿಸಿದ್ದಾನೆ. ಜಗತ್ತಿನಲ್ಲಿ ಮೊಟ್ಟಮೊದಲು ನವಿಲುಗರಿ ಯನ್ನು ಕುರಿತು ವಿವರವಾಗಿ ತಿಳಿದವನು, ತಿಳಿದು ಧರಿಸಿದವನು ಕೃಷ್ಣನು ಹೊರತು ಯಾರೂ ಇಲ್ಲ. ನವಿಲುಗರಿಯನ್ನು ದ್ವಾಪರಯುಗದಲ್ಲಿ ಆತನು ಧರಿಸಿ ತೋರಿಸಿದರೂ, ಕಿರುಚಿ ಬೋಧಿಸಿದರೂ, ಇಲ್ಲಿಯವರೆಗು ಅದನ್ನು ಕುರಿತು ಯಾರೂ ಯೋಚಿಸುತ್ತಿಲ್ಲ. ನಾನು ಮೇಧಾವಿಯೆಂದುಕೊಂಡ ಯಾರೂ ಅದರ ಅರ್ಥವನ್ನು ತಿಳಿಯಲಿಲ್ಲ. ಕೊನೆಗೆ ಸ್ವಾಮಿಗಳು, ಗುರುಗಳು, ಪೀಠಾಧಿ ಪತಿಗಳು ಸಹ ಭಗವಂತನು ಧರಿಸಿದ ನವಿಲುಗರಿವೊಂದರ ಅಂತರಾರ್ಥವನ್ನು ತಿಳಿದುಕೊಳ್ಳದಂತಿದ್ದಾರೆ. ಅಷ್ಟುದೊಡ್ಡ ಜ್ಞಾನ ವಿಷಯವನ್ನು ನನ್ನ ಮುಖಾಂತರ ಹೇಳಿಸಿದಂತೆ ತನ್ನ ಪಾಲನೆಮೂಲಕ ಮಾಡಿಸಿರುವುದಕ್ಕೆ ಸಂತೋಷದಿಂದ ದೇವರ ಪಾಲಕರ ಮೂಲಕ ದೇವರಿಗೆ ನಮಸ್ಕಾರಗಳು ತಿಳಿಸುತ್ತಿದ್ದೇವೆ.

ಇಲ್ಲಿ ಯಾರಾದರೂ ಒಂದು ಪ್ರಶ್ನೆ ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೆ! "ನವಿಲುಗರಿಯನ್ನು ಕುರಿತು ಭಗವಂತನಿಗೆ ಹೊರತು ಇಲ್ಲಿಯವರೆಗು ಯಾರಿಗೂ ತಿಳಿಯದೆಂದು ಹೇಳಿದ ನೀವು, ದೇವರು ಯಾರ ಮೂಲಕವೊ ನಿಮ್ಮೊಂದಿಗೆ ಹೇಳಿಸಿದಂತೆ, ನೀವು ದೇವರ ಪಾಲಕರ ಮೂಲಕ ದೇವರಿಗೆ ನಮಸ್ಕಾರಗಳು ತಿಳಿಸಿದಂತೆ ಬರೆದಿದ್ದೀರಾ! ಹಾಗೆ ಆತನ ಪಾಲಕರ

ಮೂಲಕ ಆತನಿಗೆ ನಮಸ್ಕಾರಗಳು ತಿಳಿಸುವುದಕ್ಕಿಂತ ದೇವರೆ! ನಾನು ನಿನ್ನನ್ನು ನಮಸ್ಕರಿಸುತ್ತಿದ್ದೇನೆ ಎಂದು ಹೇಳಬಹುದು ಅಲ್ಲವೆ! ನೀವು ದೇವರಿಗೆ ನೇರವಾಗಿ ಏಕೆ ನಮಸ್ಕಾರಗಳು ತಿಳಿಸಲಿಲ್ಲ?" ಎಂದು ಪ್ರಶ್ನಿಸಬಹುದು. ಇಂತಹ ಪ್ರಶ್ನೆಗಳು ಬಂದಾಗ ನನ್ನ ಪಕ್ಕದವನು "ನಿನ್ನ ಬೆರಳನ್ನು ತೆಗೆದುಕೊಂಡು ನಿನ್ನ ಕಣ್ಣನ್ನೆ ತೀವಿದುಕೊಂಡಂತೆ ನಿನ್ನ ಪ್ರಶ್ನೆಯನ್ನು ನೀನೇ ಕೇಳಿ, ಸಿಕ್ಕಿನಲ್ಲಿಬಿದ್ದು ಕಷ್ಟಪಟ್ಟು ಉತ್ತರವನ್ನು ಹೇಳುವುದು ಯಾಕೆ? ಯಾರಿಗೂ ಬಾರದ ಪ್ರಶ್ನೆಯನ್ನು ನಿನಗೆ ನೀನೆ ಏಕೆ ಪ್ರಶ್ನಿಸಿಕೊಳ್ಳಬೇಕು? ಎಂದು ಕೇಳಿದನು. ಅದಕ್ಕೆ ನಾನು "ನನ್ನ ಬೆರಳಿನಿಂದ ನನ್ನ ಕಣ್ಣನ್ನು ನಾನು ತೀವಿದುಕೊಂಡಂತೆ ನಿನಗೆ ಕಾಣಿಸಿರಬಹುದು. ನಾನು ಹಾಗೆ ನೀನಂದುಕೊಂಡಂತೆ ಮಾಡಲಿಲ್ಲ. ನನ್ನ ಕಣ್ಣಿಗೆ ನವೆಯಾದರೆ ನನ್ನ ಬೆರಳಿನಿಂದ ನನ್ನ ಕಣ್ಣನ್ನು ಅದಿಮಿ ನವೆಯನ್ನು ಇಲ್ಲದಹಾಗೆ ಮಾಡಿಕೊಳ್ಳುತ್ತಿದ್ದೇನೆ." ಎಂದು ಉತ್ತರ ಹೇಳಿದ್ದೇನೆ. ಆ ವಿಧವಾಗಿಯೇ ಅನುಮಾನ ಎನ್ನುವ ನವೆ (ಕೆರತ) ಹುಟ್ಟಿದಾಗ ಕಣ್ಣನ್ನು ಹೀಗೆ ತಿದ್ದುಕೊಳ್ಳಬೇಕು ಎಂದು ಮೊದಲೆ ತೋರಿಸುತ್ತಿದ್ದೇನೆಂದು, ನೀವು ಏಕೆ ಅಂದುಕೊಳ್ಳಬಾರದು ಎಂದು ಸಹ ಕೇಳುತ್ತಿದ್ದೇನೆ. ಯಾವುದು ಏನಾದರೂ ನನ್ನ ಅನುಮಾನಕ್ಕೆ ನನ್ನ ಮಾತೆ ಪುನಃ ಉತ್ತರವಾದರೆ, ಯಾರ ಅನುಮಾನಕ್ಕಾದರೂ ಅದು ಉತ್ತರವಾಗುತ್ತದೆ ಎನ್ನುವ ನಂಬಿಕೆಯಿಂದ ನಾನು ಮೊದಲು ಪ್ರಶ್ನಿಸುತ್ತಿದ್ದೇನೆ. ಈಗ ನೀವು ಕೇಳಿದಂತೆ ನಾನು ನೇರವಾಗಿ ದೇವರಿಗೆ ಏಕೆ ನಮಸ್ಕರಿಸಲಿಲ್ಲ ಎಂದರೆ! ಹೇಳುವುದು ಕೇಳು. ಭಗವದ್ಗೀತೆಯಲ್ಲಿ ವಿಶ್ವರೂಪಸಂದರ್ಶನ ಯೋಗದಲ್ಲಿ 40ನೇ ಶ್ಲೋಕದಲ್ಲಿ ಅರ್ಜುನನು ದೇವರಿಗೆ ನಮಸ್ಕರಿಸಬೇಕೆಂದು, ಎಲ್ಲಿ ಮುಗಿಯಬೇಕೊ ತಿಳಿಯದೆ, ಹೇಗೆ ಮುಗಿಯಬೇಕೊ ತಿಳಿಯದೆ ಮುಂದಕ್ಕು, ಹಿಂದಕ್ಕು, ಪಕ್ಕಕ್ಕು, ಕೆಳಗು, ಮೇಲಕ್ಕೆ ಮುಗಿಯುತ್ತಿದ್ದೇನೆಂದು ಹೇಳಿದ್ದಾನಂತೆ. ದೇವರು ಕಾಣಿಸಿದರೇನೆ ಅರ್ಜುನನು ಎಷ್ಟೋ ದಿಗ್ಭ್ರಾಂತನಾಗಿ ಎಲ್ಲಾ ದಿಕ್ಕುಗಳಲ್ಲಿಯೂ ಮುಗಿದಿದ್ದಾನೆ. ಅಷ್ಟು ಕೆಲಸವಿಲ್ಲದಂತೆ ಸುಲಭವಾಗಿ ನಾನು ಹೇಳಿದ್ದೇನೆ. ನಾನು ಹಾಗೆ ಹೇಳುವುದನ್ನು ಸುಲಭ ಎಂದು ಏಕೆ ಹೇಳುತ್ತಿದ್ದೇನೆಂದರೆ, ದೇವರ ಬಯೋಡೇಟಾ (ದೇವರ ಸಮಾಚಾರ)

ಅರ್ಜುನನಿಗೆ ಅರ್ಥವಾಗದಂತೆ ನಮಗೂ ಸಹ ಅರ್ಥವಾಗುವುದಿಲ್ಲ. ಆತನ ಬಯೋಡೇಟಾ ಪೇಪರ್‌ನ್ನು ನೋಡಿದರೆ ಈ ವಿಧವಾಗಿ ಇದೆ.

**1) ಹೆಸರು – ಯಜಮಾನ** **2) ಊರು – ವಿಶ್ವ.**

**3) ಕುಲ – ಗೋಕುಲ** **4) ತಂದೆ – ನಾನೇ**

**5) ತಾಯಿ – ನಾನೇ** **6) ವೃತ್ತಿ – ಸುಮ್ಮನಿರುವುದು**

**7) ಪ್ರವೃತ್ತಿ – ತಿಳಿಯದಂತಿರುವುದು** **8) ನೀತಿ – ಜ್ಞಾನ.**

**9) ನ್ಯಾಯ – ಧರ್ಮ** **10) ಹೆಂಡತಿ – ನಿಮ್ಮ ಅಮ್ಮ.**

**11) ಮಕ್ಕಳು – ನೀವೆ** **12) ಆಕಾರ – ಕಾಲ.**

**13) ಆಹಾರ – ಮೋಕ್ಷ** **14) ಎಚ್ಚರ – ಪ್ರಭವ.**

**15) ನಿದ್ರೆ – ಪ್ರಳಯ** **16) ರಾಜ್ಯ – ಪರಲೋಕ.**

**17) ಪಾಲಕರು – ಭೂತಗಳು** **18) ದಂಡನೆ – ಯಮದಂಡನೆ**

**19)ಪ್ರಿಯಕುಮಾರನು – ಯೋಗಿ** **20) ಮೊಮ್ಮಗ – ಜ್ಞಾನಿ.**

ದೇವರು ಯಾವ ಅಳತೆಗೂ ಸಿಗದವನು. ಆದ್ದರಿಂದ ಆತನ ಜ್ಞಾನವನ್ನು ತಿಳಿದವರು ಭೂಮಿಮೇಲೆ ಇರಬಹುದಾಗಲಿ, ಆತನನ್ನು ತಿಳಿದವನು ಯಾರೂ ಭೂಮಿಮೇಲೆ ಇಲ್ಲ. ಇಲ್ಲಿಯವರೆಗು ದೇವರನ್ನು ನೋಡಿದ್ದೇನೆಂದು ಹೇಳುವವನು ಯಾರೂ ಇಲ್ಲ. ಒಂದುವೇಳೆ ನಾನು ದೇವರನ್ನು ನೋಡಿದ್ದೇನೆಂದು ಯಾರಾದರೂ ಅಂದರೆ ಆ ಮಾತು ಪೂರ್ತಿ ಅಸತ್ಯ. ಏಕೆಂದರೆ ದೇವರು ಹುಡುಕಲ್ಪಡುವವನು, ದೊರೆಯುವವನಲ್ಲ. ದೇವರ ವೃತ್ತಿ ಸುಮ್ಮನಿರುವುದಾದರೆ, ದೇವರ ಪ್ರವೃತ್ತಿ ತಿಳಿಯದಂತಿರುವುದು. ಅಂತಹ ಪ್ರವೃತ್ತಿ ಇರುವ ದೇವರನ್ನು ಯಾವ ವಿಧವಾಗಿ ಕೂಡ ನಿರೂಪಿಸಲಾರೆವು. ಹೊರಗಿನ ನಿರೂಪಣೆಗಳಿಗೆ

ತಿಳಿಯದವನು ದೇವರು, ಆದ್ದರಿಂದ ಪ್ರತ್ಯಕ್ಷವಾಗಿ ಮುಗಿಯಲಾರೆವು. ಆದ್ದರಿಂದ ನಮಗಿಂತ ದೇವರಿಗೆ ಹತ್ತಿರವಾಗಿರುವ ಆತನ ಪಾಲಕರ ಮೂಲಕ ನನ್ನ ನಮಸ್ಕಾರಗಳನ್ನು ದೇವರಿಗೆ ತಿಳಿಸಿದ್ದೇವೆ. ಎಲ್ಲಿಯೂ ಯಾವ ನಿರೂಪಣೆಗೆ ಬಾರದ ದೇವರು, ವಿಶ್ವವೆಲ್ಲಾ ವ್ಯಾಪಿಸಿದ್ದು ಭಗವಂತನಾಗಿ ಜನ್ಮಿಸಿದ್ದಾನೆ, ಆ ಭಗವಂತನೆ ಕೃಷ್ಣನು. ಕೃಷ್ಣನು ಸಾಧಾರಣ ಮನುಷ್ಯನಾಗಿ ಕಾಣಿಸುತ್ತಿದ್ದರೂ ಆತನನ್ನು ಭಗವಂತನ ರೂಪದಲ್ಲಿರುವ ದೇವರೆಂದು ಹೇಳಬಹುದು. ಆದುದರಿಂದ ಒಂದು ಸಂದರ್ಭದಲ್ಲಿ ನನ್ನನ್ನು ನೋಡಿದರೆ ದೇವರನ್ನು ನೋಡಿದಂತೆಯೆಂದು ಭಗವಂತನು ಹೇಳಿದ್ದಾನೆ.

ದೇವರು ಸೃಷ್ಟಿ ಪೂರ್ವದಲ್ಲಿಯೇ ಮಾಯೆಯನ್ನು ತಯಾರು ಮಾಡಿದಾಗ, ಭಗವಂತನು ಅದನ್ನು ನವಿಲುಗರಿಯ ರೂಪದಲ್ಲಿ ತೋರಿಸುತ್ತಿದ್ದಾನೆ. ನವಿಲುಗರಿಯನ್ನು ಭಗವಂತನು ಸೂಚಿಸಿದಂತೆ ಅದು ನಮ್ಮ ತಲೆಯಲ್ಲಿನ ಗುಣಚಕ್ರವೇಯೆಂದು ನಾವು ಹೇಳುತ್ತಿದ್ದೇವೆ. ಅದು ಒಂದು ಚಕ್ರವೆಂದು ತಿಳಿಯುವುದಕ್ಕೆ ನವಿಲುಗರಿ ಹಳೆಯದಾಗಿಹೋದಾಗ ನಾವು ತಾಮಸ ಗುಣಭಾಗವೆಂದು ತಿಳಿಸಿದರು ಕೊನೆಯ ಚಕ್ರವೊಂದರ ಹೊರಗಿನ ಅಂಚಿನಲ್ಲಿ ಚಕ್ರದಂತೆ ಕಾಣಿಸುವಂತೆ ಬಣ್ಣಹೋಗಿರುತ್ತದೆ. ಸುತ್ತಾ ಅಂಚಿನಲ್ಲಿ ಬಣ್ಣಹೋ ಗಿರುವು ದರಿಂದ ಅದನ್ನು ಚಕ್ರವಾಗಿ ಗುರುತಿಸುವುದಕ್ಕೆ ಸುಲಭವಾಗಿ ಇರುತ್ತದೆ. ಬಣ್ಣಹೋದ ನವಿಲುಗರಿವೊಂದರ ಅಂಚಿನ ಭಾಗವನ್ನು ನಂತರ ಪುಟ ಚಿತ್ರದಲ್ಲಿ ನೋಡಬಹುದು.

ಇಲ್ಲಿಯವರೆಗೂ ನವಿಲುಗರಿಯ ಮುಂದಿನ ಭಾಗದಲ್ಲಿ ಕಾಣಿಸುವ ನಾಲ್ಕುಬಣ್ಣಗಳನ್ನು ಕುರಿತು ಮತ್ತು ಕೆಳಗಿನ ಕಾಂಡವನ್ನು ಕುರಿತು, ಕೊನೆಗೆ ಎರಡುಕಡೆಯಲ್ಲಿರುವ ಕೇಶಗಳನ್ನು ಕುರಿತು ತಿಳಿದುಕೊಂಡಿದ್ದೇವೆ. ಇವೆಲ್ಲವೂ ಆಧ್ಯಾತ್ಮಿಕ ರಂಗದಲ್ಲಿ ಎಷ್ಟೋ ಅರ್ಥದಿಂದ ಕೂಡಿಕೊಂಡಿವೆಯೆಂದು ಸಹ ಅರ್ಥವಾಗಿದೆ. ನವಿಲುಗರಿಯಲ್ಲಿ ಎಷ್ಟೋ ಜ್ಞಾನ ಒಳಗೊಂಡಿರುವುದರಿಂದ ಭಗವಂತನಾದ ಕೃಷ್ಣನು ಧರಿಸಿದ್ದಾನೆಂದು ಸಹ ತಿಳಿದುಕೊಂಡಿದ್ದೇವೆ. ಇವೆಲ್ಲ

ತಿಳಿದ ನಂತರ ನಾವು ಹೇಳುವುದೇನೆಂದರೆ! ದೇವರು ಕಾಣಿಸದವನು ಆದರೂ ಕಾಣಿಸದ ಮಾಯೆಯನ್ನು, ಅದರ ಗುಣಗಳ ರೂಪವನ್ನು, ಅದು ಶರೀರದಲ್ಲಿ ಹೇಗೆ ವ್ಯಾಪಿಸಿ ಕೆಲಸ ಮಾಡುತ್ತಿದೆಯೋ ಆ ವಿಧಾನವನ್ನು, ಕಾಣಿಸುವಂತೆ ನವಿಲುಗರಿಯಲ್ಲಿ ಜೋಡಿಸಿಟ್ಟಿದ್ದಾರೆ. ಶರೀರದಲ್ಲಿನ ಕಾಣಿಸದ ಮಾಯಾ ವಿಧಾನ, ಕಾಣಿಸುವ




**ಹಳೆದಾದ ನವಿಲುಗೆರೆ**

ನವಿಲುಗರಿಯಲ್ಲಿ ಇದೆಯೆಂದು ಭಗವಂತನು ಧರಿಸಿ ದೃಶ್ಯರೂಪವಾಗಿ ತೋರಿಸಿದ್ದಾನೆ. ದೃಶ್ಯರೂಪದಲ್ಲಿ ಮೂರುಗುಣಗಳು, ಅವುಗಳಲ್ಲಿ ಜೀವಾತ್ಮ ಗುಣಗಳ ಮಧ್ಯದಲ್ಲಿ ಆತ್ಮ ಇದೆ. ನವಿಲುಗರಿಯಲ್ಲಿ ಎಷ್ಟು ಹುಡಿಕಿದರೂ ಮೂರನೆ ಆತ್ಮವಾದ ಪರಮಾತ್ಮನ ಮಾರ್ಗ (ದಾರಿ) ಕಾಣಿಸಲಿಲ್ಲ. ಆದರೆ ಸೂತ್ರದ ಪ್ರಕಾರ ಕಾಣಿಸದ ಮಾಯೆಗು, ಜೀವಿಗು, ಆತ್ಮಕ್ಕು, ಕಾಣಿಸುವ ಗುರುತುಗಳಾದ ಬಣ್ಣಗಳನ್ನು ನವಿಲುಗರಿಯಲ್ಲಿ ತೋರಿಸಿದಾಗ, ಹಾಗೆ ಕಾಣಿಸದ

ದೇವರ (ಪರಮಾತ್ಮ) ಗುರುತನ್ನು ಸಹ ನವಿಲುಗರಿಯಲ್ಲಿ ತೋರಿಸಿರಬೇಕು ಅಲ್ಲವೆ! ಎಂದು ಯೋಚಿಸಿದರೆ ಸ್ವಲ್ಪ ಸಮಾಚಾರ ತಿಳಿಯುತ್ತಿದೆ. ಅದೇನೆಂದರೆ!

ಸಕಲ ಸೃಷ್ಟಿಯನ್ನು ತಯಾರು ಮಾಡದಮೊದಲು ದೇವರು ಕೆಲಸ ಮಾಡಿದ್ದಾನೆ. ಸೃಷ್ಟಿ ತಯಾರಾದ ನಂತರ ದೇವರು ಯಾವ ಕೆಲಸವನ್ನು ಮಾಡದವನಾಗಿ ಹೋಗಿದ್ದಾನೆ. ಸೃಷ್ಟಿ ಎಲ್ಲದಕ್ಕೂ ಮೂಲಕಾರಣ ಪರಮಾತ್ಮನೆ. ಪರಮಾತ್ಮ ಕೆಲಸ ಮಾಡದಿದ್ದರೂ ಆತನು ಇದ್ದರೇನೆ ಎಲ್ಲಾ ಇವೆ. ಆತನು ಕಾಣಿಸದಿದ್ದರೂ ಆತನು ಮಾಡದಿರುವುದು ಏನು ಇಲ್ಲ. ಸಕಲ ಜೀವರಾಶಿಗಳನ್ನು ಹುಟ್ಟಿಸುವವನು, ಸಾಕುವವನು (ಪೋಷಿಸುವವನು), ಸಾಯಿಸುವವನು ದೇವರೆ. ಅದರೂ ಆತನು ಎಲ್ಲಿಯೂ ಕಾಣಿಸದೆ ಎಲ್ಲವನ್ನು ಆತನ ಪಾಲಕರ ಮುಖಾಂತರ ಮಾಡಿಸುತ್ತಿದ್ದಾನೆ. ದೇವರು ಇಲ್ಲದೆ ಮಾಯೆಯಾಗಲಿ ಜೀವಾತ್ಮವಾಗಲಿ ಆತ್ಮವಾಗಲಿ ಯಾರು ಇಲ್ಲವೆಂಬುದಕ್ಕೆ ಚಿಕ್ಕ ಉದಾಹರಣೆಯನ್ನು ಹೇಳಿಕೊ ಳ್ಳೋಣ. ಪಂಚಬಣ್ಣಗಳ ರಾಮನಗಿಳಿಯ ಚಿತ್ರವನ್ನು ಚಿತ್ರಿಸಬೇಕೆಂದು ಒಬ್ಬನು ಅಂದುಕೊಂಡಿದ್ದಾನೆ. ಪಂಚಬಣ್ಣಗಳ ರಾಮಗಿಳಿಯನ್ನು ಜೂಪಾರ್ಕಿನಲ್ಲಿ ನಾವು ನೋಡಬಹುದು. ಪಂಚಬಣ್ಣಗಳ ರಾಮಗಿಳಿ ಎಂದರೆ ಐದು ಬಣ್ಣಗಳಿಂದಿರುವ ರಾಮಗಿಳಿ ಎಂದು ಅರ್ಥ. ಚಿತ್ರಕಾರನು ಐದು ಬಣ್ಣಗಳ ಗಿಳಿಯನ್ನು ಚಿತ್ರಿಸಬೇ ಕೆಂದುಕೊಂಡಾಗ ಐದು ಬಣ್ಣಗಳನ್ನು ತೆಗೆದುಕೊಂಡು ಬಂದು ಬಿಳಿ ದಪ್ಪವಾಗಿರುವ ಕಾಗದವನ್ನು (ಅರ್ಟ್ ಪೇಪರನ್ನು) ತೆಗೆದುಕೊಂಡನು. ಐದು ಬಣ್ಣಗಳ ಗಿಳಿಯನ್ನು ಜೂಪಾರ್ಕಿನಲ್ಲಿ ನೋಡಿರುವುದು ನೋಡಿದಂತೆ ಚಿತ್ರೀಕರಿಸಬೇಕೆಂದುಕೊಂಡನು. ಹಾಗೆ ಪ್ರಾರಂಭಿಸಿ ಚಿತ್ರಿಸಿದ್ದಾನೆ. ಜೂಪಾರ್ಕಿನಲ್ಲಿ ಗಿಳಿ ಯಾವ ವಿಧವಾಗಿ ಇದೆಯೋ ನೂರಕ್ಕೆ ನೂರಷ್ಟು ಅದೇ ವಿಧವಾಗಿರುವಂತೆ ಚಿತ್ರಿಸಿದ್ದಾನೆ. ಆ ಚಿತ್ರವನ್ನು ನೋಡಿದರೆ ಪಾರ್ಕಿನಲ್ಲಿ ಗಿಳಿಯನ್ನು ನೋಡಿದಂತೆ ಇದೆ.

ಹಾಗೆ ಚಿತ್ರಿಸಿದ ಪಂಚಬಣ್ಣಗಳ ಗಿಳಿಯ ಚಿತ್ರಪಟವನ್ನು ಗೋಡೆಗೆ ತಗಲಿಸಿಟ್ಟಿದ್ದಾನೆ. ಆ ಚಿತ್ರಕಾರನು ಪಾರ್ಕಿನಲ್ಲಿರುವ ಗಿಳಿಯಂತೆ ಇರುವ ಚಿತ್ರವನ್ನು

ಚಿತ್ರಿಸಿದ್ದಾನೆಂದು ತಿಳಿದುಕೊಂಡ ಆತನ ಸ್ನೇಹಿತನು ಆ ಚಿತ್ರವನ್ನು ನೋಡಬೇಕೆಂದು ಬಂದಿದ್ದಾನೆ. ಸ್ನೇಹಿತನು ಬಂದ ಸಮಯಕ್ಕೆ ಚಿತ್ರವನ್ನು ಚಿತ್ರಿಸಿದ ಚಿತ್ರಕಾರನು ಮನೆಯಲ್ಲಿ ಇಲ್ಲ. ಬಂದಿರುವ ಸ್ನೇಹಿತನು ಚಿತ್ರಿಸಿದ ಚಿತ್ರವನ್ನು ನೋಡಬೇಕೆಂದು ಬಂದಿದ್ದಾನೆ, ಆದ್ದರಿಂದ ಮನೆಯಲ್ಲಿರುವ ಗೋಡೆಗಿರುವ ಚಿತ್ರಗಳನ್ನು ನೋಡಿದ್ದಾನೆ. ಆದರೆ ಗಿಳಿಯ ಚಿತ್ರ ಕಾಣಿಸಲಿಲ್ಲ. ಅದಕ್ಕೆ ಕಾರಣ ಏನೆಂದರೆ! ಆ ಸ್ನೇಹಿತನು ಚಿತ್ರಕಾರನ ಮನೆಗೆ ಬಾರದಮುನ್ನ ಒಂದು ಗಂಟೆಕೆಳಗೆ ದೊಡ್ಡಗಾಳಿ ಬೀಸಿದೆ. ಹಾಗೆ ಬೀಸಿದ ಗಾಳಿಗೆ ಆ ಚಿತ್ರಪಟವು ತಿರುಗುಬಿದ್ದಿದೆ. ಅದು ಗೋಡೆಗೇ ಇದ್ದರೂ ಗಾಳಿಗೆ ತಿರುಗಿಬಿದ್ದಿರುವುದರಿಂದ, ಮುಂಭಾಗದಲ್ಲಿ ಕಾಣಿಸುವ ಗಿಳಿಚಿತ್ರ ಗೋಡೆಯಕಡೆ ಹೋಗಿದೆ. ಗೋಡೆಕಡೆ ಇರುವ ಬಿಳಿಯ ಕಾಗದ ಮುಂಭಾಗಕ್ಕೆ ಬಂದಿದೆ. ಹಾಗೆ ಇರುವುದರಿಂದ ಗಿಳಿಯ ಚಿತ್ರ ಕಾಣಿಸದೆ ಬಿಳಿಯ ಕಾಗದ ಮಾತ್ರ ಕಾಣಿಸುತ್ತಿದೆ. ಆಗ ಚಿತ್ರಕಾರನಿಗೆ ಆತನ ಸ್ನೇಹಿತನು ಫೋನ್‌ಮಾಡಿ ಗಿಳಿ ಇರುವ ಚಿತ್ರ ಎಲ್ಲಿದೆ ಎಂದು ಕೇಳಿದನು. ಮೊದಲ ಹಾಲ್‌ನಲ್ಲಿ ಎದುರಿನಲ್ಲಿ ಬಲಗಡೆ ಇದೆ ನೋಡು ಎಂದು ಚಿತ್ರಕಾರನು ಹೇಳಿದ್ದಾನೆ. ಆತನು ಹೇಳಿದ ಸ್ಥಳದಲ್ಲಿ ಯಾವ ಚಿತ್ರ ಇಲ್ಲದ ಬಿಳಿಯ ಕಾಗದ ಇರುವುದನ್ನು ಸ್ನೇಹಿತನು ನೋಡಿ ಇದು ತಿರುಗುಬಿದ್ದಿದೆಯೆಂದು ತಿಳಿದು ತಿರುಗಿಸಿ ನೋಡಿದನು. ಆಗ ಐದು ಬಣ್ಣಗಳ ಚಿತ್ರ ಕಾಣಿಸಿದೆ. ಚಿತ್ರಕಾರನ ಮನೆಗೆ ಬಂದಿರುವ ಆತನು ಸ್ನೇಹಿತನು ಮೊದಲು ಗೊಂಬೆಯಿಲ್ಲದ ಬಿಳಿಕಾಗದವನ್ನು ನೋಡಿದ್ದಾನೆ. ನಂತರ ಚಿತ್ರ ಇರುವ ಬಣ್ಣಗಳ ಭಾಗವನ್ನು ನೋಡಿದ್ದಾನೆ. ಇದನ್ನನುಸರಿಸಿ ಈಗ ನಮಗೆ ಅರ್ಥವಾಗಿರುವುದು ಏನೆಂದರೆ!

ಚಿತ್ರವನ್ನು ಕಾಗದದ ಮೇಲೆ ಚಿತ್ರಿಸಿದ್ದೇವೆ. ಬಿಳಿಯ ಕಾಗದ ಚಿತ್ರಕ್ಕೆ ಆಧಾರ. ಕಾಗದದ ಮೇಲೆ ಚಿತ್ರ ಇದೆ. ಕಾಗದ ಬಿಳಿಯದಾದರೂ ಒಂದು ಕಡೆ ಬಣ್ಣಗಳ ಚಿತ್ರವನ್ನು ತೋರಿಸುತ್ತಿದೆ. ಮತ್ತೊಂದುಕಡೆ ತನ್ನ ಸಹಜತ್ವವಾದ ಚಿತ್ರ ಇಲ್ಲದ ಬಿಳಿಯ ಕಾಗದ ಕಾಣಿಸುತ್ತಿದೆ. ಐದು ಬಣ್ಣಗಳ ಗಿಳಿಯನ್ನು ತೋರಿಸುತ್ತಿರುವ ಕಾಗದ ತನ್ನ ಅಸಲು ಬಣ್ಣವನ್ನು ಕಾಣಿಸದಂತೆ ಮಚ್ಚಿಟ್ಟಂತೆ

ಎರಡನೆಕಡೆ ಕಾಣಿಸದಂತೆ ಇದೆ. ನೋಡುವವರೆಲ್ಲರೂ ಮೊದಲಿರುವ ಪಂಚಬಣ್ಣಗಳ ಗಿಳಿಯನ್ನು ಮಾತ್ರ ನೋಡುತ್ತಾರೆ. ಆದರೆ ಆ ಚಿತ್ರಕ್ಕೆ ಆಧಾರವಾದ ಕಾಗದವೊಂದರ ಅಸಲು ಬಣ್ಣವನ್ನು ಯಾರೂ ನೋಡುವುದಿಲ್ಲ. ಈ ಚಿತ್ರ ನೋಡಬೇಕೆಂದರೆ ಈ ಕಾಗದವೇ ಆಧಾರ ಅಲ್ಲವೆ ಎಂದು ಯಾರೂ ಯೋಚಿಸುವುದಿಲ್ಲ. ಚಿತ್ರಕ್ಕೆ ಕಾಗದ ಹೇಗೆ ಆಧಾರವೊ, ಈ ಕಾಣಿಸುವ ಪ್ರಪಂಚಕ್ಕು ಸಹ ದೇವರು ಆಧಾರವಾಗಿ ಇದ್ದಾನೆ. ಕಾಗದ ಇಲ್ಲದಿದ್ದರೆ ಪಂಚಬಣ್ಣಗಳ ಗಿಳಿ ಹೇಗೆ ಇಲ್ಲವೊ, ಹಾಗೆಯೇ ದೇವರು ಇಲ್ಲದಿದ್ದರೆ ಪಂಚಭೂತಗಳ ಪ್ರಪಂಚ ಸಹ ಇಲ್ಲವೆಂದು ತಿಳಿಯಬೇಕು. ಕಾಣಿಸುವ ಪಂಚಬಣ್ಣಗಳ ಗಿಳಿಯನ್ನು ನೋಡುವವನು ಅದಕ್ಕೆ ಆಧಾರವಾದ ಕಾಗದವನ್ನು ಕುರಿತು ಹೇಗೆ ಯೋಚಿಸುವುದಿಲ್ಲವೊ, ಹಾಗೆಯೇ ಕಾಣಿಸುವ ಪಂಚಭೂತಗಳ ಜಗತ್ತನ್ನು ನೋಡುವವರು ಅದಕ್ಕೆ ಆಧಾರವಾದ ದೈವವನ್ನು ಕುರಿತು ಯಾರೂ ಯೋಚಿಸುತ್ತಿಲ್ಲ. ಹಿಂಭಾಗದಲ್ಲಿ ಕಾಣಿಸದೆ ಇರುವ ಬಿಳಿಯ ಕಾಗದ ಮುಂಭಾಗದಲ್ಲಿ ಬಣ್ಣಗಳ ಗಿಳಿಯನ್ನು ತೋರಿಸಿದಂತೆ, ಹಿಂಭಾಗದಲ್ಲಿ ಕಾಣಿಸದಂತೆ ಅಡಕವಾಗಿರುವ ದೇವರು ಮುಂಭಾಗದಲ್ಲಿ ಬಣ್ಣಗಳ ಪ್ರಪಂಚವಾಗಿ ಕಾಣಿಸುತ್ತಿದ್ದಾನೆ. ಇಲ್ಲಿಯವರೆಗು ಹೇಳಿದ ಕಾಗದ, ಬಣ್ಣದಗಿಳಿಯ ವಿಧಾನದಲ್ಲಿ ಕಾಣಿಸುವ ಪ್ರಪಂಚ, ಕಾಣಿಸದ ದೇವರ ವಿಧಾನ ಇರುವಂತೆ, ನವಿಲುಗರಿ ಯಲ್ಲಿಯೂ ಸಹ ಇಂತಹ ರಹಸ್ಯವೇ ಇದೆ. ಅದೇನೆಂದರೆ!

ನಮ್ಮ ಶರೀರದಲ್ಲಿನ ಗುಣಚಕ್ರದಲ್ಲಿರುವ ಮಾಯೆಗು, ಜೀವಿಗು, ಆತ್ಮಕ್ಕು ದೇವರೆ ಆಧಾರವಾಗಿ ಇದ್ದಾನೆ. ಪಂಚಬಣ್ಣಗಳ ಗಿಳಿಯೊಂದಿಗೆ ಸಮಾನವಾಗಿ ಮೂರು ಗುಣಗಳು + ಜೀವಾತ್ಮ + ಆತ್ಮ ಎನ್ನುವ ಐದು ಭಾಗಗಳಾಗಿ ಗುಣಚಕ್ರವು ಇದೆ. ಗುಣಚಕ್ರದ ಹಿಂಭಾಗ ತಿಳಿಯದಂತೆ ಇದ್ದು ನಡೆಸುವ ಮೂಲ ಪುರುಷನು ದೇವರೆ. ಆದರೆ ದೇವರನ್ನು ಕುರಿತು ಯಾರೂ ಯೋಚಿಸುತ್ತಿಲ್ಲ. ನವಿಲುಗರಿಯ ಮುಂಭಾಗದಲ್ಲಿ ಬಣ್ಣಗಳ ಭಾಗಗಳು ಕಾಣಿಸುತ್ತಿವೆ. ನವಿಲುಗರಿಯನ್ನು ತಿರುಗಿಸಿ ಹಿಂದಿನ ಭಾಗವನ್ನು ನೋಡಿದರೆ

ಮುಂದಿರುವ ಯಾವ ಬಣ್ಣವೂ ಕಾಣಿಸುವುದಿಲ್ಲ. ಗಿಳಿಗೆ ಕಾಗದ ಆಧಾರವಾದಂತೆ ನವಿಲುಗರಿಯೊಂದರ ಮುಂಭಾಗದಲ್ಲಿ ಕಾಣಿಸುವ ಮಾಯೆಗು, ಜೀವಾತ್ಮಕ್ಕು, ಆತ್ಮಕ್ಕು ದೇವರು ಒಬ್ಬನೇ ಆಧಾರವೆನ್ನುವಂತೆ ನವಿಲುಗರಿಯ ಹಿಂಭಾಗದಲ್ಲಿ ಒಂದೇಬಣ್ಣ ಕಾಣಿಸುತ್ತಿದೆ. ತನ್ನಲ್ಲಿಯೇ ಮಾಯೆ ಇದ್ದರೂ, ಜೀವಾತ್ಮ, ಆತ್ಮ ಇದ್ದರೂ ಅವುಗಳ ಗುರುತು ಏನು ಕಾಣಿಸದಂತೆ ದೇವರಿದ್ದಾನೆನ್ನುವುದಕ್ಕೆ ಗುರುತಾಗಿ ನವಿಲುಗರಿಯಲ್ಲಿ ಮುಂಭಾಗ ಮಾಯೆಗು, ಜೀವಿಗು, ಆತ್ಮಕ್ಕು ಗುರುತಾಗಿ ನವಿಲುಗರಿಯ ಬಣ್ಣಗಳು ಕಾಣಿಸುತ್ತಿದ್ದರೂ, ಹಿಂಭಾಗದಲ್ಲಿ ನೋಡಿದರೆ ಮುಂಭಾಗದಲ್ಲಿರುವ ಬಣ್ಣಗಳ ಗುರುತು ಯಾವುದು ಕಾಣಿಸುತ್ತಿಲ್ಲ. ಇದನ್ನನುಸರಿಸಿ ದೇವರು ಒಂದುಕಡೆ ಎಲ್ಲಾ ತಾನಾಗಿದ್ದರೂ, ಎಲ್ಲದಕ್ಕಿಂತ ನಾನು ಬೇರೆಯಾಗಿ ಇದ್ದೇನೆ ಎಂದು ತಿಳಿಸುವುದಕ್ಕೆ ಆ ವಿಧವಾಗಿ ನವಿಲುಗರಿಗೆ ಮುಂದಿರುವ ಬಣ್ಣಗಳು ಹಿಂದೆ ಕಾಣಿಸುವುದಿಲ್ಲವೆಂದು ತಿಳಿಯುತ್ತಿದೆ. ಚಿತ್ರಪಟದಲ್ಲಿನ ಗಿಳಿಯಮೇಲೆ ಧ್ಯಾಸವಿನ್ನಿಟ್ಟು ನೋಡುವವರು ಯಾವ ವಿಧವಾಗಿ ಅದಕ್ಕೆ ಆಧಾರವಾದ ಕಾಗದವನ್ನು ಗಮನದಲ್ಲಿಟ್ಟುಕೊಳ್ಳುತ್ತಿಲ್ಲವೊ, ಅದೇ ರೀತಿಯಾಗಿ ಪ್ರಪಂಚ ಧ್ಯಾಸದಲ್ಲಿ ಮುಳಿಗಿಹೋದವನು ಮಾಯೆಗು ಜೀವಿಗು, ಆತ್ಮಕ್ಕು ಆಧಾರವಾದ ದೇವರ ಮೇಲೆ ಗಮನ ಇಡುತ್ತಿಲ್ಲವೆಂದು ತಿಳಿಸುತ್ತಿದ್ದೇವೆ.

ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 4ನೇ ಶ್ಲೋಕದಲ್ಲಿ **"ಮತ್ ಸ್ಥಾನಿ ಸರ್ವಭೂತಾನಿ"** ಎಂದು ಕೃಷ್ಣನು ಹೇಳಿದ್ದಾನೆ. ನನ್ನ ಸ್ಥಾನದಲ್ಲಿ ಎಲ್ಲಾ ಜೀವರಾಶಿಗಳಿವೆಯೆಂದು ಅದರ ಅರ್ಥ. ನಂತರ ಪಕ್ಕದಲ್ಲಿ 5ನೆ ಶ್ಲೋಕದಲ್ಲಿಯೇ **"ನಚ ಮತ್‌ಸ್ತಾನಿ ಭೂತಾನಿ"** ಎಂದು ಆತನೇ ಹೇಳಿದ್ದಾನೆ. ನನ್ನಲ್ಲಿ ಯಾವ ಜೀವರಾಶಿ ಇಲ್ಲವೆಂದು ಈ ಮಾತಿನೊಂದರ ಅರ್ಥ. ಇಲ್ಲಿ ಚೆನ್ನಾಗಿ ಗಮನಿಸಿದರೆ ಮುಂದಿನ ಶ್ಲೋಕದಲ್ಲಿ "ಮತ್ ಸ್ಥಾನಿ ಭೂತಾನಿ" ಎಂದವನು ಕೆಳಗಿನ ಶ್ಲೋಕದಲ್ಲಿಯೇ "ನಚ ಮತ್‌ಸ್ಥಾನಿ ಭೂತಾನಿ" ಎನ್ನುವುದರಲ್ಲಿ ಹೊರಗೆ ನೋಡುವುದಕ್ಕೆ ಒಂದಕ್ಕೊಂದು ಪೂರ್ತಿ ವಿರುದ್ಧ ಭಾವನೆ ಕಾಣಿಸುತ್ತಿವೆ. ಪಕ್ಕಪಕ್ಕದಲ್ಲಿಯೇ ಇರುವ ಶ್ಲೋಕಗಳಲ್ಲಿಯೇ ಮೊದಲು

"ನನ್ನಲ್ಲಿ ಸರ್ವ ಜೀವರಾಶಿಗಳಿವೆ" ಎಂದು ಹೇಳಿದ ಭಗವಂತನು, ಎರಡನೆ ಶ್ಲೋಕದಲ್ಲಿಯೇ "ನನ್ನಲ್ಲಿ ಯಾವ ಜೀವರಾಶಿಯಿಲ್ಲ" ಎಂದು ಹೇಳಿದ್ದಾನೆ. ಕೇಳುವುದಕ್ಕೆ ಭಗವಂತನೇ ಅಸತ್ಯ ಮಾತನಾಡುತ್ತಿದ್ದಾನೆ ಎಂದು ಅನುಮಾನ ಬರುತ್ತದೆ. ಭಗವಂತನ ಎರಡು ಮಾತುಗಳಲ್ಲಿ ಒಂದು ಒಪ್ಪಾದರೆ ಎರಡನೆಯದು ತಪ್ಪಾಗುತ್ತದೆ. ಆದರೆ ಇಲ್ಲಿ ಎರಡು ಮಾತುಗಳು ಒಪ್ಪೇ ಆಗುತ್ತವೆ. ಭಗವಂತನಿಗೆ ಅಸತ್ಯ ಹೇಳಬೇಕಾದ ಅವಶ್ಯಕತೆಯಿಲ್ಲ. ಆತನು ಎರಡು ಮಾತುಗಳು ಹೇಗೆ ಸತ್ಯವೋ ವಿವರಿಸಿಕೊಳ್ಳೋಣ. ಇದಕ್ಕು ಮೊದಲು ಹೇಳಿಕೊಂಡ ಕಾಗದದ ಚಿತ್ರ ಉದಾಹರಣೆಯನ್ನು ತೆಗೆದುಕೊಳ್ಳೋಣ. ಕಾಗದದ ಮೇಲೆ ಗಿಳಿಯಗೊಂಬೆ ಹೊರಗೆ ಕಾಣಿಸುತ್ತಿರುವಾಗ "ಮತ್ ಸ್ಥಾನಿ ಗಿಳಿ" (ನನ್ನಲ್ಲಿ ಗಿಳಿ ಇದೆ) ಎಂದು ಕಾಗದ ಹೇಳಿದರೆ ಆ ಮಾತು ನಿಜವೇ ಆಗುತ್ತದೆ. ಕಾಗದ ತಿರುಗಿಬಿದ್ದು, ಗಿಳಿಯ ಚಿತ್ರ ಗೋಡೆಯಕಡೆ ಇದೆ ಹೊರಗಡೆ ಖಾಲಿ ಕಾಗದ ಕಾಣಿಸುವಾಗ ಅದೇ ಕಾಗದ "ನಚ ಮತ್ ಸ್ಥಾನಿ ಗಿಳಿ" (ನನ್ನಲ್ಲಿ ಗಿಳಿ ಇಲ್ಲ) ಎಂದು ಹೇಳಿದರೆ ಆ ಮಾತು ಆಗ ಸತ್ಯವೇ ಆಗುತ್ತದೆ. ಒಂದೇ ಕಾಗದದ ಮೇಲೆ ಒಂದುಕಡೆ ಗಿಳಿ ಇದೆ, ಒಂದುಕಡೆ ಗಿಳಿಯಿಲ್ಲ. ಹಾಗೆಯೇ ಒಂದೇ ದೇವರಲ್ಲಿ ಒಂದು ವಿಧವಾಗಿ ನೋಡಿದರೆ ಸರ್ವಜೀವರಾಶಿಗಳು ಇವೆ. ಮತ್ತೊಂದು ವಿಧವಾಗಿ ನೋಡಿದರೆ ಯಾವ ಜೀವರಾಶಿಯಿಲ್ಲ. ಇದರ ಪ್ರಕಾರ ಅರ್ಥ ಮಾಡಿಕೊಂಡರೆ ಎರಡು ಶ್ಲೋಕಗಳಲ್ಲಿನ ಮಾತುಗಳು ಸತ್ಯವೇ ಆಗುತ್ತವೆ. ಆ ವಿಧಾನವನ್ನು ನವಿಲುಗರಿಯೂ ಸಹ ತೋರಿಸುತ್ತಿದೆ. ನವಿಲುಗರಿಯಲ್ಲಿ ಮಾಯಚಕ್ರ ಯಾವುದು ಇಲ್ಲವೆಂದು ಸಹ ಹೇಳಬಹುದು. ಎರಡು ಮಾತುಗಳು ವಾಸ್ತವವೆ ಏಕೆಂದರೆ! ಒಂದುಕಡೆ ನವಿಲುಗರಿಯಲ್ಲಿ ಮಾಯಚಕ್ರ ಕಾಣಿಸುತ್ತಿದೆ. ಮತ್ತೊಂದುಕಡೆ ಮಾಯಚಕ್ರ ಸ್ವಲ್ಪವೂ ಕಾಣಿಸುತ್ತಿಲ್ಲ. ಈ ವಿಧವಾಗಿ ಭಗವದ್ಗೀತೆಯಲ್ಲಿ ಭಗವಂತನು ಹೇಳಿದ **"ಮತ್ ಸ್ಥಾನಿ ಭೂತಾನಿ"** ಎನ್ನುವ ಮಾತಿಗೆ, ಹಾಗೆಯೇ **"ನಚ ಮತ್‌ಸ್ಥಾನಿ ಭೂತಾನಿ"** ಎನ್ನುವ ಮಾತಿಗೆ ಸರಿಯಾದ ಹೋಲಿಕೆ ನವಿಲುಗರಿಯಲ್ಲಿ ಇದೆ. ಆದ್ದರಿಂದ ಎಲ್ಲಾ ವಿಧಗಳ ಜ್ಞಾನ ಸಂದೇಶಕ್ಕೆ ನಿಲಯವಾದ ನವಿಲುಗರಿಯನ್ನು ಭಗವಂತನಾದ ಕೃಷ್ಣನು ಧರಿಸಿದ್ದಾನೆ. ಹಾಗೆ

ಆತನು ಧರಿಸುವುದರಿಂದ ಅದು ಪ್ರಜೆಗಳಿಗೆ ಜ್ಞಾನಸಂದೇಶವಾಗಿದೆ. ಆದರೂ ಕೃಷ್ಣನ ಘನತೆ ತಿಳಿಯದ ಮನುಷ್ಯರು, ಕೃಷ್ಣನು ಧರಿಸಿದ ನವಿಲುಗರಿಯನ್ನು ಖಾತರಿ ಮಾಡಲಿಲ್ಲ. ಆದ್ದರಿಂದ ನವಿಲುಗರಿ ಎಂದರೆ ಏನೋ ಯಾರಿಗು ತಿಳಿಯದಂತೆ ಹೋಗಿದೆ. ಇಂದಿನಿಂದಾದರೂ ಕೃಷ್ಣನು ಧರಿಸಿದ ನವಿಲುಗರಿಯನ್ನು ಕುರಿತು ತಿಳಿದುಕೊಳ್ಳುವುದಕ್ಕೆ, ಭಗವಂತನಾದ ಕೃಷ್ಣನನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಪ್ರಯತ್ನಿಸಿ, ಅದರಿಂದ ಮುಕ್ತಿ ಹೊಂದಿರೆಂದು ತಿಳಿಸುತ್ತಿದ್ದೇವೆ.



# ಕೃಷ್ಣನು ಬ್ರಹ್ಮಚಾರಿಯಾ? ಸ್ವಲ್ಪಾಚಾರಿಯಾ?

ಬ್ರಹ್ಮ ಎಂದರೆ ದೊಡ್ಡದು ಎನ್ನುವ ಅರ್ಥ. ದೊಡ್ಡದಕ್ಕೆ ವಿರುದ್ಧಪದ ಚಿಕ್ಕದು ಆಗುತ್ತದೆ. ಚಿಕ್ಕದು ಎನ್ನುವ ಪದವನ್ನು ಸ್ವಲ್ಪ ಎಂದೂ ಸಹ ಹೇಳಬಹುದು. ಆಚಾರಿ ಎಂದರೆ ಆಚರಿಸುವವನೆಂದು ಅರ್ಥ. ಬ್ರಹ್ಮಚಾರಿ ಎಂದರೆ ಬ್ರಹ್ಮ ಆಚರಣೆಯನ್ನು ಆಚರಿಸುವವನೆಂದು ಅರ್ಥ. ಅದನ್ನೇ ದೊಡ್ಡ ಆಚರಣೆಯನ್ನು ಆಚರಿಸುವವನೆಂದು ಸಹ ಹೇಳಬಹುದು. ಜಗತ್ತಿನಲ್ಲಿ ಎಲ್ಲದಕ್ಕಿಂತ ದೊಡ್ಡದು, ದೇವರೇ ಆಗುತ್ತಾನೆ. ಹಾಗೆ ಎಲ್ಲದಕ್ಕಿಂತ ದೊಡ್ಡ ಆಚರಣೆ, ದೇವರ ಧರ್ಮಾಚರಣೆ ಆಗುತ್ತದೆ. ದೇವರ ಧರ್ಮಗಳನ್ನು ಆಚರಿಸುವವನನ್ನು ಬ್ರಹ್ಮಚಾರಿ ಎಂದು ಕರೆಯುತ್ತಿದ್ದೇವೆ. ದೇವರಿಗೆ ವಿರುದ್ಧವಾದ ದಿಶೆಯಲ್ಲಿರುವ ಮಾಯೆಯೊಂದರ ಅಧರ್ಮ ಆಚರಣೆಯನ್ನು ಆಚರಿಸುವವನನ್ನು ಸ್ವಲ್ಪಚಾರಿ ಎನ್ನಬಹುದು. ಕೃಷ್ಣನು ಸ್ವತಃವಾಗಿ ದೇವರ ಧರ್ಮಗಳನ್ನು ಬೋಧಿಸುವುದಕ್ಕೆ ಭೂಮಿಮೇಲಕ್ಕೆ ಬಂದಿರುವ ಭಗವಂತನು. ಆತನ ದೈವ ಧರ್ಮಗಳನ್ನು ಆಚರಿಸುವ ಎಲ್ಲರಿಗೂ ಮಾರ್ಗದರ್ಶಕನಾಗಿ ಇದ್ದಾನೆ. ಆದ್ದರಿಂದ ಕೃಷ್ಣನು ನೂರಕ್ಕೆ ನೂರರಷ್ಟು ಬ್ರಹ್ಮಚಾರಿಯೇ ಎಂದು ಹೇಳಬಹುದು.

ಮದುವೆಯಾದವನನ್ನು ಸಂಸಾರಿ ಎಂದು, ಮದುವೆಯಾಗದವನನ್ನು ಬ್ರಹ್ಮಚಾರಿ ಎಂದು ಕರೆಯುತ್ತಿರುತ್ತಾರೆ. ಆ ಮಾತು ಎಷ್ಟರಮಟ್ಟಿಗೆ ಸತ್ಯವೆಂದು

ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಪ್ರಜೆಗಳು ಎನ್ನುವುದು ಸತ್ಯವಾ ಅಲ್ಲವಾ ಎಂದು ಆ ಪದದಲ್ಲಿನ ಅರ್ಥವನ್ನು ಆಧಾರ ಮಾಡಿಕೊಂಡು ನೀವೇ ನೋಡಬಹುದು. ಬ್ರಹ್ಮಚಾರಿ ಎನ್ನುವ ಪದಕ್ಕೆ ಅರ್ಥ ಬ್ರಹ್ಮವೊಂದರ ಧರ್ಮಗಳ ಆಚರಣೆಯನ್ನು ಆಚರಿಸುವವನು ಎಂದು ಹೇಳಿಕೊಂಡಿದ್ದೇವೆ ಅಲ್ಲವೆ! ಅಂತಹದರಲ್ಲಿ ಮದುವೆಯಾದವನು, ಮದುವೆಯಾಗದವನು ಯಾರಾದರು ದೇವರ ಧರ್ಮಗಳನ್ನು ಆಚರಿಸುವುದಕ್ಕೆ ಅವಕಾಶ ಇದೆ. ಧರ್ಮಗಳ ಪ್ರಕಾರ ಪ್ರವರ್ತಿಸಿದಾಗ ಮದುವೆಯಾದವನನ್ನು ಸಹ ಬ್ರಹ್ಮಚಾರಿ ಎಂದು ಹೇಳಬಹುದು. ಹಾಗೆ ಮದುವೆ ಆಗದವನನ್ನು ಸಹ ಧರ್ಮಾಚರಣೆಯನ್ನನುಸರಿಸಿ ಹೇಳಬಹುದು. ಅಷ್ಟೇ ಹೊರತು ಬ್ರಹ್ಮಚಾರಿಗು ಮದುವೆಗು ಯಾವುದೇ ಸಂಬಂಧ ಇಲ್ಲ. ಅದೇ ವಿಧವಾಗಿ ಸಂಸಾರಿ ಎನ್ನುವ ಪದವನ್ನು ತೆಗೆದುಕೊಂಡು ನೋಡಿದರೆ ಒಳ್ಳೆಯಸಾರ ಇರುವುದು ಎಂದು ಅರ್ಥವಾಗುತ್ತದೆ. ಪ್ರಪಂಚದಲ್ಲಿ ಒಳ್ಳೆಯ ಸಾರವಿರುವುದು ಒಂದೇವೊಂದು ದೈವಜ್ಞಾನ ಹೊರತು ಯಾವುದು ಇಲ್ಲ. ಹೆಂಡತಿಮಕ್ಕಳನ್ನು ಹೊಂದಿರುವುದು ಸಂಸಾರ ಎಂದು ಅಂದುಕೊಳ್ಳ ಬಾರದು. ಹೆಂಡತಿಮಕ್ಕಳೊಂದಿಗೆ ಸಂಸಾರ ಮಾಡುವವನನ್ನು ಸಂಸಾರಿ ಎಂದು, ಹೆಂಡತಿ ಮಕ್ಕಳನ್ನು ಬಿಟ್ಟವನನ್ನು ಸನ್ಯಾಸಿ ಎನ್ನುವುದು ತಪ್ಪಾಗುತ್ತದೆ. ಹೆಂಡತಿ ಮಕ್ಕಳೊಂದಿಗೆ ಇರುವವರಲ್ಲಿ ಕೆಲವರು ಉತ್ತಮ ಸನ್ಯಾಸಿಗಳು ಸಹ ಇದ್ದಾರೆ. ಹಾಗೆಯೇ ಹೆಂಡತಿಮಕ್ಕಳು ಇಲ್ಲದವರಲ್ಲಿ ಉತ್ತಮ ಸಂಸಾರಿಗಳು ಇದ್ದಾರೆ. ಭಗವದ್ಗೀತೆಯಲ್ಲಿ ಆತ್ಮಸಂಯಮ ಯೋಗದಲ್ಲಿ ಮೊದಲ ಶ್ಲೋಕದಲ್ಲಿ ಕರ್ಮ ಫಲವನ್ನು ಆಶ್ರಯಿಸದೆ ಕಾರ್ಯಗಳನ್ನು ಮಾಡುವವನನ್ನು ನಿಜವಾದ ಸನ್ಯಾಸಿ ಎನ್ನಬಹುದು ಎಂದು ಹೇಳಿದ್ದಾರೆ. ಈ ಶ್ಲೋಕದಲ್ಲಿ ಸನ್ಯಾಸಿ ಎಂದರೆ ಹೆಂಡತಿ ಮಕ್ಕಳನ್ನು ಬಿಟ್ಟವನೆಂದು ಹೇಳಲಿಲ್ಲ ಅಲ್ಲವೆ! ಈ ವಿಧವಾಗಿ ನಿಜವಾದ ಅರ್ಥದಿಂದ ನೋಡಿದರೆ ನಿಜವಾದ ಭಾವನೆ ತಿಳಿಯಬಲ್ಲದು.

ಸರಿಯಾದ ಭಾವನೆಯಿಂದ ನೋಡಿದರೆ ಕೃಷ್ಣನು ದೊಡ್ಡ ಬ್ರಹ್ಮಚಾರಿ. ಆತನು ಮದುವೆಯಾಗದ ಮುನ್ನ ಬ್ರಹ್ಮಚಾರಿಯೇ! ಹಾಗೆಯೇ ಮದುವೆಯಾದ

ನಂತರವೂ ಸಹ ಬ್ರಹ್ಮಚಾರಿಯೇ!! ಕೃಷ್ಣನಿಗೆ ಮದುವೆಯಾಗದ ಮುಂಚೆಯೂ ಸಹ ಕೃಷ್ಣನು ಸಂಸಾರಿಯೇ, ಹಾಗೆಯೇ ಮದುವೆಯಾದ ನಂತರ ಸಹ ಸಂಸಾರಿಯೇ. ಕೃಷ್ಣನಿಗೆ ಮದುವೆಯಾಗದ ಮುಂಚೆ ಸಹ ಆತನು ಸನ್ಯಾಸಿಯೇ. ಮದುವೆಯಾದ ನಂತರ ಸಹ ಸನ್ಯಾಸಿಯೇ. ಕೃಷ್ಣನು ಬ್ರಹ್ಮಚಾರಿಯೇ ಅಲ್ಲದೆ ಆತನಿಗೆ ಅಸ್ಕಲಿತ ಬ್ರಹ್ಮಚಾರಿ ಎಂದು ಸಹ ಬಿರುದು ಇದೆ. ಬ್ರಹ್ಮಚಾರಿ ಎಂದರೆ ವಿವರ ತಿಳಿದಿದೆ. ಸ್ಕಲಿತ, ಅಸ್ಕಲಿತ ಪದಗಳಿಗೆ ಅರ್ಥ ಕೆಲವರಿಗೆ ತಿಳಿಯದಿರ ಬಹುದು. ಈಗ ಅದರ ವಿವರ ಹೇಳಿಕೊಳ್ಳೋಣ. ಸ್ಕಲಿತ ಎನ್ನುವ ಪದವನ್ನು ಸಂಸ್ಕೃತ ಭಾಷೆಯಲ್ಲಿ ಸ್ಖಲಿತ ಎನ್ನುತ್ತೇವೆ. ಕನ್ನಡ ಭಾಷೆಯಲ್ಲಿ ಸ್ಕಲಿತ ಎನ್ನುತ್ತೇವೆ. ಇದರ ಅರ್ಥ ಜಾರಿಹೋಗುವುದು, ಬಿದ್ದುಹೋಗುವುದು. ಮನುಷ್ಯ ಒಂದೊಂದು ಸಲ ತಾನಿರುವ ಉನ್ನತಸ್ಥಾಯಿಯಿಂದ ಇಳಿಜಾರಿ ಅಥವಾ ಬಿದ್ದುಹೋಗಿ ಕೆಳಸ್ಥಾಯಿಗೆ ಬರುತ್ತಿರುತ್ತಾನೆ. ಅಷ್ಟೇ ಅಲ್ಲದೆ ತನ್ನಿಂದ ಏನಾದರೂ ಜಾರಿ ಹೋದಾಗ ಸ್ಕಲಿತ ಎನ್ನುವ ಪದವನ್ನು ಬಳಸುತ್ತಿದ್ದೇವೆ. ಗಂಡಸರಲ್ಲಿ ವೀರ್ಯವು ಜಾರಿಹೋಗುವುದನ್ನು ಸ್ಕಲಿತ ಎನ್ನುತ್ತೇವೆ. ದೀರ್ಘನಾಡಿ, ಮಧ್ಯನಾಡಿ, ಸ್ವಲ್ಪನಾಡಿ ಅಥವಾ ಧೀರ್ಘಸ್ಕಲನ, ಮಧ್ಯಸ್ಕಲನ, ಶೀಘ್ರಸ್ಕಲನ ಎನ್ನುವ ಮೂರು ವಿಧಗಳ ವ್ಯಕ್ತಿಗಳಿರುತ್ತಾರೆಂದು ವೈದ್ಯರು ಹೇಳಿದಾಗ ಕೇಳಿದ್ದೇವೆ. ಸ್ಕಲನವು ಅಥವಾ ಸ್ಕಲಿತವು ಎನ್ನುವವು ಭೌತಿಕವಾಗಿ ಮತ್ತು ಮಾನಸಿಕವಾಗಿ ಎರಡು ವಿಧಗಳು ಇರುತ್ತವೆ. ಮನುಷ್ಯನಲ್ಲಿ ವೀರ್ಯ ಸ್ಕಲನವನ್ನು ಭೌತಿಕ ಸ್ಕಲನ ಎನ್ನುತ್ತೇವೆ. ಹಾಗೆಯೇ ಯೋಗ ಭಾವನೆಯಿದ್ದು ತಪ್ಪಿಹೋಗುವುದನ್ನು ಮಾನಸಿಕ ಸ್ಕಲನ ಎನ್ನುತ್ತೇವೆ. ಮನುಷ್ಯ ಮನೋಬಲದಿಂದ ಕರ್ಮಯೋಗವನ್ನು ಮಾಡುತ್ತಿರುತ್ತಾನೆ. ಮನಸ್ಸನ್ನು ಇಲ್ಲದಂತೆ ಮಾಡುವುದು ಬ್ರಹ್ಮಯೋಗವಾಗುತ್ತದೆ. **ಕರ್ಮಯೋಗಿ ಮನೋಬಲವನ್ನು ಕಳೆದುಕೊಂಡರೆ ಯೋಗಭ್ರಷ್ಟನು ಆಗುತ್ತಾನೆ. ಹಾಗೆಯೇ ಬ್ರಹ್ಮಯೋಗಿ ಮನೋಬಲವನ್ನು ಹೊಂದಿದರೆ ಯೋಗಭ್ರಷ್ಟನಾಗುತ್ತಾನೆ.** ಮನುಷ್ಯ ಮಾಡುವ ಕರ್ಮಯೋಗವಾಗಲಿ, ಬ್ರಹ್ಮಯೋಗವಾಗಲಿ ಎರಡೂ ದೇವರ ಧರ್ಮಗಳನ್ನು ಆಚರಿಸುವ ಪ್ರಕ್ರಿಯೆಗಳೆ. ಆದ್ದರಿಂದ ಆ ಎರಡು ಯೋಗಗಳನ್ನಾ

ಗಲಿ, ಎರಡರಲ್ಲಿ ಒಂದು ಯೋಗವನ್ನಾಗಲಿ ಆಚರಿಸುವವನನ್ನು ಬ್ರಹ್ಮಚಾರಿ ಎಂದು ಕರೆಯಬಹುದು. ಕೃಷ್ಣನು ಕರ್ಮಯೋಗವನ್ನು ಆಚರಿಸುವುದರಿಂದ ಆತನನ್ನು ಬ್ರಹ್ಮಚಾರಿ ಎಂದಿದ್ದೇವೆ. ಒಬ್ಬ ಮನುಷ್ಯ ಯೋಗವನ್ನು ಆಚರಿಸುತ್ತಾ ಇದ್ದು ಸ್ವಲ್ಪ ಕಾಲಕ್ಕೆ ಮಾಯಾ ಪ್ರಭಾವದಿಂದ ಯೋಗವನ್ನು ಆಚರಿಸುವುದರಲ್ಲಿ ಕೈಲಾಗದಿದ್ದರೆ ಅವನನ್ನು ಯೋಗಭ್ರಷ್ಟನು ಎನ್ನುತ್ತೇವೆ. ಅಂತಹವನನ್ನು ಯೋಗದಿಂದ ಜಾರಿ ಹೋದವನೆಂದು ಹೇಳಬಹುದು ಮತ್ತು ಆತನನ್ನು ಸ್ಖಲಿತ ಬ್ರಹ್ಮಚಾರಿ ಎಂದು ಸಹ ಹೇಳಬಹುದು. ಕೃಷ್ಣನು ತನ್ನ ಜೀವನದಲ್ಲಿ ಕರ್ಮಯೋಗದಿಂದ ಎಂದಿಗೂ ಜಾರಿಹೋಗಲಿಲ್ಲ. ಯೋಗದಿಂದ ಜಾರಿಹೋಗದ ವಿಧಾನವನ್ನು ಪ್ರಜೆಗಳಿಗೆ ತಿಳಿಸಿದ ವ್ಯಕ್ತಿ ಕೃಷ್ಣನು. ತಪಸ್ಸುಗಳು, ಯಜ್ಞಗಳು, ವೇದಗಳು ಹೊರತು ಯೋಗವೆಂದರೆ ಏನೊ ತಿಳಿಯದ ಕಾಲದಲ್ಲಿ ಭೂಮಿ ಮೇಲಕ್ಕೆ ಬಂದು ಯೋಗವನ್ನು ಕುರಿತು ತಿಳಿಸಿದ ಏಕೈಕ ವ್ಯಕ್ತಿ ಕೃಷ್ಣನು. ಯೋಗವೊಂದರ ರಹಸ್ಯಗಳನ್ನು ತಿಳಿಹೇಳಿದ ಕೃಷ್ಣನು ತಾನು ಸ್ವತಃವಾಗಿ ಕರ್ಮಯೋಗವನ್ನು ಆಚರಿಸಿ ಮಾನವರೆಲ್ಲರಿಗೂ ಮಾರ್ಗ ದರ್ಶಕನಾಗಿದ್ದಾನೆ. ಕರ್ಮಯೋಗದಲ್ಲಿ ಮಾರ್ಗದರ್ಶಕನಾದ ಕೃಷ್ಣನು ಎಂದಿಗೂ ತನ್ನ ಯೋಗದಿಂದ ಜಾರಿಹೋಗಲಿಲ್ಲವೆಂದು. ಕೃಷ್ಣನು ಯೋಗಬ್ರಷ್ಟನಾಗಿದ್ದಾನೆಂದು ಎಂದರೆ ಶರೀರ ವ್ಯಾಯಾಮವನ್ನು ಕಲಿಸುವವನು (ಫಿಜಿಕಲ್ ಟ್ರಯಿನಿಂಗ್ ಮಾಸ್ಟರ್) ಬಗ್ಗಲಿಲ್ಲ ಎಂದರೆ ಎಷ್ಟು ಅಸತ್ಯವಾಗುತ್ತದೊ, ಅಷ್ಟೇ ಅಸತ್ಯವಾಗುತ್ತದೆ. ಕೃಷ್ಣನು ಯೋಗವೊಂದರ ಹುಟ್ಟುಪೂರ್ವೋತ್ತರಗಳನ್ನು ತಿಳಿದವನು. ಆತನು ಕರ್ಮ ಯೋಗದಿಂದ ಎಂದಿಗೂ ತಪ್ಪಿಹೋಗುವುದಾಗಲಿ ಅಥವಾ ಇಳಿಜಾರಿಹೋಗುವುದಾಗಲಿ ನಡೆಯಲಿಲ್ಲ. ಆದ್ದರಿಂದ ಆತನನ್ನು ಅಸ್ಖಲಿತ ಬ್ರಹ್ಮಚಾರಿ ಎಂದು ಕರೆಯುತ್ತಿದ್ದೇವೆ. ಕೃಷ್ಣನು ಬ್ರಹ್ಮಚಾರಿಯೇ ಅಲ್ಲದೆ ಅಸ್ಖಲಿತ ಬ್ರಹ್ಮಚಾರಿ ಎಂದು ಆತನನ್ನೊಬ್ಬನನ್ನೇ ಹೇಳಬಹುದು. ಭೂಮಿಮೇಲೆ ಆತನಿಗೊಬ್ಬನಿಗೆ ಆ ಬಿರುದು ದಕ್ಕುತ್ತದೆ.



# ಕೃಷ್ಣನು ಯುದ್ಧದಲ್ಲಿ ಓಡಿಹೋಗಿದ್ದಾನಾ?

ಹೌದು ಕೃಷ್ಣನು ಯುದ್ಧದಲ್ಲಿ ಜರಾಸಂಧನ ಕೈಯಲ್ಲಿ ಸೋತುಹೋಗಿ ಓಡಿಹೋಗಿದ್ದಾನೆನ್ನುವುದರಲ್ಲಿ ಎಂತಹ ಸಂಶಯ ಇಲ್ಲ. ಜರಾಸಂಧನು ಕಂಸನಿಗೆ ಹೆಣ್ಣು ಮಕ್ಕಳನ್ನು ಕೊಟ್ಟ ಮಾವ ಆಗುತ್ತಾನೆ. ಆಸ್ತಿ, ಪಾಸ್ತಿ ಎಂಬ ಹೆಸರಿರುವವರು ಜರಾಸಂಧನ ಇಬ್ಬರು ಮಕ್ಕಳು, ಕಂಸನ ಪತ್ನಿಯರಾಗುತ್ತಾರೆ. ಕೃಷ್ಣನು ಕಂಸನನ್ನು ಸಾಯಿಸುವುದರಿಂದ, ತನ್ನ ಇಬ್ಬರು ಮಕ್ಕಳು ವಿಧವೆಗಳು ಆಗುವುದರಿಂದ, ಜರಾಸಂಧನು ಕೃಷ್ಣನ ಮೇಲೆ ಶತೃತ್ವ ವಹಿಸಿ ಯುದ್ಧವನ್ನು ಪ್ರಕಟಿಸಿ ಮಧುರೆಮೇಲೆ ದಂಡೆತ್ತಿ ಬಂದಿದ್ದಾನೆ. ಕಂಸನನ್ನು ಸಾಯಿಸಿದ ತಕ್ಷಣ ಜರಾಸಂಧನೊಂದಿಗೆ ಕೃಷ್ಣನು ಯುದ್ಧ ಮಾಡಬೇಕಾಗಿ ಬಂದಿದೆ. ಆಗ ಕೃಷ್ಣನ ವಯಸ್ಸು ಕೇವಲ 12 ವರ್ಷಗಳು ಮಾತ್ರವೆ. ಬಲರಾಮನು ಕೃಷ್ಣನಿಗಿಂತ 9 ವರ್ಷಗಳು ದೊಡ್ಡವ ನಾಗಿರುವುದರಿಂದ ಆತನ ವಯಸ್ಸು 21 ವರ್ಷಗಳು. ಆ ಯುದ್ಧದಲ್ಲಿ ಕೃಷ್ಣ ಬಲರಾಮರ ಕೈಯಲ್ಲಿ ಜರಾಸಂಧನು ಸೋತು ಓಡಿಹೋಗಿದ್ದಾನೆ. ಹಾಗೆ ಕೃಷ್ಣ ಬಲರಾಮರ ಕೈಯಲ್ಲಿ ಸೋತುಹೋಗುವುದು ಜರಾಸಂಧನಿಗೆ ಬಹಳ ಅವಮಾನವಾಗಿತ್ತು. ಆ ಅವಮಾನವನ್ನು ತಾಳಲಾರದೆ ನಂತರ ವರ್ಷಕ್ಕೆ ಪುನಃ ಮಧುರೆ ಮೇಲೆ ಯುದ್ಧವನ್ನು ಪ್ರಕಟಿಸಿ ಆಗಲೂ ಸಹ ಸೋತು ಹೋಗಿದ್ದಾನೆ. ಈ ವಿಧವಾಗಿ ಪ್ರತಿ ವರ್ಷ ಕೃಷ್ಣನ ಮೇಲೆ ಯುದ್ಧಕ್ಕೆ ಬರುವುದು, ಸೋತುಹೋಗುವುದು ನಡೆಯುತ್ತಿತ್ತು. ಹಾಗೆ 18 ಸಲ ಜರಾಸಂಧನು ಸೋತುಹೋಗಿದ್ದಾನೆ. ಕೃಷ್ಣನಿಗೆ 30 ಸಂ॥ ವಯಸ್ಸಿನಲ್ಲಿ 19ನೇ ಸಲ ಕಾಲಯವನ ನೊಂದಿಗೆ ಸೇರಿ ಮಧುರೆ ಮೇಲೆ ದಂಡೆತ್ತಿ ಬಂದಿದ್ದಾನೆ. ಆಗ ಕೃಷ್ಣನು ಸೋಲನ್ನು ಹೊಂದಿದ್ದಾನೆ. ಜರಾಸಂಧನು ಯುದ್ಧದಲ್ಲಿ ಗೆದ್ದು ಮಧುರೆಯಲ್ಲಿರುವ ಕೃಷ್ಣ ಬಲರಾಮರನ್ನು ಸಂಹರಿಸಬೇಕೆಂದು ಅಂದುಕೊಂಡಿದ್ದಾನೆ. ಆದರೆ ಜರಾಸಂಧನು ಮಧುರೆಯನ್ನು ಸೇರುವುದರೊಳಗೆ ಕೃಷ್ಣ ಬಲರಾಮರು ಇಬ್ಬರೂ ರಹಸ್ಯ ಮಾರ್ಗದ ಮೂಲಕ ದ್ವಾರಕಗೆ ಓಡಿಹೋಗಿದ್ದಾರೆ.

ಕೃಷ್ಣನು ಸಾಧಾರಣ ಮನುಷ್ಯನಲ್ಲ ಭಗವಂತನೆಂದು ಹೇಳಿದ್ದೀರಲ್ಲವೆ! ಅಂತಹದರಲ್ಲಿ ಭಗವಂತನು ಸಾಧಾರಣ ಮನುಷ್ಯನಿಗೆ ಭಯಪಟ್ಟು ಓಡಿಹೋಗುವುದೇನು ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ! ಕೃಷ್ಣನು ದೈವಜ್ಞಾನವನ್ನು ಹೇಳುವುದಕ್ಕಾಗಿ ಭಗವಂತನಾಗಿ ಬಂದಿದ್ದಾನೆ. ಆದರೆ ಭೂಮಿಮೇಲೆ ಯುದ್ಧಗಳು ಮಾಡಿ ಜಯಿಸುವುದಕ್ಕೆ ಬರಲಿಲ್ಲ! ಭಗವದ್ಗೀತೆಯಲ್ಲಿ ಸಹ ಧರ್ಮಗಳನ್ನು ಪುನಃ ಪುನರುದ್ಧರಿಸುವುದಕ್ಕೆ ಬರುತ್ತೇನೆಂದು ಹೇಳಿದ್ದಾನೆ ಹೊರತು ಯಾವ ಕ್ಷೇತ್ರದಲ್ಲಾದರೂ ತಾನು ಉನ್ನತವಾಗಿ ಕಾಣಿಸುತ್ತೇನೆಂದು ಹೇಳಲಿಲ್ಲ! ಭಗವಂತನು ಭೂಮಿಮೇಲಕ್ಕೆ ಬಂದಾಗ ತಾನು ಭಗವಂತನೆಂದು ತಿಳಿಯುವಂತೆ ಪ್ರವರ್ತಿಸುವುದಿಲ್ಲ. ತನ್ನನ್ನು ಯಾರೂ ಗುರುತಿಸದಂತೆ ಸಾಧಾರಣ ಮನುಷ್ಯನಂತೆ ಕಾಣಿಸುತ್ತಾನೇ ಹೊರತು ಪ್ರಪಂಚ ವಿಷಯಗಳಲ್ಲಿ ಪ್ರತ್ಯೇಕತೆಯನ್ನು ಹೊಂದಿರುವುದಿಲ್ಲ. ಭಗವಂತನ ಪ್ರತ್ಯೇಕತೆ ಎಲ್ಲಾ ಒಂದು ದೈವಜ್ಞಾನದಲ್ಲಿಯೇ ಇರುತ್ತದೆ. ಮುಖ್ಯವಾಗಿ ಹೇಳಿಕೊಂಡರೆ ಭಗವಂತನ ಪ್ರತ್ಯೇಕತೆ ಸ್ಥೂಲವಾಗಿ ಎಲ್ಲಿಯೂ ಕಾಣಿಸುವುದಿಲ್ಲ. ಆತನ ಪ್ರತ್ಯೇಕತೆ ಎಲ್ಲಾ ಸೂಕ್ಷ್ಮವಾಗಿರುತ್ತದೆ. ಮನುಷ್ಯರಿಗೆ ಸೂಕ್ಷ್ಮವೊಂದರ ವಿಧಾನ ಏನು ತಿಳಿದಿಲ್ಲ. ಮನುಷ್ಯರು ಕೇವಲ ಸ್ಥೂಲವಾಗಿರುವುದನ್ನೇ ನೋಡುತ್ತಾರೆ. ಸೂಕ್ಷ್ಮವಾಗಿರುವ ಭಗವಂತನ ಪ್ರತಿಮೆ ಏನೋ ತಿಳಿಯದಿರುವುದರಿಂದ ಭಗವಂತನನ್ನು ಯಾರೂ ಗುರುತಿಸಲಾರರು. ದೈವಜ್ಞಾನದಲ್ಲಿ ಯಾರೂ ಹೇಳಲಾರದ, ಯಾರಿಗೂ ತಿಳಿಯದ ಧರ್ಮಗಳನ್ನು ಕೃಷ್ಣನು ಹೇಳಿದರೂ, ಆ ದಿನದ ಪ್ರಜೆಗಳಾಗಲಿ, ಈ ದಿನದ ಪ್ರಜೆಗಳಾಗಲಿ ಕೃಷ್ಣನನ್ನು ಭಗವಂತನೆಂದು ನಂಬಲಿಲ್ಲ. ಜರಾಸಂಧನು 19ನೇ ಸಲ ಯುದ್ಧದಲ್ಲಿ ಗೆದ್ದ ಸಮಯಕ್ಕೆ ಕೃಷ್ಣನು ದೈವಜ್ಞಾನವನ್ನು ಎಲ್ಲಿಯೂ ಹೇಳಲಿಲ್ಲ. ದೈವಜ್ಞಾನವನ್ನು ಸಹ ಹೇಳದಂತೆ ಸಾಧಾರಣ ಮನುಷ್ಯನಂತೆ ಪ್ರವರ್ತಿಸಿದ್ದಾನೆ. ಅಲ್ಲಿಯವರೆಗೂ ಸಾಧಾರಣ ಮನುಷ್ಯನಾಗಿಯೇ ಇದ್ದಾನೆ. ಕೃಷ್ಣನು 18 ಸಲ ಗೆದ್ದು, ಒಂದು ಸಲ ಸೋತುಹೋಗಿರುವುದರಿಂದ ಆತನು ಭಗವಂತನೇನಾ ಎನ್ನುವ ಪ್ರಶ್ನೆ ಬರುವುದಕ್ಕೆ ಆಗಲೂ ಆತನು ಭಗವಂತನೆಂದು ಯಾರಿಗೂ ತಿಳಿದಿಲ್ಲ ಅಲ್ಲವೆ! ಆದ್ದರಿಂದ ಭಗವಂತನಾದರೆ ಸೋತುಹೋಗುತ್ತಾನಾ? ಎಂದು ಕೇಳುವುದಕ್ಕೆ

ಅವಕಾಶವೇ ಇಲ್ಲ. ಒಂದುವೇಳೆ ಕೇಳಿದರೂ ಭಗವಂತನು ಪ್ರಪಂಚದಲ್ಲಿ ಸೋತುಹೋಗಬಾರದೆನ್ನುವ ನಿರ್ಣಯವೇನು ಇಲ್ಲ! ಭಗವಂತನಾದ ಈತನು ಸಹ ನಿರ್ಣಯಿಸಿಕೊಂಡ ಕರ್ಮ ಪ್ರಕಾರವೇ ನಡೆಯಬೇಕೆಂದು ಶಾಸನ. ಆದುದರಿಂದ ಭಗವಂತನು ಸೋತುಹೋಗುವುದರಲ್ಲಿ ಆಶ್ಚರ್ಯವಿಲ್ಲ.

ಕೃಷ್ಣನು ಚಿಕ್ಕ ವಯಸ್ಸಿನಲ್ಲಿಯೇ ಜ್ಞಾನವನ್ನು ಇತರರಿಗೆ ಹೇಳಿದ್ದಾನೆಂದು ಭಾಗವತ ಪುರಾಣಗಳಲ್ಲಿ ಬರೆದಿದ್ದಾರೆ. ಭಾಗವತ ಶಾಸ್ತ್ರವಲ್ಲ, ಪುರಾಣ. ಪುರಾಣದಲ್ಲಿನ ಎಲ್ಲ ಮಾತುಗಳನ್ನು ನಂಬಬಾರದು. ಕೃಷ್ಣನು ಭಾರತಯುದ್ಧದಲ್ಲಿ ಕುರುಕ್ಷೇತ್ರದಲ್ಲಿ ದೈವಧರ್ಮಗಳಾದ ಗೀತೆಯನ್ನು ಬೋಧಿಸಿದ್ದಾನೆ. ಅಲ್ಲಿಯವರೆಗೂ ತನಗೆ ಜ್ಞಾನ ತಿಳಿದವನಂತೆ, ಅಜ್ಞಾನಿಯಂತೆ ಪ್ರವರ್ತಿಸಿದ್ದಾನೆ. 90 ವರ್ಷಗಳು ಜೀವನವನ್ನು ಕಳೆದನಂತರ ಆಗ ಧರ್ಮಗಳನ್ನು ತಿಳಿಸಿದ್ದಾನೆ. ಕ್ಷೀಣಿಸಿ ಹೋಗುತ್ತಿರುವ ಧರ್ಮಗಳನ್ನು ಉದ್ಧರಿಸುವುದಕ್ಕೆ ಬಂದಿದ್ದೇನೆಂದು ತಿಳಿಸಿದ್ದಾನೆ. ಆತನು ಚಿಕ್ಕವನಿಂದ ದೈವಧರ್ಮಗಳ ಪ್ರಕಾರವೇ ನಡೆದುಕೊಳ್ಳುತ್ತಿದ್ದಾನೆಂದು, ಕರ್ಮಯೋಗವನ್ನು ಆಶ್ರಯಿಸಿದ್ದೇನೆಂದು ತಿಳಿಸಿದ್ದಾನೆ. ಅಲ್ಲಿಯವರೆಗೂ ಕೃಷ್ಣನು ಜ್ಞಾನಿ ಎಂಬ ವಿಷಯವು ಸಹ ಯಾರಿಗೂ ತಿಳಿದಿಲ್ಲ. ಆತನು ಇಂತಹವನೆಂದು ತಿಳಿಯದಂತಿರುವುದಕ್ಕೆ ಜರಾಸಂಧನಿಗೆ ಭಯಪಟ್ಟಂತೆ, ಪ್ರಾಣ ಭಯದಿಂದ ಓಡಿಹೋದಂತೆ ನಮಗೆ ಕಾಣಿಸಿದ್ದಾನೆ.



## ಕೃಷ್ಣನು ದೈವಧರ್ಮಗಳನ್ನು ಅರ್ಜುನನಿಗೆ ಏಕೆ ಹೇಳಿದ್ದಾನೆ?

ಅಧರ್ಮಗಳಾಗಿ ಬದಲಾಗಿರುವ ಧರ್ಮಗಳನ್ನು ಪುನಃ ಧರ್ಮಗಳಾಗಿ ತಿಳಿಸುವುದಕ್ಕೆ ಕೃಷ್ಣನು ಭೂಮಿಮೇಲೆ ಉದ್ಭವಿಸಿದ್ದಾನೆ. ಕೃಷ್ಣನು ಹೇಳಬೇಕಾದ ಧರ್ಮಗಳು ಅಧರ್ಮಗಳಾಗಿ ಬದಲಾಗಿ ಮುಖ್ಯವಾದವರ ತಲೆಯಲ್ಲಿ ನೆಲೆಯೂರಿವೆ. ಆ ಕಾಲದಲ್ಲಿ ಯಾವ ವಿಷಯವಾದರು ಗ್ರಂಥರೂಪದಲ್ಲಿ ಬರೆಯುವಂತಹ ವ್ಯಕ್ತಿ ವ್ಯಾಸನು. ಅಂತಹ ವ್ಯಾಸನು ಏನು ಹೇಳಿದರೂ,

ಏನು ಮಾಡಿದರೂ ನಂಬುವ ಪ್ರಜೆಗಳು ಆ ದಿನ ಇದ್ದರು. ಆ ದಿನ ನಾಲ್ಕುವೇದಗಳನ್ನು, ಹದಿನೆಂಟು ಪುರಾಣಗಳನ್ನು ವ್ಯಾಸನು ಬರೆದಿಟ್ಟಿದ್ದಾನೆ. ವಿದ್ಯಾಸಂಪನ್ನನಾದ ವ್ಯಾಸನು ಆ ವಿಧವಾಗಿರುವಾಗ, ಅಧರ್ಮಗಳಾದ ಯಜ್ಞಗಳು, ತಪಸ್ಸುಗಳು, ವೇದಪಠನಗಳು ಪ್ರಜೆಗಳಲ್ಲಿ ಬಿತ್ತರಗೊಂಡು, ಅವುಗಳೆ ಧರ್ಮಗಳ ರೂಪದಲ್ಲಿ ಅವರಲ್ಲಿ ನೆಲೆ ನಿಂತು ಹೋಗಿವೆ. ಈವಿಧವಾಗಿ ಅಧರ್ಮಗಳು, ಧರ್ಮಗಳ ರೂಪದಲ್ಲಿ ಪ್ರಜೆಗಳಲ್ಲಿ ಬೆಳೆದುಹೋಗಿವೆ. ವ್ಯಾಸನು ನಾಲ್ಕು ವೇದಗಳನ್ನು ಬರೆದಿರುವುದರಿಂದ ಆತನ ಹೆಸರಿನ ಮುಂದೆ "ವೇದ" ಎನ್ನುವ ಪದ ಆಗಿನಿಂದ ಇದೆ. ವೇದಗಳನ್ನು ಬರೆಯುವುದಕ್ಕೂ ಮೊದಲೆ ವ್ಯಾಸನು ಎನ್ನುವ ಹೆಸರಿರುವಾಗ, ವೇದ ರಚನೆಯಿಂದ ಆತನ ಹೆಸರು ವೇದವ್ಯಾಸನಾಗಿ ಬದಲಾಗಿಹೋಗಿದೆ. ವ್ಯಾಸನಿಗಿಂತ ಮೊದಲು ವೇದಗಳಿಲ್ಲವಾ? ಎಂದು ಪ್ರಶ್ನಿಸಿದರೆ ಇಲ್ಲವೆಂದೇ ಹೇಳಬೇಕು. ನಾನು ಸತ್ಯವನ್ನೇ ಹೇಳಿದರೂ ನನ್ನ ಮಾತು ತಿರಸ್ಕರಿಸಲ್ಪಡುತ್ತದೆ. ಏಕೆಂದರೆ ಶ್ರೀಮಹಾವಿಷ್ಣು ವೇದಗಳನ್ನು ರಕ್ಷಿಸುವುದಕ್ಕೆ ಹಿರಣ್ಯಾಕ್ಷನನ್ನು ವರಾಹಾವತಾರ (ಹಂದಿ ಅವತಾ) ದಿಂದ ಸಾಯಿಸಿದ್ದಾನೆಂದು ಭಾಗವತ ಪುರಾಣದಲ್ಲೇ ಇರುವುದು. ಅಲ್ಲಿ ಪುರಾಣಗಳಲ್ಲಿ ಬರೆದಿರುವುದನ್ನನುಸರಿಸಿ ಸೃಷ್ಟಿ ಆದಿಯಿಂದ ವೇದಗಳಿವೆಯೆಂದು ಹೇಳುವುದಕ್ಕೆ ವ್ಯಾಸನ ಮಾತೇ ಆಧಾರವಾಗಿದೆ. ಆ ದಿನ ವ್ಯಾಸನು ಸಾಕ್ಷಾತ್ತು ವಿಷ್ಣುವೊಂದರ ಅವತಾರವೇಯೆಂದು ಪ್ರಜೆಗಳು ಹೇಳಿಕೊಳ್ಳುತ್ತಿದ್ದರು. "ವ್ಯಾಸೋ ನಾರಾಯಣೋ ಹರಿ" ಎನ್ನುವ ಮಾತನ್ನು ವ್ಯಾಸನನ್ನು ಕುರಿತು ಹೇಳುತ್ತಿದ್ದರು. ಅಷ್ಟೇ ಅಲ್ಲದೆ "ವ್ಯಾಸ ಭಗವಾನ್" ಎಂದು ಸಹ ಕರೆಯುತ್ತಿದ್ದರು. ಇದರಿಂದ ವ್ಯಾಸನು ಪ್ರಜೆಗಳಲ್ಲಿ ಆದಿನ ಎಷ್ಟೋ ಪುಣ್ಯ ಭಾವನೆಯಿಂದ ಇದ್ದಾನೆಂಬುದು ಅರ್ಥವಾಗುತ್ತಿದೆ. ಅಂತಹ ಸ್ಥಾನದಲ್ಲಿರುವ ವ್ಯಾಸನು ಯಾವುದು ಹೇಳಿದರೂ ಅದನ್ನು ಎಲ್ಲರೂ ಒಪ್ಪಿಕೊಳ್ಳುತ್ತಿದ್ದರು. ಅಂತಹ ಸಮಯದಲ್ಲಿ ಕೃಷ್ಣನು ಹೇಳಬೇಕಾದ ಧರ್ಮಗಳೆಲ್ಲಾ ವ್ಯಾಸನಿಗೆ ವಿರುದ್ಧವಾದವೆ. ಎಲ್ಲಿ ಹೇಳಿದರೂ, ಯಾರಿಗೆ ಹೇಳಿದರೂ ವಿರುದ್ಧವಾಗಿಯೇ ಬರುತ್ತದೆಂದು ಕೃಷ್ಣನಿಗೆ ಚೆನ್ನಾಗಿ ತಿಳಿದಿದೆ. ಮೇಲಾಗಿ ಕೃಷ್ಣನು ಎಲ್ಲಿಯೂ ಸಹ ಜ್ಞಾನಿಯಾಗಿ ಕಾಣಿಸಲಿಲ್ಲ.

ಸಾಧಾರಣ ಮನುಷ್ಯನ ಸ್ಥಾನದಲ್ಲಿ ಭಗವಂತನಾದ ಕೃಷ್ಣನಿರುವಾಗ, ಭಗವಂತನ ಸ್ಥಾನದಲ್ಲಿ ಸಾಧಾರಣ ಮನುಷ್ಯನಾದ ವ್ಯಾಸನಿದ್ದನು. ಆದಿನ ಧರ್ಮ ಅಧರ್ಮವಾಗಿ, ಅಧರ್ಮ ಧರ್ಮವಾಗಿ ಹೇಗಿದ್ದಿತೋ ಹಾಗೆ ಭಗವಂತನು ಮನುಷ್ಯನಾಗಿ, ಮನುಷ್ಯ ಭಗವಂತನಾಗಿ ಇದ್ದಿರುವುದು ತಿಳಿಯುತ್ತಿದೆ. ಆದಿನ ಧರ್ಮಗಳಾಗಿರುವ ಯಜ್ಞ, ದಾನ, ವೇದ, ತಪಸ್ಸುಗಳನ್ನು ಅಧರ್ಮ ಗಳೆಂದರೂ, ಭಗವಂತನಾಗಿ, ವಿಷ್ಣುವಾಗಿ, ನಾರಾಯಣನಾಗಿ ಹೆಸರುವಾಸಿಯಾದ ವ್ಯಾಸನ ಮಾತುಗಳಿಗೆ ವಿರುದ್ಧವಾದ ಧರ್ಮಗಳನ್ನು ಬೋಧಿಸಿದರೂ, ಯಾರೂ ಕೇಳದಿರುವುದಲ್ಲದೆ ಹೇಳುವವನಿಗೆ ಆತಂಕ ಏರ್ಪಡುತ್ತದೆ. ಆದುದರಿಂದ ಕೇಳುವವನು ತನ್ನ ಅನುಚರನಾಗಿರಬೇಕು. ಅನುಚರನಾದರೂ ಹೇಳುವ ಮಾತುಗಳನ್ನು ತಪ್ಪದೆ ಕೇಳುವ ಪರಿಸ್ಥಿತಿ ಏರ್ಪಟ್ಟರೂ, ಕೇಳುವವನು ತನ್ನ ಅನುಚರನಾದರೂ, ಕೇಳುವ ಸಮಯದಲ್ಲಿ ಪಕ್ಕದವರು ಯಾರೂ ಕೇಳದ ಸಂದರ್ಭ ಇರಬೇಕು. ಇವೆಲ್ಲವೂ ಸರಿಹೋಗುವುದಕ್ಕೆ ಕೃಷ್ಣನಿಗೆ 90 ವರ್ಷಗಳ ಕಾಲ ಹಿಡಿಸಿದೆ. ಕೊನೆಗೆ ಕುರುಕ್ಷೇತ್ರದಲ್ಲಿ, ಕೃಷ್ಣನು ಹೇಳುವಾಗ ಯಾರೂ ಗಮನಿಸದಂತೆ, ಯಾರ ಗಮನದಲ್ಲಿ ಅವರಿರುವ ಯುದ್ಧಸಮಯದಲ್ಲಿ, ಅರ್ಜುನನ ಮನಸ್ಸು ಪ್ರಪಂಚ ವಿಷಯಗಳಲ್ಲಿ ಬೇಸರಗೊಂಡಿದ್ದು, ಜ್ಞಾನಬೋಧನೆ ಬೇಕೆಂದುಕೊಂಡ ಸಂದರ್ಭದಲ್ಲಿ, ಅದೂ ಕೇಳುವವನು ವಿಧೇಯನಾದ ಅರ್ಜುನನು ದೊರೆತಾಗ ತನ್ನ ಧರ್ಮಗಳನ್ನು ತಿಳಿಸಿದ್ದಾನೆ. ಕೃಷ್ಣನು ಅಲ್ಲಿಯವರೆಗೂ ಯಾರಿಗೂ ಜ್ಞಾನವನ್ನು ಹೇಳದಿರುವುದಕ್ಕೆ ಕಾರಣಗಳೆಷ್ಟೋ ಇವೆ. ಅಂದಿನ ಪ್ರಜೆಗಳಿಗೆ ಪ್ರತ್ಯಕ್ಷವಾಗಿ ಹೇಳಿದರೆ ಕೇಳುವುದಿಲ್ಲವೆಂದು, ಕೇಳದಿರುವುದಲ್ಲದೆ ಹೇಳುವವನಮೇಲೆ ಹಿಂದಿರುಗುವ ಅವಕಾಶ ಇದೆಯೆಂದು ಕೃಷ್ಣನು ಹೇಳಲಿಲ್ಲ. ಆದರೆ ಅಂತಹ ಪರಿಸ್ಥಿತಿಯಲ್ಲಿ ಅರ್ಜುನನು ಕೇಳಿದ ಜ್ಞಾನವನ್ನು ಹೊರಗೆ ಹೇಳಿದರೂ ಯಾರೂ ಕೇಳುವುದಿಲ್ಲ. ಒಬ್ಬ ವ್ಯಾಸನು ಹೇಳಿದರೂ, ಬರೆದರೂ ಅವುಗಳೇ, ಧರ್ಮಗಳೆಂದು ವಿಶ್ವಾಸಿಸುವ ಪ್ರಜೆಗಳಿಗೆ ವ್ಯಾಸನಿಂದಲೇ ತನ್ನ ಧರ್ಮಗಳನ್ನು ಹೇಳಿಸಿದರೆ, ಅವು ಹೊರಗಿನ ಪ್ರಜೆಗಳಿಗೆ, ತಿಳಿಯುವ ಅವಕಾಶ ಇದೆ. ಆದಿನ ಬರೆಯುವಂತಹ ಸಂಸ್ಕೃತ ಪಾಂಡಿತ್ಯ

ಇದ್ದವನು ವ್ಯಾಸನು ಒಬ್ಬನೇ. ಆ ಕಾಲದಲ್ಲಿ ಸಂಸ್ಕೃತ ಭಾಷೆಯಲ್ಲಿ ಯಾವುದು ಬರೆದರೂ ಅದೇ ಜ್ಞಾನ, ಧರ್ಮ ಎನ್ನುವ ಪ್ರಜೆಗಳಿದ್ದರು. ಈದಿನ ಸಹ ಕೆಲವರು ಸಂಸ್ಕೃತ ಭಾಷೆಗೆ ಹೆಚ್ಚಾಗಿ ಬೆಲೆಕೊಡುತ್ತಾ ಸಂಸ್ಕೃತ ತಿಳಿದವನೇ ಸ್ವಾಮಿ, ಗುರು ಎಂದು, ಸಂಸ್ಕೃತದಲ್ಲಿರುವ ರಚನೆಗಳೆ ಜ್ಞಾನದಿಂದ ಕೂಡಿಕೊಂಡಿರುವವೆಂದು ಹೇಳುವವರಿದ್ದಾರೆ. ನಿಜಕ್ಕೆ ಸಂಸ್ಕೃತ ಒಂದು ಭಾಷೆ ಮಾತ್ರವೇ, ಅದು ಜ್ಞಾನವಲ್ಲ. ಈದಿನ ಸ್ವಾಮಿಜೀಗಳಾಗಿ ಬದಲಾವಣೆಯಾಗ ಬೇಕೆಂದು ಕೊಂಡವರೆಲ್ಲ ಮೊದಲು ಸಂಸ್ಕೃತವನ್ನು ಕಲಿತುಕೊಳ್ಳುತ್ತಿದ್ದಾರೆ. ಈಗ ಯಾರು ಸಂಸ್ಕೃತವನ್ನು ಕಲಿತುಕೊಂಡರೆ ಅವನು ಸ್ವಾಮಿ ಪದವಿಯನ್ನು, ಗುರು ಸ್ಥಾನವನ್ನು, ಪೀಠಾಧಿಪತಿ ಎನ್ನುವ ಪೀಠವನ್ನು ಸಂಪಾದಿಸಿಕೊಂಡಂತೆ, ಜ್ಞಾನವಿದ್ದರೂ, ಇಲ್ಲದಿದ್ದರೂ ಸಂಸ್ಕೃತವಿದ್ದರೆ ಸಾಕು ಹೊರಗಿನ ಪ್ರಪಂಚದಲ್ಲಿ ಅವನು ಪೂಜ್ಯನಾಗಿ ಹೋಗುತ್ತಿದ್ದಾನೆ.

ಸಂಸ್ಕೃತ ಭಾಷೆಯನ್ನು ಎಷ್ಟು ಮಹತ್ವವಾಗಿ ಹೇಳಿಕೊಂಡರೂ ಆ ಭಾಷೆಯನ್ನು ಲಿಪಿಯಿಲ್ಲದ ಭಾಷೆಯಾಗಿಯೇ ಹೇಳಬಹುದು. ಹಿಂದಿ ಲಿಪಿಯಿಂದ ಸಂಸ್ಕೃತವನ್ನು ಬರೆದುಕೊಳ್ಳುತ್ತಿದ್ದೇವೆ ಹೊರತು ಇಲ್ಲಿಯವರೆಗು ಸಂಸ್ಕೃತಕ್ಕೆ ಪ್ರತ್ಯೇಕ ಲಿಪಿ ಇಲ್ಲ. ಅದು ಒಂದು ಲಿಪಿಯಿಲ್ಲದ 'ಕೊರಚರ' 'ಸುಗಾಲಿ' ಮೊದಲಾದ ಭಾಷೆಗಳಾಗಿದ್ದರು ಪ್ರತ್ಯೇಕವಾದ ಭಾಷೆ ಎಂದು ಬಹಳ ಜನರಿಗೆ ತಿಳಿದಿಲ್ಲ. ಈದಿನ ಕಲಿಯುಗದಲ್ಲಿಯೇ ಎಷ್ಟೋ ಬೆಲೆಯನ್ನು ಹೊಂದಿರುವ ಸಂಸ್ಕೃತ ಆದಿನ ದ್ವಾಪರಯುಗದಲ್ಲಿ ಇನ್ನು ದೊಡ್ಡ ಪ್ರಾಧಾನ್ಯತೆಯಿಂದ ಇರುತ್ತಿತ್ತೆಂದು ಅರ್ಥವಾಗುತ್ತಿದೆ. ಆದಿನ ಕೃಷ್ಣನಿಗೆ ಹಿಂದಿ ಭಾಷೆ ಹೊರತು ಸಂಸ್ಕೃತ ಭಾಷೆ ತಿಳಿದಿಲ್ಲ. ಸಂಸ್ಕೃತದಲ್ಲಿ ಹೇಳಿದರೇನೆ ಜ್ಞಾನ, ಹಿಂದಿಯಲ್ಲಿ ಹೇಳಿದರೆ ಜ್ಞಾನ ಅಲ್ಲವೆನ್ನುವ ಮನುಷ್ಯರು ಆ ದಿನಗಳಲ್ಲಿ ಇರುವುದರಿಂದ, ಹೇಗೊ ಕೃಷ್ಣನು ವ್ಯಾಸನಿಂದಲೇ ಸಂಸ್ಕೃತ ಭಾಷೆಯಲ್ಲಿಯೇ ತನ್ನ ಜ್ಞಾನವನ್ನು ಹೇಳಿಸ ಬೇಕೆಂದುಕೊಂಡನು. 90 ವರ್ಷಗಳು ಕಾದುಕೊಂಡ ಕೃಷ್ಣನು, ಕೊನೆಗೆ ತಾನು ಅಂದುಕೊಂಡ ಕೆಲಸವನ್ನು ನೇರವೇರುವಂತೆ ಮಾಡಿದ್ದಾನೆ.

ಅಧರ್ಮಯುಕ್ತನಾದ ವ್ಯಾಸನು ಕಣ್ತೆರೆದು ತಾನು ಇಲ್ಲಿಯವರೆಗು ಬೋಧಿಸಿರುವುದು ಅಧರ್ಮಗಳೆಂದು ಪಶ್ಚಾತ್ತಾಪಡುವಂತೆ ಮಾಡಿದ್ದಾನೆ. ತನ್ನ ಪಾಪಪರಿಹಾರಕ್ಕಾಗಿ ಧರ್ಮಗಳಿಂದ ಕೂಡಿಕೊಂಡ ಭಗವದ್ಗೀತೆಯನ್ನು ಬರೆಯಬೇಕೆಂದುಕೊಂಡನು. ವ್ಯಾಸನಿಂದಲೇ ಗೀತೆಯನ್ನು ಬರೆಸಿದ್ದಾನೆ ಕೃಷ್ಣನು. "ಒಡೆದವನಿಂದಲೇ ಗೋಣ್ಣೆ ತೆಗೆಸಿದಂತೆ" ಎನ್ನುವ ಗಾದೆಯ ಪ್ರಕಾರ ತನಗೆ ವಿರುದ್ಧವಾದ ಅಧರ್ಮಗಳನ್ನು ಬರೆದ ವ್ಯಾಸನಿಂದಲೇ, ತನ್ನ ಗೀತೆಯನ್ನು ಬರೆಸಿಕೊಂಡಿದ್ದಾನೆ. ಕೃಷ್ಣನು ಯಾರಿಗೆ ಹೇಗೆ ಕಾಣಿಸಿದರೂ ನಮ್ಮ ಲೆಕ್ಕದಲ್ಲಿ ಮಾತ್ರ ಆತನು ಮಹಾಮೇಧಾವಿ ಎಂದು ತಿಳಿಯುತ್ತಿದೆ. ಎಷ್ಟೋ ತಿಳುವಳಿಕೆಯಿಂದ ಯುದ್ಧರಂಗದಲ್ಲಿ ಕೃಷ್ಣನು ಅರ್ಜುನನಿಗೆ ಧರ್ಮಗಳನ್ನು ರಹಸ್ಯವಾಗಿ ಹೇಳಿದಾಗ ಅವು ಕೊನೆಗೆ ವ್ಯಾಸನಿಗೆ ಸೇರಿವೆ. ಆದಿನ ಎಲ್ಲರಿಗೂ ತಿಳಿಯುವಂತೆ ಪ್ರತ್ಯಕ್ಷವಾಗಿ ಹೇಳಿದ್ದರೆ, ವ್ಯಾಸನು ಕೂಡ ಅದನ್ನು ಕೇಳುವವನಲ್ಲ. ಕೃಷ್ಣನು ರಹಸ್ಯವಾಗಿ ಹೇಳಿರುವುದರಿಂದ ಅದರಲ್ಲಿ ಏನಿದೇಯೊ ಎಂದು ನೋಡಿದ್ದಾನೆ, ಅದರಲ್ಲಿಯೇ ಸಿಲುಕಿಕೊಂಡಿದ್ದಾನೆ, ಕೊನೆಗೆ ಸತ್ಯವನ್ನು ಗ್ರಹಿಸಿದ್ದಾನೆ.

ಕುರುಕ್ಷೇತ್ರಯುದ್ಧ 18 ದಿನಗಳು ನಡೆದಿದೆ. ಮೊದಲ ದಿನ ಕೃಷ್ಣನು ಅರ್ಜುನನಿಗೆ ಧರ್ಮಗಳನ್ನು ತಿಳಿಸಿದ್ದಾನೆ. ಕೊನೆಗೆ ತನ್ನ ವಿಶ್ವರೂಪವನ್ನು ತೋರಿಸಿದ್ದಾನೆ. ವಿಶ್ವರೂಪ ಇಲ್ಲಿಯವರೆಗು ಯಾರೂ ನೋಡಲಿಲ್ಲ ಎಂದು ಕೃಷ್ಣನೇ ಸ್ವತಃವಾಗಿ ಹೇಳಿರುವುದರಿಂದ, ಯಾರಿಗೂ ಸಿಗದಿರುವುದು ನನಗೆ ಸಿಕ್ಕಿ (ದಕ್ಕಿ) ದೆಯೆಂದು, ಆ ಲೆಕ್ಕದಲ್ಲಿ ಎಲ್ಲರಿಗಿಂತ ನಾನೆಷ್ಟೋ ದೊಡ್ಡವನೆಂದು ಅರ್ಜುನನು ತಿಳಿದುಕೊಂಡಿದ್ದಾನೆ. ಯುದ್ಧ ಮುಗಿದುಹೋದ ನಂತರ ತಾನು ಶ್ರೇಷ್ಟನೆಂದು, ಯಾವ ಮನುಷ್ಯನಿಗಾಗಲಿ, ಯಾವ ದೇವತೆಗಳಿಗಾಗಲಿ ಸಿಗದ ವಿಶ್ವರೂಪ ಸಂದರ್ಶನ ತನಗೆ ಸಿಕ್ಕಿದೆಯೆಂದು ತನ್ನ ಹಿರಿಮೆಯನ್ನು ಹೊರಗೆ ಹೇಳಿಕೊಳ್ಳಬೇಕೆಂದುಕೊಂಡನು. ಹಾಗೆ ಹೇಳಿಕೊಳ್ಳುವುದರಿಂದ ನನ್ನ ಹಿರಿಮೆಯು ಎಲ್ಲರಿಗೂ ತಿಳಿಯುತ್ತದೆ, ಅದುದರಿಂದ ಎಲ್ಲರೂ ನನ್ನನ್ನು ದೊಡ್ಡದಾಗಿ ಪ್ರತ್ಯೇಕವಾಗಿ ನೋಡುತ್ತಾರೆಂದು, ಗೌರವಿಸುತ್ತಾರೆಂದು ಅರ್ಜುನನು ತಿಳಿದು

ಕೊಂಡು, ಮೊದಲು ಆ ವಿಷಯವನ್ನು ವ್ಯಾಸನಿಗೆ ಹೇಳಬೇಕೆಂದುಕೊಂಡನು. ಕೃಷ್ಣನು ಊಹಿಸಿದಂತೆ ಅರ್ಜುನನು ವ್ಯಾಸನ ಹತ್ತಿರಕ್ಕೆ ಹೋಗಿ ಹೇಳಿರುವುದು ನಡೆದಿದೆ. ಯಾರಿಗೂ ಸಿಗದಿರುವುದು, ಯಾವ ದೇವತೆಗಳಿಗೂ ಇಲ್ಲಿಯವರೆಗೂ ಸಾಧ್ಯವಾಗದಿರುವುದು ಎಂದು ರಹಸ್ಯವಾಗಿ ಅರ್ಜುನನು ವ್ಯಾಸನಿಗೆ ಹೇಳಿದ್ದಾನೆ. ಅರ್ಜುನನ ಮಾತುಗಳು ಕೇಳಿದ ವ್ಯಾಸನಿಗೆ ತಲೆತಿರುಗಿಹೋಗಿದೆ. ಅಲ್ಲಿ ಕೃಷ್ಣನು ಹೇಳಿದ ಶಾಸನಗಳಾದ ಸೂತ್ರಗಳನ್ನು ಅರ್ಜುನನ ಮುಖಾಂತರ ತಿಳಿದುಕೊಂಡಿದ್ದಾನೆ. ಅಲ್ಲಿಯವರೆಗೂ ಅರ್ಜುನನಿಗೂ ಸಹ ಅರ್ಥವಾಗದ ಜ್ಞಾನ ವ್ಯಾಸನಿಗೆ ಅರ್ಥವಾಗಿದೆ. ಕೃಷ್ಣನು ತಿಳಿಸಿದ ಧರ್ಮಗಳನ್ನು ಅರ್ಜುನನ ಮುಖಾಂತರ ಕೇಳಿದ ವ್ಯಾಸನಿಗೆ ಯಜ್ಞಗಳು, ವೇದಗಳು, ದಾನಗಳು, ತಪಸ್ಸುಗಳು ಪೂರ್ತಿ ಅಧರ್ಮಗಳೆಂದು ಅರ್ಥವಾಗಿದೆ. ತಾನು ಅದಕ್ಕುಮೊದಲು ಬರೆದ ವೇದಗಳು, ಪುರಾಣಗಳು, ಅಧರ್ಮಗಳೆಂದು ತಿಳಿದು ಬಾಧೆಪಟ್ಟ ವ್ಯಾಸನು, ತನ್ನ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಕೃಷ್ಣನು ತಿಳಿಸಿದ ಧರ್ಮಗಳನ್ನು ಗ್ರಂಥರೂಪದಲ್ಲಿ ಬರೆಯಬೇಕೆಂದುಕೊಂಡನು, ಹಾಗೆ ಸಂಕಲ್ಪಿಸಿಕೊಂಡು ಬರೆದಿರುವುದೇ ಶ್ಲೋಕಗಳ ರೂಪದಲ್ಲಿರುವ ಭಗವದ್ಗೀತೆ.

ಕೃಷ್ಣನು ಹೇಳಿದ ಧರ್ಮಗಳಿಗೆ ಗೀತೆ ಎಂದು ಹೆಸರಿಟ್ಟವನು ವ್ಯಾಸನೆಂದು ಬಹಳಜನರಿಗೆ ತಿಳಿದಿಲ್ಲ. ಕೃಷ್ಣನು ತಿಳಿಸಿದ ಧರ್ಮಗಳು "ಗೀತೆ" ಎಂಬ ಹೆಸರೊಂದಿಗೆ ವ್ಯಾಸನಿಂದ ಛಂದೋಬದ್ಧವಾದ ಶ್ಲೋಕಗಳ ರೂಪವಾಗಿ ಬರೆಯಲ್ಪಟ್ಟಿವೆ. ಹಾಗೆ ವ್ಯಾಸನು ಬರೆದ ಶ್ಲೋಕಗಳು 578 ಮಾತ್ರವೇ. ನಂತರ ಕಾಲದಲ್ಲಿ ಕೆಲವರು ಸಂಸ್ಕೃತ ಪಂಡಿತರು ತಮ್ಮ ಸ್ವಾರ್ಥದಿಂದ ಕೆಲವು ಶ್ಲೋಕಗಳನ್ನು ಗೀತೆಯಲ್ಲಿ ಸೇರಿಸಿದ್ದಾರೆ. ಹಾಗೆ ಸೇರಿಸಿದ ಕಲ್ಪಿತ ಶ್ಲೋಕಗಳನ್ನು ಸೇರಿಸಿ 700 ಶ್ಲೋಕಗಳ ರೂಪದಲ್ಲಿ ಈದಿನ ಗೀತೆ ನಮ್ಮಮುಂದಿದೆ. ಕೃಷ್ಣನು ಬದುಕಿರುವ ಕಾಲದಲ್ಲಿಯೇ ವ್ಯಾಸನು ಗೀತೆಯನ್ನು ಬರೆಯಲ್ಪಟ್ಟಿದ್ದಾನೆ. ವ್ಯಾಸನು ತಾಳೆ ಪತ್ರದ ಮೇಲೆ ಸಂಸ್ಕೃತ ಭಾಷೆಯಲ್ಲಿ ಹಿಂದಿಲಿಪಿಯಿಂದ ಗ್ರಂಥವನ್ನು ಬರೆದಿದ್ದಾನೆ, ಆದಿನ ವ್ಯಾಸನು ತಾಳೆಪತ್ರಗಳ ಮೇಲೆ ಬರೆದ ಪ್ರತಿ ಒಂದೇ.

ಇಂದಿನ ಕಾಲದಂತೆ ಅಚ್ಚುಯಂತ್ರಗಳು ಇಲ್ಲ. ಆದ್ದರಿಂದ ವ್ಯಾಸನು ಬರೆದ ಏಕೈಕ ಪ್ರತಿ ಒಂದೇ ಬಹಳ ಕಾಲ ಇರುತ್ತಿತ್ತು. ಕೆಲವು ದಿನಗಳಿಗೆ ತಾಳೆಪತ್ರದ ಗ್ರಂಥ ಶಿಥಿಲಾವಸ್ಥೆಗೆ ಬಂದಾಗ ಕಲಿಯುಗದಲ್ಲಿ ಜನಮೇಜಯನು ರಾಜ್ಯವನ್ನು ಆಳಿದ ಸಮಯದಲ್ಲಿ ಕೆಲವರು ಸಂಸ್ಕೃತ ಪಂಡಿತರು, ಗೀತೆಯನ್ನು ಮತ್ತೊಂದು ತಾಳೆ ಗರಿಗಳ ಗ್ರಂಥದೊಳಗೆ ಬರೆದಿದ್ದಾರೆ. ಹಾಗೆ ಎತ್ತಿ ಬರೆಯುವ ಸಮಯದಲ್ಲಿ ಅಲ್ಲಿಯವರೆಗು ಯಾರಿಗೂ ತಿಳಿಯದ ಗೀತೆಯೊಳಗೆ ಕೆಲವು ಸ್ವಾರ್ಥಪೂರಿತ ಶ್ಲೋಕಗಳನ್ನು ಸೇರಿಸಿ ಬರೆದಿದ್ದಾರೆ. ಆ ವಿಧವಾಗಿ ಪಂಡಿತರ ಕೈಯಲ್ಲಿ 700 ಶ್ಲೋಕಗಳಿಂದ ಗೀತೆ ತಯಾರಾಗಿದೆ. ನಂತರ ಸ್ವಲ್ಪ ಕಾಲಕ್ಕೆ ಮತ್ತೆ ಕೆಲವರು ಸಂಸ್ಕೃತ ಪಂಡಿತರು ಕೆಲವು ತಾಳೆ ಗರಿಗಳ ಪತ್ರಗಳನ್ನು ತಯಾರು ಮಾಡಿಕೊಂಡು, ಅದನ್ನು ಬೋಧಿಸುತ್ತಾ ಕಾಲವನ್ನು ಕಳೆಯುತ್ತಿದ್ದರು. ಕೃಷ್ಣನು ಅಧರ್ಮಗಳೆಂದು ಹೇಳಿದ ಯಜ್ಞಗಳನ್ನು ನಂತರ ಬರೆದವರು ಯಜ್ಞಗಳನ್ನು ಮಾಡಬೇಕೆಂದು, ಯಜ್ಞ ಮಾಡದವನು ಕಳ್ಳನಿಗೆ ಸಮಾನವೆಂದು ವಿಡ್ಡೂರವಾಗಿ ಬರೆದಿದ್ದಾರೆ. ಇದರಿಂದ ಸ್ವತಃವಾಗಿ ಭಗವಂತನು ಹೇಳಿದ ಗೀತೆಯಲ್ಲಿ ಸಹ ಜ್ಞಾನವೊಂದರ ಮುಸುಗಿನಲ್ಲಿ ಅಧರ್ಮಗಳು ಅಲ್ಲಲ್ಲಿ ಇವೆಯೆಂದು ತಿಳಿಯುತ್ತಿದೆ.

ಆ ವಿಧವಾಗಿ ತಯಾರಾದ ಗೀತೆ ಈದಿನ ಭಗವದ್ಗೀತೆಯಾಗಿ ಚಲಾವಣೆ ಆಗುತ್ತಿದೆ. ಮೊದಲು ವ್ಯಾಸನು, ಕೃಷ್ಣನು ಹೇಳಿದ ಧರ್ಮಗಳಿಗೆ "ಗೀತೆ" ಎಂದು ಹೆಸರು ಇಟ್ಟಾಗಾ, ನಂತರ ಕೆಲವು ಶ್ಲೋಕಗಳನ್ನು ಸೇರಿಸಿ ಬರೆದ ಪಂಡಿತರು ತಮ್ಮ ಮಾತುಗಳನ್ನು ಯಾರೂ ಗುರುತಿಸದಂತೆ, ಅವರ ಮಾತುಗಳನ್ನು ವಿಮರ್ಶನಾ ದೃಷ್ಟಿಯಿಂದ ಯಾರೂ ನೋಡದಂತೆ ಗೀತೆಗೆ, **"ಭಗವದ್ಗೀತೆ"** ಎನ್ನುವ ಹೆಸರನ್ನು ಇಟ್ಟಿದ್ದಾರೆ. ಭಗವದ್ಗೀತೆ ಎಂದರೆ ಭಯದಿಂದ ತಮ್ಮ ಶ್ಲೋಕಗಳನ್ನು ಯಾರೂ ವಿಮರ್ಶಿಸುವುದಿಲ್ಲ ಎನ್ನುವ ಉದ್ದೇಶದಿಂದ, ಆ ವಿಧವಾಗಿ ಗೀತೆಯನ್ನು ಭಗವದ್ಗೀತೆಯಾಗಿ ಬರೆದಿದ್ದಾರೆ. ಪಂಡಿತರು ಅಜ್ಞಾನದಿಂದ ಗೀತೆಯನ್ನು ಭಗವದ್ಗೀತೆ ಎಂದರೂ, ಅದು ನಿಜವಾಗಲು ಭಗವಂತನು ಹೇಳಿರುವುದೆ, ಆದುದರಿಂದ ನಿಜವಾಗಲು ಗೀತೆ ಭಗವದ್ಗೀತೆಯೇ.

ಒಂದುದಿನ ವ್ಯಾಸನು ಬರೆದ ಗೀತೆ, ಭಗವದ್ಗೀತೆಯಾಗಿ ಈದಿನ ಸುಮಾರು ಮುನ್ನೂರ ಇಪ್ಪತ್ತು ಜನರಿಂದ ಅನೇಕ ಭಾಷೆಗಳಲ್ಲಿ ವಿವರ ಬರೆಯಲ್ಪಟ್ಟಿದೆ. ದ್ವಾಪರಯುಗದಲ್ಲಿ ಕೃಷ್ಣನು ಹೇಳಿದ ಜ್ಞಾನ ಭಗವದ್ಗೀತೆಯಲ್ಲಿ ಇದ್ದರೂ, ಆತನ ಜ್ಞಾನವನ್ನು ಯಾರೂ ಅರ್ಥಮಾಡಿಕೊಳ್ಳದೆ ಸ್ವಾಮೀಜಿಗಳು ಸಹಿತವು ಅಧರ್ಮ ಪ್ರವರ್ತನೆಯಾದ ಯಜ್ಞಗಳನ್ನು ಮಾಡುತ್ತಿದ್ದಾರೆ. ಯಾವೊತ್ತೋ ತ್ರೇತಾಯುಗದಲ್ಲಿ ಯಜ್ಞಗಳು ಅರ್ಧಗಳೆಂದು ಹೇಳಿದ ಮಹಾಜ್ಞಾನಿಯಾದ ರಾವಣಬ್ರಹ್ಮನನ್ನೇ ರಾಕ್ಷಸನನ್ನಾಗಿ ಈಗಿರುವ ಪಂಡಿತರು ಚಿತ್ರಿಸಿ ಪ್ರಚಾರ ಮಾಡಿದ್ದಾರೆ. ಇರುವುದಿದ್ದಂತೆ ಬರೆಯುವ ನಮ್ಮನ್ನು ಪರಮತವನ್ನು ಬೋಧಿಸುತ್ತಿದ್ದಾರೆಂದು ಕೆಟ್ಟದಾಗಿ ಪ್ರಚಾರ ಮಾಡಿದ್ದಾರೆ.

ಯಾರು ಏನಂದರೂ, ದ್ವಾಪರಯುಗದಲ್ಲಿ ಕೃಷ್ಣನು ಸಮಯವನ್ನು ಸಂದರ್ಭವನ್ನು ನೋಡಿ, ಎಲ್ಲಾ ಅನುಕೂಲಗಳು ಸರಿಹೋದಾಗ, ತನ್ನ ಧರ್ಮಗಳನ್ನು ತಿಳಿಸಿದ್ದಾನೆ. ಅಷ್ಟೇ ಅಲ್ಲದೆ ಯುಕ್ತಿಯಿಂದ ವ್ಯಾಸನಿಂದಲೇ ಬರೆಸಿದ್ದಾನೆ. ಆದಿನ ಸಹ ಅಜ್ಞಾನ ಪ್ರಜೆಗಳು ತಮಗೆ ತಿಳಿದಿರುವುದೆ ಜ್ಞಾನವೆಂದುಕೊಂಡು, ತಾವು ಮಾಡುವುದೆ ಧರ್ಮವೆಂದುಕೊಂಡು, ಕೃಷ್ಣನ ಜ್ಞಾನವನ್ನು ಅರ್ಥಮಾಡಿಕೊಳ್ಳದೆ ಅಜ್ಞಾನವಾಗಿ ಪ್ರವರ್ತಿಸುತ್ತಾರೆನ್ನುವ ಉದ್ದೇಶದಿಂದ, ಭಗವಂತನು 90 ವರ್ಷಗಳು ಕಾದುನೋಡಿ ಗೀತೆಯನ್ನು ಹೇಳಿದ್ದಾನೆ. ಆದಿನವೇ ದ್ವಾಪರಯುಗದಲ್ಲಿ ಹಾಗಿದ್ದರೆ, ಈದಿನ ಕಲಿಯುಗದಲ್ಲಿ ಧರ್ಮವಿರೋಧಿಗಳು ಎಷ್ಟುಜನರಿರುತ್ತಾರೋ ಹೇಳಬೇಕಾದ ಅವಶ್ಯಕತೆಯಿಲ್ಲ. ತಮಗೆ ತಿಳಿದಿರುವುದೆ ಧರ್ಮ, ಜ್ಞಾನ ಎಂದು ತಾವು ಹಿಂದೂಮತವನ್ನು ಕಾಪಾಡುವವರೆಂದು ಹೇಳಿಕೊಳ್ಳುವವರಿಗೆ, ನಮ್ಮದು ಇಂದೂ ಧರ್ಮ ಎಂದು ನಾವು ಹೇಳಿದರೆ, 'ಇಂದೂ' ಎನ್ನುವ ಪದಕ್ಕೆ ಅರ್ಥ ತಿಳಿಯದವರು, ನಾವು ಹೇಳುವುದು ಪರಮತ ಎನ್ನುವಂತೆ ಮಾತನಾಡುತ್ತಿದ್ದಾರೆ. ಇಂದೂ ಎಂದರೆ ಅರ್ಥವಿದೆ, ಆದರೆ ಹಿಂದೂ ಎಂದರೆ ಅರ್ಥವೇ ಇಲ್ಲ. ಆದರೂ ಕೇಳಿ ತಿಳಿದುಕೊಳ್ಳೋಣ. ನಮ್ಮ ಪೂರ್ವದ ಸಂಸ್ಕೃತಿ ಸಾಂಪ್ರದಾಯಗಳು ನಮಗೆ ತಿಳಿದಿಲ್ಲ! ಎಂದು ಯಾವಮಾತ್ರವು ತಿಳಿದುಕೊಳ್ಳದೆ ಕುರುಡರಂತೆ ಮಾತನಾಡುವ

ವರಿದ್ದಾರೆ. ನಾವು ಕೇವಲ ಆಧ್ಯಾತ್ಮಿಕ ವಿದ್ಯೆಯನ್ನು ತಿಳಿಸಬೇಕೆಂದು ಸುಮಾರು ದಶ ಅಷ್ಟಾಧಿಕ ಗ್ರಂಥಗಳನ್ನು ಬರೆದರೆ, ಓದು ಬರದವರೆಲ್ಲಾ ಪುಸ್ತಕಗಳು ಬರೆಯುತ್ತಿದ್ದಾರೆಂದು ನಮ್ಮನ್ನು ಅನ್ನುತ್ತಿದ್ದಾರೆ. ಹೀಗೆ ಹೇಳಿಕೊಳ್ಳದಷ್ಟು ಆತಂಕಗಳು ಬಂದರೂ, ಭಗವಂತನು ತಿಳಿಸಿದ ಜ್ಞಾನಕ್ಕೆ ಸರಿಯಾದ ಅರ್ಥವನ್ನು ಕೈಗೂಡಿಸಬೇಕೆಂಬ ಉದ್ದೇಶದಿಂದ ಮತಗಳಿಗೆ ಅತೀತವಾಗಿ ಗೀತಜ್ಞಾನವನ್ನು ತ್ರೈತ ಸಿದ್ಧಾಂತದ ಮೇಲೆ ಶಾಸ್ತ್ರಪದ್ಧತಿಯಾಗಿ ನಾವು ಹೇಳಿದರೆ, ಅದರ ವಿವರವನ್ನು ನೋಡದೆ ಸ್ವಲ್ಪಮಟ್ಟಿಗಾದರೂ ಓದದೆ ಹಿಂದೂ (ಇಂದೂ) ಗಳೆಂದುಕೊಳ್ಳುವವರೆಲ್ಲರೂ ನಾಚಿಕೆಯಿಂದ ತಲೆತಗ್ಗಿಸಿಕೊಳ್ಳವಂತೆ, ನಮ್ಮ ಮುಂದೆಯೇ ಭಗವದ್ಗೀತೆಯನ್ನು ಬೆಂಕಿಹಚ್ಚಿದ ಹಿಂದೂ ರಕ್ಷಕರೆಂಬ ಹೆಸರಿರುವವರಿದ್ದಾರೆಂದರೆ, ಈಗಿನ ಧರ್ಮಗಳ ಪರಿಸ್ಥಿತಿ ಹೇಗಿದೆಯೋ ಹೇಳದೆ ಅರ್ಥವಾಗುತ್ತದೆ. ನಾವು ಹಿಂದೂ (ಇಂದೂ) ಗಳಿಗೆ ಜ್ಞಾನಕೇಂದ್ರ ಭಗವದ್ಗೀತೆ ಎಂದರೆ, ಹಿಂದೂ ಸಂಸ್ಥೆಗಳೆಂದು ಹೆಸರಿಟ್ಟುಕೊಂಡ ಕೆಲವರು, ಅಲ್ಲ ವೇದಗಳೇ ಜ್ಞಾನ ಎನ್ನುತ್ತಿದ್ದಾರೆ. ಕೃಷ್ಣನು ವೇದಗಳು ಅಧರ್ಮಗಳೆಂದು ಹೇಳಿದ್ದಾನೆಂದು ನಾವು ಬರೆದರೆ, ಇಂತಹ ಪುಸ್ತಕಗಳನ್ನು ಹೊರಗೆ ಪ್ರಜೆಗಳು ಓದದಂತೆ ಸರ್ಕಾರ ನಿಷೇಧಿಸಬೇಕೆಂದು ಹಿಂದೂಗಳಲ್ಲಿ ಅಗ್ರಸ್ಥಾನದಲ್ಲಿರುವವರೇ ವಾದಿ ಸುತ್ತಿದ್ದಾರೆ. ಜಾತೀಯಪಕ್ಷಿ ನವಿಲು ಅದನ್ನು ಕಾಪಾಡುತ್ತೇವೆ ಎನ್ನುತ್ತಾರೆ, ಆದರೆ ದೊರೆತರೆ ಕೊಯ್ದು ತಿನ್ನುತ್ತಾರೆ. ಹಾಗೆ ಭಗವದ್ಗೀತೆಯನ್ನು ಕೋರ್ಟಿನಲ್ಲಿ ಸಾಕ್ಷಿಗಳ ಹತ್ತಿರ ಬೆಲೆಯುಳ್ಳದಾಗಿ ತೋರಿಸುತ್ತೇವೆ, ಆದರೆ ಮನೆಯಲ್ಲಿ ಗೀತೆಯನ್ನು ಒಂದು ಅಕ್ಷರ ಸಹ ಓದುವುದಿಲ್ಲ. ಈ ದಿನ ಗೀತೆ ಅಚ್ಚುಯಂತ್ರಗಳ ಪುಣ್ಯದಿಂದ ಎಷ್ಟೋ ಪ್ರತಿಗಳಾಗಿ ಬಂದರೂ ಯಾವ ಪ್ರಯೋಜನೆಯೂ ಇಲ್ಲ. ಕೃಷ್ಣನು ಯುಕ್ತಿಯಿಂದ ಅರ್ಜುನನಿಗೆ ಬೋಧಿಸಿ, ವ್ಯಾಸನಿಂದ ಬರೆಸಿದರೂ ಕಲಿಯುಗದಲ್ಲಿ ಮತವನ್ನು ಅಡ್ಡ ಇಟ್ಟುಕೊಂಡು, ವೇದಗಳನ್ನು ಪ್ರಚಾರ ಮಾಡುವವರ ಮುಂದೆ ಆತನ ಶ್ರಮವೆಲ್ಲಾ ವ್ಯರ್ಥವಾಗುತ್ತಿದೆ. ಹಿಂದೂಗಳೆಂದು ಬೊಟ್ಟು ಇಟ್ಟುಕೊಂಡವರೆಲ್ಲಾ ಹಿಂದೂಗಳೇನಾ? ಅವರಲ್ಲಿ ಹಿಂದೂ (ಇಂದೂ) ಧರ್ಮಗಳಿವೆಯಾ? ಎಂದು ಅನುಮಾನ ಬರುತ್ತಿದೆ. ಅಂತಹವರೆಲ್ಲರಿಗೂ

ಎದುರಿಸುವ ತ್ರೈತ ಸಿದ್ಧಾಂತ ಭಗವದ್ಗೀತೆ ಹೊರಗೆ ಬಂದು ಭಗವಂತನ ಭಾವಗಳನ್ನು ನಿರ್ಭಯವಾಗಿ ತಿಳಿಸುತ್ತಿದೆ. ಆದಿನ ದೇವರ ಧರ್ಮಗಳು ಈದಿನ ಸ್ವಚ್ಛವಾಗಿ ತ್ರೈತ ಸಿದ್ಧಾಂತ ಭಗವದ್ಗೀತೆ ರೂಪದಲ್ಲಿ ಬಂದಿವೆಯೆಂದು ತಿಳಿದುಕೊಳ್ಳುತ್ತಿದ್ದೇವೆ.

# ಕೃಷ್ಣನ ಮರಣ ಲೋಕಕ್ಕೆ ಕಣ್ತೆರೆ

ಕ್ರಿಸ್ತಪೂರ್ವ 02-02-3102ನೇ ವರ್ಷ ಕೃಷ್ಣನು ಮರಣಿಸಿದ್ದಾನೆ. ಜನವರಿ 14ನೇ ತಾರೀಖು ನಂತರ ಉತ್ತರಾಯಣ ಕಾಲ ಬರುತ್ತದೆ. ಆದ್ದರಿಂದ ಕೃಷ್ಣನು ಮರಣಿಸಿರುವುದು ಉತ್ತರಾಯಣದಲ್ಲಿಯೆಂದು ತಿಳಿಯುತ್ತಿದೆ. ಒಂದುದಿನ ಕೃಷ್ಣನು ಒಂದು ಮರದಪೊದೆಯ ಹತ್ತಿರ ಕಾಲಿನ ಮೇಲೆ ಕಾಲು ಇಟ್ಟುಕೊಂಡು ಮಲಗಿ ಕಾಲನ್ನು ಕದಲಿಸುತ್ತಿರುವಾಗ, ಆ ಪ್ರದೇಶಕ್ಕೆ ಬೇಟೆಗೆ ಬಂದ ಬೇಡರನು ಪೊದೆಮರೆಯಲ್ಲಿ ಕಾಲು ಕದಲುತ್ತಿರುವುದು ನೋಡಿ, ಅಲ್ಲಿ ಜಿಂಕೆ ಕದಲುತ್ತಿದೆ ಯೆಂದು ತಪ್ಪಾಗಿ ಭಾವಿಸಿ ಬಾಣವನ್ನು ಹೊಡೆದಾಗ, ಅದು ಕೃಷ್ಣನ ಬಲಗಾಲಿನ ಹೆಬ್ಬೆರಳಿಗೆ ತಾಕಿತು. ಎಬ್ಬೆರಳಿಗೆ ಸಿಲುಕಿಕೊಂಡ ಬಾಣವು ಕೃಷ್ಣನ ಶರೀರದಿಂದ ರಕ್ತ ಸೋರಿಹೋಗಿ ಆತನು ಮರಣಿಸಿರುವುದು ನಡೆದಿದೆ. ವಿಶ್ವವ್ಯಾಪ್ತವಾಗಿ ಅಣುಅಣುವಿನಲ್ಲಿ ಇರುವ ಶಕ್ತಿ ಯಾವುದೋ, ಆ ಶಕ್ತಿಯಲ್ಲಿನ ಭಾಗ ಒಂದು ಶರೀರವನ್ನು ಏರ್ಪಡಿಸಿಕೊಂಡು ಬಂದು, 126 ವರ್ಷಗಳು ಮಾನವರೊಂದಿಗೆ ಸಹಜೀವನ ಮಾಡಿ ತನ್ನ ಧರ್ಮಗಳನ್ನು ತಿಳಿಸಿ, ಶರೀರದಲ್ಲಿ ಇಲ್ಲದಂತೆ ಎಲ್ಲಾಕಡೆ ಇರುವ ತನ್ನ ಶಕ್ತಿಯಲ್ಲಿ ಬೆರೆತುಹೋಗಿದೆ. ಹಾಗೆ ಬಂದುಹೋಗಿರು ವುದು ಸಾಧಾರಣ ಜೀವಾತ್ಮ ಅಲ್ಲ, ಪರಮಾತ್ಮ ಶಕ್ತಿ ಎಂದು ಒಬ್ಬ ಭೀಷ್ಮನಿಗೆ ಹೊರತು ಯಾರಿಗೂ ತಿಳಿದಿಲ್ಲ. ಭೀಷ್ಮನು ಕೃಷ್ಣನಿಗಿಂತ ಮೊದಲೆ ಮರಣಿಸಿದ್ದಾನೆ. ಆದ್ದರಿಂದ ಕೃಷ್ಣನು ಮರಣಿಸುವಾಗ ಆ ಶರೀರದಲ್ಲಿನ ಜೀವಾತ್ಮನಾಗಿ ಇಷ್ಟುಕಾಲ ಇದ್ದಿದ್ದು ದೈವಶಕ್ತಿ ಎಂದು ಯಾರಿಗೂ ತಿಳಿದಿಲ್ಲ. 126 ವರ್ಷಗಳು ಶರೀರದಿಂದ ಬದುಕಿದ ಆ ಶಕ್ತಿಯ ಹೆಸರು "ಕೃಷ್ಣ" ಎನ್ನುವ ಎರಡಕ್ಷರಗಳು ಮಾತ್ರವೇ.

ಕೃಷ್ಣ ಎಂಬ ಶಬ್ದವೊಂದರ ಅರ್ಥ ಕಪ್ಪು ಬಣ್ಣ ಎಂದು ತಿಳಿಯುತ್ತಿದೆ. ಕೃಷ್ಣ ಪದವು ಕಪ್ಪು ಬಣ್ಣವನ್ನು ತಿಳಿಸುತ್ತಿದೆ. ಕತ್ತಲು ಕಪ್ಪಗೆ ಇರುತ್ತದೆ. ಕಗ್ಗತ್ತಲಲ್ಲಿ ಏನೂ ಕಾಣಿಸದೆ ಕಪ್ಪನೆ ಬಣ್ಣ ಮಾತ್ರ ಕಾಣಿಸುತ್ತಿದೆ. ಮನುಷ್ಯ ಯಾವಾಗಲೂ ಯಾವುದೋ ಒಂದು ಕಾಣಿಸುವ ಬೆಳಕನ್ನೇ ಕೋರಿಕೊಳ್ಳುತ್ತಾನೆ. ಆದರೆ ಏನು ಕಾಣಿಸದ ಕತ್ತಲನ್ನು ಕೋರಿಕೊಳ್ಳುವುದಿಲ್ಲ. ಅದೇ ವಿಧವಾಗಿ ಭೂಮಿಮೇಲೆ ಪ್ರತಿ ಮನುಷ್ಯ ಯಾವುದೋ ಒಂದು ವಿಷಯವನ್ನು ತಿಳಿಸುವ ಮಾಯೆಯನ್ನು ಕೋರಿಕೊಳ್ಳುತ್ತಾನೆ. ಆದರೆ ಯಾವ ವಿಷಯವಿಲ್ಲದ, ಯಾವ ಗುಣವಿಲ್ಲದ ದೈವವನ್ನು ಕೋರಿಕೊಳ್ಳುವುದಿಲ್ಲ. ದೇವರು ಯಾರಿಗೂ ಕಾಣಿಸುವವನಲ್ಲ. ದೇವರನ್ನು ಯಾರೂ ಕೋರಿಕೊಳ್ಳುವುದಿಲ್ಲ ಎಂದು ತಿಳಿಯುವುದಕ್ಕೆ ಗುರುತಾಗಿ ಭಗವಂತನು ತನ್ನ ಹೆಸರಾಗಿ ಕಪ್ಪನೆ ಬಣ್ಣಕ್ಕೆ ಗುರುತಾದ ಕಪ್ಪು (ಕೃಷ್ಣ) ಎನ್ನುವ ಹೆಸರನ್ನು ಇಟ್ಟುಕೊಂಡಿದ್ದಾನೆ.

ವಿಶ್ವವೆಲ್ಲಾ ವ್ಯಾಪಿಸಿ ಯಾರಿಗೂ ತಿಳಿಯದ ಶಕ್ತಿಯೇ ಕೃಷ್ಣ ಶರೀರದಲ್ಲಿದ್ದು ಕೊನೆಗೆ ಮರಣಿಸಿದೆ. ಕೃಷ್ಣ ಶರೀರದಲ್ಲಿನ ಶಕ್ತಿಯು ಹೊರಗೆ ವಿಶ್ವವೆಲ್ಲಾ ಅಣುಅಣುವಿನಲ್ಲಿ ವ್ಯಾಪಿಸಿರುವ ಶಕ್ತಿಯು ಎರಡು ಒಂದೇ. ಆದ್ದರಿಂದ ನೀರು ನೀರಿನಲ್ಲಿ ಬೆರೆತುಹೋದಂತೆ, ಹೊರಗಿನ ಶಕ್ತಿ, ಕೃಷ್ಣ ಶರೀರದಲ್ಲಿನ ಶಕ್ತಿ ಎರಡು ಒಂದಾಗಿ ಬೆರೆತುಹೋಗಿವೆ. ಹುಟ್ಟಿದ ಮನುಷ್ಯ ಯಾರಾದರೂ ಮರಣಿಸಿದ ನಂತರ ಜನ್ಮಿಸದಂತೆ ಮೋಕ್ಷವನ್ನು ಹೊಂದಬೇಕೆಂದರೆ ಅಂದರೆ ದೇವರಲ್ಲಿ ಬೆರೆತುಹೋಗಬೇಕೆಂದರೆ ಭಗವದ್ಗೀತೆಯಲ್ಲಿ ಹೇಳಿದ ಸೂತ್ರದ ಪ್ರಕಾರ ಮರಣಿಸಿದ ವ್ಯಕ್ತಿ ಯೋಗಿಯಾಗಿರಬೇಕು. ಮರಣಿಸಿದ ಯೋಗಿ ಉತ್ತರಾಯಣ, ಶುಕ್ಲಪಕ್ಷ, ಹಗಲು, ಸೂರ್ಯರಶ್ಮಿ ಹೊಂದಿದ ಸಮಯದಲ್ಲಿ ಮರಣಿಸಿರಬೇಕು. ಅಂತಹವನು ಮಾತ್ರ ಮೋಕ್ಷವನ್ನು ಪಡೆಯುತ್ತಾನೆ. ಈ ಸೂತ್ರವನ್ನು ಹೇಳಿದ ಕೃಷ್ಣನು ಈ ಸೂತ್ರದ ಪ್ರಕಾರ ಮರಣಿಸಿದ್ದಾನಾ? ಎಂದು ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೆ! ಗೀತೆಯಲ್ಲಿ ಹೇಳಿದ ಸೂತ್ರದ ಪ್ರಕಾರ ಕೃಷ್ಣನು ಕರ್ಮಯೋಗಿಯಾಗಿ ಇದ್ದಾನೆ. ಉತ್ತರಾಯಣದಲ್ಲಿಯೇ ಹಗಲು ಸಮಯ, ಸೂರ್ಯರಶ್ಮಿ ಇರುವ

ಸಮಯದಲ್ಲಿಯೇ ಮರಣಿಸಿದ್ದಾನೆ, ಆದರೆ ಆತನು ಮರಣಿಸಿರುವುದು ಶುಕ್ಲಪಕ್ಷದಲ್ಲಿ ಅಲ್ಲ. ಕೃಷ್ಣಪಕ್ಷದಲ್ಲಿ ಮರಣಿಸಿದ್ದಾನೆ, ಮೋಕ್ಷ ಹೊಂದಬೇಕಾದ ಯೋಗಿ ಶುಕ್ಲಪಕ್ಷದಲ್ಲಿ ಮರಣಿಸಬೇಕಾಗಿದೆ. ಆದರೆ ಕೃಷ್ಣನು ಕೃಷ್ಣಪಕ್ಷದಲ್ಲಿ ಮರಣಿಸುವುದರಿಂದ, ಭಗವದ್ಗೀತೆಯಲ್ಲಿ ಭಗವಂತನಾದ ಕೃಷ್ಣನು ಹೇಳಿದ ಸೂತ್ರದ ಪ್ರಕಾರ ಕೃಷ್ಣನೇ ಮೋಕ್ಷಕ್ಕೆ ಹೋಗಲಿಲ್ಲವೆಂದು, ಪುನಃ ಜನ್ಮಕ್ಕೆ ಹೋಗಿದ್ದಾನೆಂದು ಹೇಳಬಹುದು. ಆದರೆ ಕೃಷ್ಣನು ದೇವರೊಳಗೆ ಹೋಗಿದ್ದಾನೆ, ಆದರೆ ಜನ್ಮಕ್ಕೆ ಹೋಗಲಿಲ್ಲ. ಇಲ್ಲಿ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿದ ಸೂತ್ರ ಕೃಷ್ಣನಿಗೆ ಅನ್ವಯಿಸುವುದಿಲ್ಲವಾ ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ನೀರು ನೀರಿನಲ್ಲಿ ಬೆರೆಯುವುದಕ್ಕೆ ಯಾವ ಅಡ್ಡಿ ಆತಂಕಗಳು ಇಲ್ಲ. ಆದರೆ ಮಂಜು ಗಡ್ಡೆಗಳು ನೀರಿನಲ್ಲಿ ಬೆರೆಯಬೇಕೆಂದರೆ ಅವು ನೀರಾಗಿ ಬದಲಾಗುವುದಕ್ಕೆ ಸ್ವಲ್ಪ ಉಷ್ಣೋಗ್ರತೆ ಅಗತ್ಯ. ಕೃಷ್ಣನು ಹೇಳಿರುವುದು ಮಂಜುಗಡ್ಡೆಗಳು ನೀರಾಗಿ ಬದಲಾಗುವುದಕ್ಕೆ ಉಷ್ಣೋಗ್ರತೆ ಅಗತ್ಯವೆನ್ನುವಂತೆ ಮನುಷ್ಯರು ದೇವರಾಗಿ ಬದಲಾಗುವುದಕ್ಕೆ ಇಂತಹ ಸಮಯದಲ್ಲಿಯೇ ಮರಣ ಹೊಂದಬೇಕೆಂದು ಹೇಳಿದ್ದಾನೆ, ಆದರೆ ಕೃಷ್ಣನು ನೀರಿನಂತಹವನು ಅಂತಹ ಮರಣಕಾಲದ ನಿಯಮ ಆತನಿಗೆ ಇಲ್ಲ. ಆದರೆ ಮನುಷ್ಯರು ಮಂಜುಗಡ್ಡೆಯಂತ ಹವರು ಅವರಿಗೆ ಉಷ್ಣ ಎಂಬ ಜ್ಞಾನ ಅಗತ್ಯ. ಆದ್ದರಿಂದ ಅವರಿಗೆ ಮರಣಕಾಲ ನಿಯಮ ಇದೆ. **"ಜಗವನ್ನರಿತ ಬ್ರಾಹ್ಮಣನಿಗೆ ಜಂಧ್ಯವೇಕೆ"** ಎನ್ನುವಂತೆ ಕಾಲವೇ ತಾನಾಗಿರುವವನಿಗೆ ಮರಣಕಾಲ ನಿಯಮವು ಅನ್ವಯಿಸುವುದಿಲ್ಲ. ಕರ್ಮವೆನ್ನುವ ಚಳಿಗೆ ಗಡ್ಡೆಕಟ್ಟಿದ ಮನುಷ್ಯರಿಗೆ ಬಿಸಿ (ಪ್ರಕಾಶ) ಎನ್ನುವ ಜ್ಞಾನ ಅಗತ್ಯ. ಆದ್ದರಿಂದ ಸಾಧಾರಣ ಮನುಷ್ಯರಿಗೆ ಮಾತ್ರವೇ ಮರಣಕಾಲದ ನಿಯಮ ಅನ್ವಯಿಸುತ್ತದೆಂದು ತಿಳಿಯಬೇಕು. ಮರಣಕಾಲ ತನಗೆ ಅನ್ವಯಿಸುವುದಿಲ್ಲ ಎಂದು ತಿಳಿಸುವುದಕ್ಕಾಗಿ ಆತನು ಕೃಷ್ಣಪಕ್ಷದಲ್ಲಿಯೇ ಮರಣಿಸಿದ್ದಾನೆ.

ಪೊದೆಯಲ್ಲಿ ತಣ್ಣನೆಯ ನೆರಳಲ್ಲಿ ಮಲಗಿರುವ ಕೃಷ್ಣನನ್ನು ಬೇಡನು ಬೇಟೆಗಾಗಿ ಅಲ್ಲಿಗೆ ಬಂದು, ಕದಲುತ್ತಿರುವ ಕಾಲನ್ನು ಲೇಡಿ (ಜಿಂಕೆ)

ಎಂದುಕೊಂಡು ಬಾಣ ಹೊಡೆದಾಗ, ಅದು ಕೃಷ್ಣನ ಬಲಗಾಲಿನ ಹೆಬ್ಬೆರಳನ್ನು ತಾಕಿ ರಕ್ತ ಸೋರುತ್ತಿರುವ ಸಮಯದಲ್ಲಿ, ಆ ಬೇಡನು ಬಂದುನೋಡಿ ನಾನು ಎಷ್ಟು ತಪ್ಪು ಕೆಲಸಮಾಡಿದ್ದೇನೆಂದು ರೋದಿಸುತ್ತಿರುವಾಗ, ಕೃಷ್ಣನು ಹೀಗೆ "ನೀನು ಬಾಧೆಪಡಬೇಕಾಗಿರುವುದು ಏನೂ ಇಲ್ಲ. ನಿರ್ಣಯದ ಪ್ರಕಾರವೇ ಎಲ್ಲಾ ನಡೆಯುತ್ತಿವೆ. ನನ್ನ ಹುಟ್ಟು, ಸಾವು ಎರಡೂ ನಡೆಯುವುದಕ್ಕೆ ಒಂದು ಕಾರಣವಿದೆ. ನಾನು ಅಶುಭ್ರವಾದ ಸ್ಥಳದಲ್ಲಿ ಸೆರೆಮನೆಯಲ್ಲಿ ತಾಯಿಪಕ್ಕದಲ್ಲಿ ತಂದೆ ಹೊರತು ಯಾರೂ ಇಲ್ಲದಂತೆ ಹುಟ್ಟಬೇಕೆಂಬ ನಿರ್ಣಯವಿದೆ. ಆ ನಿರ್ಣಯದ ಪ್ರಕಾರವೇ ದೀನಸ್ಥಿತಿಯಲ್ಲಿ ಹುಟ್ಟಿದ್ದೇನೆ. ಹಾಗೆಯೇ ಮರಣವೂ ಸಹ ಒಬ್ಬನಿರುವ ಸಮಯದಲ್ಲಿ, ಇತರನ ಆಯುಧದಿಂದ ಗಾಯಪಟ್ಟವನಾಗಿ ರಕ್ತಸೋರಿ ಮರಣಿಸಬೇಕೆನ್ನುವ ನಿರ್ಣಯವಿದೆ. ಅದರ ಪ್ರಕಾರವೇ ಈಗ ಒಬ್ಬಂಟಿಗನಾಗಿರುವ ನನ್ನನ್ನು ನಿನ್ನ ಬಾಣ ಗಾಯಪಡಿಸಿದೆ. ಹುಟ್ಟು, ಸಾವು ಎರಡು ಹೀಗೆ ನಡೆಯಬೇಕೆಂದಿದೆ. ಆದ್ದರಿಂದ ನೀನು ಬಾಧೆಪಡಬೇಕಾದ ಕೆಲಸವಿಲ್ಲ" ಎಂದನು. ಆ ಮಾತುಗಳು ಕೇಳಿದ ಬೇಡನು "ನೀವು ಎಷ್ಟೋ ಯುಕ್ತಿ, ಶಕ್ತಿ ಎರಡೂ ಇರುವವರು. ನೀವು ಏನು ಇಲ್ಲದವರಂತೆ ದೀನಸ್ಥಿತಿಯಲ್ಲಿ ಹುಟ್ಟಿರುವುದು, ಹಾಗೆ ಒಬ್ಬಂಟಿಗನಾಗಿ ಗಾಯಪಟ್ಟು ಪಕ್ಕದಲ್ಲಿ ಯಾರೂ ಇಲ್ಲದಂತೆ ಮರಣಿಸುವುದು ನೀವು ನಿರ್ಣಯವೆಂದರೂ ನನಗೆ ಹೇಳಲಾರದಷ್ಟು ದುಃಖವನ್ನು ಉಂಟು ಮಾಡುತ್ತಿವೆ." ಎಂದನು. ಹಾಗೆ ದುಃಖದಿಂದ ಮಾತನಾಡಿದ ಬೇಡನನ್ನು ಸಮಾಧಾನ ಪಡಿಸುತ್ತಾ ಕೃಷ್ಣನು "ದೀನಸ್ಥಿತಿಯಲ್ಲಿ ಹುಟ್ಟಿದ ನನ್ನ ಜನನ, ಗಾಯಪಟ್ಟು ಒಬ್ಬಂಟಿಗನಾಗಿ ಮರಣಿಸುವ ನನ್ನ ಮರಣ ಭವಿಷ್ಯ ಕಾಲಕ್ಕೆ ಅಗತ್ಯ. ಈಗಿನಿಂದ ಕಲಿಯುಗ ಪ್ರಾರಂಭವಾಗುತ್ತಿದೆ. ಕಲಿಯುಗದಲ್ಲಿ ಇಲ್ಲಿಯವರೆಗೂ ಇಲ್ಲದ ಅಜ್ಞಾನ ಪ್ರಾರಂಭವಾಗುತ್ತದೆ. ಇಲ್ಲಿಯವರೆಗೂ ಇಲ್ಲದ ಮತಗಳು ಕಲಿಯುದಲ್ಲಿ ಹುಟ್ಟಿಬರುತ್ತವೆ. ಸೃಷ್ಟಿ ಆದಿಯಿಂದ ಪ್ರಪಂಚ ವ್ಯಾಪ್ತವಾಗಿರುವ ಇಂದೂ ಧರ್ಮಗಳು ಕ್ಷೀಣಿಸಿ, ಹೆಸರಿಗೆ ಮಾತ್ರ ಇಂದೂದೇಶ ದಲ್ಲಿಯೇ ಉಳಿದು ಅದೂ ಬಲಹೀನವಾಗಿ ಇರುತ್ತವೆ. ಇಂದೂಗಳು ತಮ್ಮ ಧರ್ಮಗಳನ್ನು ತಾವೇ ತಿಳಿಯದೆ, ತಮ್ಮನ್ನು ತಾವು ಹಿಂದೂಗಳಾಗಿ ಹೇಳಿ

ಕೊಳ್ಳುತ್ತಾರೆ. ಇಂದೂಪಥವನ್ನು (ಜ್ಞಾನಮಾರ್ಗವನ್ನು) ಹಿಂದೂಮತವಾಗಿ ಪ್ರಕಟಿಸಿಕೊಳ್ಳುತ್ತಾರೆ. 'ಪಥ' ಎನ್ನುವ ಶಬ್ದ ಕೊನೆಗೆ 'ಮತ' ಎನ್ನುವ ಪದವಾಗಿ ಬದಲಾಗುತ್ತದೆ. **ಪಥ ಎಂದರೆ ಮಾರ್ಗ, ಮತ ಎಂದರೆ ಇಷ್ಟ** ಇದು ನನ್ನ ಮಾರ್ಗ ಎನ್ನುವ ಅರ್ಥವನ್ನು ಬಿಟ್ಟು, ಇದು ನನ್ನ ಇಷ್ಟ ಎನ್ನುವ ಮಾತನ್ನು ಹೇಳುತ್ತಾರೆ.

ಆದಿಯಿಂದ ಇಂದೂ ಧರ್ಮಗಳು ವಿಶ್ವವ್ಯಾಪ್ತವಾಗಿ ಇವೆ. ಕಲಿಯುಗ ದಲ್ಲಿ ಮತಗಳು ತಯಾರಾಗಿ ಇಂದೂಪಥವೊಂದರ ಸ್ಥಾನವನ್ನು ಕ್ರೈಸ್ತ ಮತ ಆಕ್ರಮಿಸಿಕೊಳ್ಳುತ್ತದೆ. ಹಿಂದೂಗಳೆಲ್ಲರು ಒಬ್ಬೊಬ್ಬರಾಗಿ ಆ ಮತದಲ್ಲಿ ಸೇರಿಹೋ ಗುತ್ತಾ ಹಿಂದೂಮತ ಕ್ಷೀಣಿಸಿಹೋಗುತ್ತದೆ. ಅಂತಹ ಸಂದರ್ಭದಲ್ಲಿ ಹಿಂದೂಮತವನ್ನು ಕಾಪಾಡಿಕೊಳ್ಳುವುದಕ್ಕೆ ಕೆಲವು ಸಂಘಗಳು ಏರ್ಪಡುತ್ತವೆ. ಅಂತಹ ಹಿಂದೂಸಂಘಗಳಿಗೆ, ತಮ್ಮ ಮತಕ್ಕೆ ಸಂಬಂಧಿಸಿದ ಧರ್ಮಗಳು ತಿಳಿಯದಿರುವುದರಿಂದ, ಅವರಿಂದ ಹಿಂದೂ ಮತಕ್ಕೆ ನಷ್ಟ ಏರ್ಪಡುತ್ತದೆ. ಜ್ಞಾನವಿಲ್ಲದ ಹಿಂದೂಸಂಘಗಳ ಕೆಲಸಗಳನ್ನು ನೋಡಿ ಹಿಂದೂಗಳೇ ಅಸಹಿಸಿ ಕೊಳ್ಳುತ್ತಾರೆ. ಹಿಂದೂ ದೇಶದಲ್ಲಿ ಸಹ ಕ್ರೈಸ್ತ ಮತ ಅತಿವೇಗವಾಗಿ ವ್ಯಾಪಿಸಿ ಹೋಗುತ್ತದೆ. ಹಾಗೆ ಬೆಳೆದುಹೋಗುತ್ತಿರುವ ಮತವನ್ನು ನೋಡಿ ಆ ಮತಪ್ರವಕ್ತರಿಗೆ ಪೂರ್ತಿ ವಿರುದ್ಧವಾಗಿ ಹಿಂದೂಗಳು ತಯಾರಾಗುತ್ತಾರೆ. ತಮ್ಮ ಮತವನ್ನು ಹಿಂದೂಗಳು ಅವಹೇಳನಮಾಡುತ್ತಿದ್ದಾರೆಂದು ಹಿಂದೂಗಳ ಪ್ರವಕ್ತನಾದ ನನ್ನ ಬಗ್ಗೆ ಕ್ರೈಸ್ತಮತದವರು ಅಸೂಯೆಯಿಂದ ವಿರುದ್ಧವಾಗಿ ಮಾತನಾಡುತ್ತಾರೆ. ನಮ್ಮ ದೇವರು ಹೆಚ್ಚು, ನಿಮ್ಮ ದೇವರು ಕಡಿಮೆ ಎಂದು ಹಿಂದೂಗಳು ಅಂದಾಗ, ನಮ್ಮ ದೇವರೇ ಹೆಚ್ಚು ಎಂದು ಕ್ರೈಸ್ತರು ಅನ್ನುತ್ತಾರೆ. ಕ್ರೈಸ್ತಮತ ಪ್ರವಕ್ತನಾದ ಯೇಸುನನ್ನು ನೋಡಿದರೂ, ಆತನ ಹೆಸರನ್ನು ಕೇಳಿದರೂ ಹಿಂದೂಗಳು ಕೆಲವರು ಹುರಿದುಬೀಳುತ್ತಾರೆ. ಹಾಗೆ ಹಿಂದೂಗಳ ದೇವರನ್ನು, ದೇವತೆಗಳನ್ನು ಕ್ರೈಸ್ತರು ಕಡಿಮೆ ಭಾವನೆಯಿಂದ ಮಾತನಾಡುತ್ತಾರೆ. ಹೀಗೆ ನಮ್ಮ ದೇವರು ಶ್ರೇಷ್ಠವಾದವನು ಎಂದು ಕ್ರೈಸ್ತರು ಅಂದರೆ, ಹಿಂದೂಸಂಘ

ದಲ್ಲಿನವರು ಕೆಲವರು ನಿಮ್ಮ ದೇವರು ದೇವರೇ ಅಲ್ಲವೆಂದು ಯೇಸುನನ್ನು ದೂಷಿಸುತ್ತಾರೆ. ಹಿಂದೂಗಳು ಕ್ರೈಸ್ತ ಪ್ರವಕ್ತನಾದ ಯೇಸುನನ್ನು ದೂಷಿಸಿದಂತೆಲ್ಲಾ, ಕ್ರೈಸ್ತರು ತಮ್ಮ ಬೈಬಲ್‌ನಲ್ಲಿನ ವಾಕ್ಯಗಳನ್ನು ಹೇಳುತ್ತಾ, ಅವರ ಮತಪ್ರಚಾರ ಮಾಡುತ್ತಾರೆ. ಜ್ಞಾನವನ್ನು ಬೋಧಿಸುತ್ತಾ ನಮ್ಮ ಮತದಲ್ಲಿ ರಕ್ಷಣೆ ಇದೆಯೆಂದು ಹೇಳುತ್ತಿರುವುದರಿಂದ, ದೇವತಾಭಕ್ತಿ ಹೊರತು ದೇವರ ಭಕ್ತಿ ಹಿಂದೂಮತದಲ್ಲಿ ಇಲ್ಲದಿರುವುದರಿಂದ ಬಹಳಜನ ಹಿಂದೂಗಳು ಕ್ರೈಸ್ತರಾಗಿ ಬದಲಾವಣೆ ಯಾಗುತ್ತಾರೆ. ಕೊನೆಗೆ ಹಿಂದೂಗಳು ತಮ್ಮ ಮತವನ್ನು ರಕ್ಷಿಸಿಕೊಳ್ಳುವ ಪ್ರಯತ್ನದಲ್ಲಿರುವಾಗ, ಕ್ರೈಸ್ತರು ತಮ್ಮ ಮತವನ್ನು ಬೆಳೆಸಿಕೊಳ್ಳುತ್ತಾರೆ. ಪರಮತ ವೆಂದು ಹಿಂದೂಗಳು ಕ್ರೈಸ್ತಮತವನ್ನು, ಅದರ ಪ್ರವಕ್ತನನ್ನು ದೂಷಿಸಿದಾಗ, ಕ್ರೈಸ್ತರು ಹಿಂದೂಮತ ಮಾಯೆ (ಸಾತಾನ್) ಮತವೆಂದು ಹಿಂದೂಮತವನ್ನು, ಹಿಂದೂಗಳ ದೇವರುಗಳನ್ನು ದೂಷಿಸುತ್ತಾರೆ. ಈ ವಿಧವಾಗಿ ಮತ ದ್ವೇಷಗಳು ಏರ್ಪಟ್ಟು, ಅದರಿಂದ ಭೂಮಿಮೇಲೆ ಮತ ಹಿಂಸೆಗಳು ಏರ್ಪಡುತ್ತವೆ. ಭೂಮಿಮೇಲೆ ಮತಗಳಿಗಾಗಿ ಯುದ್ಧಗಳೆ ಬರುತ್ತವೆ. ಇವುಗಳಿಗೆಲ್ಲ ಮನುಷ್ಯ ಆಚರಿಸುವಂತಹ ಧರ್ಮಗಳ್ಯಾವೊ, ಮನುಷ್ಯ ತಿಳಿದುಕೊಳ್ಳುವಂತಹ ಜ್ಞಾನವೇನೊ, ಮತಗಳ ಹೆಸರುಗಳು ಇಟ್ಟುಕೊಂಡ ಮನುಷ್ಯರಿಗೆ ತಿಳಿಯದಂತಿರುವುದು ಮುಖ್ಯ ಕಾರಣ. ಪ್ರತಿ ಮನುಷ್ಯ ಹುಟ್ಟಿದಾಗಿನಿಂದ ಯುಕ್ತವಯಸ್ಸಿನವರೆಗು ಬದುಕು ಬಾಳಿಗಾಗಿ ಓದಿಕೊಂಡು, ಅದರ ನಂತರ ಧನಾರ್ಜನೆಯಲ್ಲಿ ಬಿದ್ದು, ಉಳಿದ ಕಾಲದಲ್ಲಿ ಮತವನ್ನು ಮತಭಕ್ತಿಯನ್ನು, ಮತ ಪ್ರಚಾರವನ್ನು ಮಾಡುತ್ತಾ ನನ್ನ ಮತ ದೊಡ್ಡದು, ನನ್ನ ಮತ ದೊಡ್ಡದು ಎಂದು ದ್ವೇಷಗಳು ಬೆಳೆಸಿಕೊಳ್ಳುತ್ತಾರೆ. ಕ್ರೈಸ್ತರನ್ನು ನೋಡಿದರೆ ಹಿಂದೂಗಳು, ಹಿಂದೂಗಳನ್ನು ನೋಡಿದರೆ ಕ್ರೈಸ್ತರು ಒಬ್ಬರಿಗೊಬ್ಬರು ಅಜ್ಞಾನಿಗಳೆಂದುಕೊಳ್ಳುವ ಸ್ಥಿತಿ ಏರ್ಪಡುತ್ತದೆ. ಪ್ರತಿ ಮತದವನು ದೇವರ ಹೆಸರೇ ಹೇಳುತ್ತಾ, ದೇವರ ಹತ್ತಿರಕ್ಕೆ ಸೇರಬೇಕೆಂದು ಹೇಳಿದರೂ ಅವರವರ ಪ್ರವಕ್ತರು, ಅವರವರ ಮತಗಳು ಬೇರೆಬೇರೆ ಆಗಿರುವುದರಿಂದ ಅವರವರ ದೇವರು ಸಹ ಬೇರೆಬೇರೆಯೆಂದು ಹೇಳುವ ಕಾಲಬರುತ್ತದೆ.

ಈ ವಿಧವಾಗಿ ಭೂಮಿಮೇಲೆ ಕಲಿಯುಗದಲ್ಲಿ ಮತಗಳ ಹೆಸರಿನಿಂದ ಅಧರ್ಮಗಳು ಬೆಳೆದುಹೋಗುತ್ತವೆ. ಬೇರೆ ಮತಗಳು ಇಲ್ಲದ ದ್ವಾಪರಯುಗದಲ್ಲಿ ಒಂದು ಇಂದೂಗಳಿಗೆ ಸಂಬಂಧಿಸಿದ ಧರ್ಮಗಳನ್ನೇ ನಾನು ಹೇಳಿದ್ದೇನೆ. ನಾನು ಹೇಳಿದ ಧರ್ಮಗಳು ಸರ್ವಮಾನವರಿಗು, ಸರ್ವಮತಗಳಿಗು ಸಂಬಂಧಿಸಿರುವವೆಂದು ಯಾರಿಗೂ, ಯಾವ ಮತದವರಿಗೂ ತಿಳಿಯದಂತಿರುವು ದರಿಂದ, ಕ್ರೈಸ್ತರು ನಮ್ಮ ಜ್ಞಾನ, ನಮ್ಮ ಧರ್ಮಗಳು ಪ್ರತ್ಯೇಕವಾದವೆಂದು, ನಮ್ಮ ಪ್ರವಕ್ತ ಹೇಳಿರುವವು ಕೃಷ್ಣನು ಹೇಳಿರುವವು ಬೇರೆಯೆಂದು ತಿಳಿದು ಕೊಳ್ಳುತ್ತಾರೆ. ದ್ವಾಪರಯುಗದಲ್ಲಿ ಕೃಷ್ಣನು ಹೇಳಿದ ಧರ್ಮಗಳನ್ನೇ ತಮ್ಮ ಪ್ರವಕ್ತ ಹೇಳಿದ್ದಾನೆಂದು ಯಾರೂ ಗುರುತಿಸಲಾರರು, ಇಂದೂಧರ್ಮಗಳನ್ನು ದೇವರು ಹೇಳಿದ್ದಾನೆಂದು, ಇಂದೂ ಧರ್ಮಗಳು ಇಲ್ಲದ ಮತ ಭೂಮಿಮೇಲೆ ಇಲ್ಲವೆಂದು ಯಾರೂ ಗ್ರಹಿಸಲಾರರು, ಇಂದೂಧರ್ಮಗಳು ದೈವಜ್ಞಾನ ತಿಳಿಯಬೇಕೆಂದು ಕೊಳ್ಳುವ ಪ್ರತಿ ಮತಸ್ಥನಿಗು ಅವಶ್ಯವಾದವೆ, ಏಕೆಂದರೆ ಅವರ ಮತ ಗ್ರಂಥಗಳಲ್ಲಿ ಏನು ಹೇಳಿದ್ದಾರೊ ಅವುಗಳೇ ನಾನು ಹೇಳಿದ ಇಂದೂ ಧರ್ಮಗಳು, ಇಂದೂ ಎಂದರೇ ದೈವ ಜ್ಞಾನಿ ಎಂದು ತಿಳಿಯದ ಪ್ರತಿ ಮತ, ತಮ್ಮ ಮತಕ್ಕೆ ಪ್ರತ್ಯೇಕವಾದ ಹೆಸರುಗಳು ಇಟ್ಟುಕೊಳ್ಳುತ್ತಾರೆ. ಕೊನೆಗೆ ದೈವಜ್ಞಾನ (ಇಂದೂತ್ವ) ತಿಳಿಯದ ಇಂದೂಗಳು ಸಹ ತಮ್ಮದು ಸಹ ಒಂದು ಮತವೆಂದು, ಅದರ ಹೆಸರನ್ನು ಹಿಂದೂ ಮತವೆಂದು ಹೇಳಿಕೊಳ್ಳುತ್ತಾರೆ. ನಾನು ಹೇಳಿದ ಧರ್ಮಗಳನ್ನು ತಿಳಿಯದೆ ವೇದಗಳನ್ನು ಆಶ್ರಯಿಸಿ, ನಾವು ಹಿಂದೂಗಳು ಎಂದು ಕೆಲವರು ಹೇಳಿದರೇ, ಹಾಗೆಯೇ ನಾನು ಹೇಳಿದ ಧರ್ಮಗಳನ್ನೇ ತಮ್ಮ ಪ್ರವಕ್ತ ಹೇಳಿದ್ದಾನೆಂದು ತಿಳಿಯದೆ, ತಮ್ಮದು ಕ್ರೈಸ್ತ ಮತವೆಂದು ಕೆಲವರು ಹೇಳಿ ಕೊಳ್ಳುತ್ತಾರೆ. ನಾವು ಹೇಳಿದ ಧರ್ಮಗಳಲ್ಲಿ ಸಹ ಕೆಲವು ಅಧರ್ಮಗಳು ಬೆರೆತುಹೋಗಿ ಭಗವದ್ಗೀತೆಯಾಗಿ ನಿಮ್ಮ ಮುಂದೆ ನನ್ನ ಬೋಧನೆ ಇರುತ್ತದೆ. ನನ್ನ ಬೋಧನೆಯಾದ ಭಗವದ್ಗೀತೆಯಲ್ಲಿ ಸಹ ಅಧರ್ಮಗಳು ಬೆರೆತಿರುವು ದರಿಂದ, ಅವುಗಳನ್ನೇ ಕೆಲವರು ಹಿಂದೂಗಳು ಆಶ್ರಯಿಸಿ, ನಾನು ಹೇಳಿದ ಧರ್ಮಗಳನ್ನು ಅರ್ಥ ಮಾಡಿಕೊಳ್ಳಲಾರರು. ಆ ವಿಧವಾಗಿ ಭಗವದ್ಗೀತೆ ಯಾರಿಗೂ ಅರ್ಥವಾಗದೆ ಹೋಗುತ್ತದೆ.

ಜಗತ್ತಿನಲ್ಲಿ ಅತಿದೊಡ್ಡ ಮತವಾಗಿ ಕ್ರೈಸ್ತಮತ ಹೆಸರುವಾಸಿಯಾದರೂ, ಆ ಮತ ಪ್ರವಕ್ತ ಹೇಳಿದ ಬೈಬಲ್ ಗ್ರಂಥದಲ್ಲಿ ಸಹ ಅಧರ್ಮಗಳು ಬೆರೆತುಹೋಗಿ ಕ್ರೈಸ್ತರು ಸಹ ದೈವಜ್ಞಾನವನ್ನು (ಇಂದೂತ್ವವನ್ನು) ತಿಳಿಯಲಾರರು. ಬೈಬಲ್‌ನ್ನು ಓದಿದ ಪ್ರತಿ ಕ್ರೈಸ್ತನು, ಬೈಬಲ್‌ನ್ನು ಬೋಧಿಸಿದ ಪ್ರತಿ ಬೋಧಕನು, ಅದರಲ್ಲಿರುವ ನನ್ನ ಧರ್ಮಗಳನ್ನು ತಿಳಿಯಲಾರರು. ಆದ್ದರಿಂದ ಕ್ರೈಸ್ತ ಪ್ರವಕ್ತನಾದ ಯೇಸು ಪ್ರಜೆಗಳನ್ನುದ್ದೇಶಿಸಿ ಒಂದು ಮಾತು ಹೇಳಿ ಹೋಗುತ್ತಾನೆ. **ನಾನು ಹೇಳಿದ ಧರ್ಮಗಳು ನಿಮಗೀಗ ಅರ್ಥವಾಗುವುದಿಲ್ಲ. ನನ್ನ ನಂತರ ಸ್ವಲ್ಪಕಾಲಕ್ಕೆ ಒಬ್ಬ ವ್ಯಕ್ತಿ ಬಂದು ನಾನು ಹೇಳಿದ ನನ್ನ ಮಾತುಗಳನ್ನೇ ವಿವರವಾಗಿ ಹೇಳುತ್ತಾನೆ.** ಆಗ ನಾನು ಹೇಳಿದ ಮಾತುಗಳು ಅರ್ಥವಾಗುತ್ತವೆ ಎಂದು ಹೇಳುತ್ತಾನೆ. ಯಾವ ವ್ಯಕ್ತಿಯಾದರೆ ಬೈಬಲ್ ವಾಕ್ಯಗಳನ್ನು ವಿವರಿಸಿ ಹೇಳುತ್ತಾನೊ, ಅದೇ ವ್ಯಕ್ತಿ ಭಗವದ್ಗೀತೆಯಲ್ಲಿ ಶ್ಲೋಕರೂಪದಲ್ಲಿರುವ ನನ್ನ ಧರ್ಮಗಳನ್ನು ಸಹ ವಿವರಸಿ ಹೇಳುತ್ತಾನೆ. ಅಲ್ಲಿಯವರೆಗೂ ಭಗವದ್ಗೀತೆಯಾಗಲಿ, ಬೈಬಲ್ ಆಗಲಿ ಸರಿಯಾಗಿ ಯಾರಿಗೂ ಅರ್ಥವಾಗುವುದಿಲ್ಲ. ಇತ್ತ ಬೈಬಲ್‌ನ್ನು ಅತ್ತ ಭಗವದ್ಗೀತೆಯನ್ನು ಏಕ ಕಾಲದಲ್ಲಿ ಹೇಳುವವನೇ ಎರಡು ಗ್ರಂಥಗಳಲ್ಲಿನ ಧರ್ಮಗಳು ಒಂದೇಯೆಂದು, ಆ ಎರಡು ಗ್ರಂಥಗಳನ್ನು ಒಬ್ಬನೇ ಹೇಳಿದ್ದಾನೆಂದು ಸಂಚಲನ ಮಾತುಗಳನ್ನು ಹೇಳಿದ್ದಾನೆ. ಎರಡು ಗ್ರಂಥಗಳಲ್ಲಿ ದೇವರು ಹೇಳಿದ ಧರ್ಮಗಳೊಂದಿಗೆ, ಮನುಷ್ಯರು ಬರೆದ ಅಧರ್ಮಗಳು ಸಹ ಇವೆಯೆಂದು, ಅವುಗಳನ್ನು ಬಿಟ್ಟು ಧರ್ಮಗಳಿಗೆ ಮಾತ್ರವೆ ವಿವರವನ್ನು ಹೇಳುತ್ತಾನೆ. ಆ ವ್ಯಕ್ತಿ ಗುರುವಾಗಾಗಲಿ, ಸ್ವಾಮೀಜಿ ಯಾಗಾಗಲಿ ಚಲಾವಣೆ ಆಗುವುದಿಲ್ಲ. ಯಾವ ಆಧಾರವಿಲ್ಲದ ಆತನನ್ನು ಗುರುತಿಸುವುದು ಬಹಳಕಷ್ಟ" ಎಂದು ಕೃಷ್ಣನು ಬೇಡನಿಗೆ ಹೇಳಿದ್ದಾನೆ.

ಇಲ್ಲಿ ನಾವು ಆಲೋಚಿಸಬೇಕಾದ ವಿಷಯವೇನೆಂದರೆ ದೈವ ಧರ್ಮಗಳನ್ನು ಗೀತೆ ರೂಪದಲ್ಲಿ ಧನಸ್ಸು, ಬಾಣಗಳು ಧರಿಸಿದ ಅರ್ಜುನನಿಗೆ ಮಾತ್ರ ಹೇಳಿದ್ದಾನೆ. ಅಲ್ಲಿ ಕೃಷ್ಣನು ಅರ್ಜುನನು ಹೊರತು ಮೂರನೇ ವ್ಯಕ್ತಿ

ಇಲ್ಲ. ಮೇಲಾಗಿ ಅರ್ಜುನನು ಧರ್ಮಗಳನ್ನು ಕುರಿತು ಕೇಳಲೂ ಇಲ್ಲ. ದಾರಿಯಲ್ಲಿ ಹೋಗುವವನಿಗೆ ಕರೆದು ಮಗಳನ್ನು ಕೊಟ್ಟಂತೆ, ಧರ್ಮಗಳ ಮೇಲೆ ಧ್ಯಾಸವಿಲ್ಲದ ಅರ್ಜುನನಿಗೆ ಧರ್ಮಗಳನ್ನು ಕುರಿತು ಕೃಷ್ಣನು ಹೇಳಿದ್ದಾನೆ. ಹಾಗೆ ಕಲಿಯುಗದಲ್ಲಿ ನಡೆಯುವಂತಹ ಭವಿಷ್ಯತ್ತನ್ನು ಕುರಿತು, ಕ್ರೈಸ್ತ ಮತವನ್ನು ಕುರಿತು, ಹಿಂದೂಮತ ಕ್ಷೀಣಿಸಿ ಹೋಗುವುದನ್ನು ಕುರಿತು, ಧನಸ್ಸು ಬಾಣಗಳು ಧರಿಸಿರುವ ಬೇಡನಿಗೆ ಹೇಳಿದ್ದಾನೆ. ಅರ್ಜುನನಿಗೆ ಗೀತಾ ಜ್ಞಾನವನ್ನು ಹೇಳಿದಂತೆ, ಭವಿಷ್ಯತ್ತನ್ನು ಕುರಿತು ಕೇಳದಿದ್ದರೂ ಬೇಡನಿಗೆ (ಬೇಟೆಗಾರ) ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತನ್ನು ಕುರಿತು ಹೇಳಿದ್ದಾನೆ. ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತನ್ನು ಕುರಿತು ಹೇಳುವಾಗ ಅಲ್ಲಿ ಕೃಷ್ಣನು, ಬೇಡನು ಹೊರತು ಮೂರನೇ ವ್ಯಕ್ತಿ ಯಾರೂ ಇಲ್ಲ. ಯುದ್ಧರಂಗದಲ್ಲಿ ಗೀತೆಯನ್ನು ಹೇಳಿದಾಗ ಕೃಷ್ಣನು ಅರ್ಜುನನಿಗೆ ಹೇಳಿದಾಗ, ನಂತರ ಅರ್ಜುನನು ವ್ಯಾಸನಿಗೆ ಹೇಳುವುದರಿಂದ ಗೀತೆ ಅರ್ಜುನನ ಮುಖಾಂತರ ಹೊರಬಂದಿದೆ ಯೆಂದು ಹೇಳಬಹುದು. ಆದರೆ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತನ್ನು ಕೃಷ್ಣನು ಬೇಡನಿಗೆ ಹೇಳಿದಾಗ ಅಲ್ಲಿ ಮೂರನೇ ವ್ಯಕ್ತಿ ಇಲ್ಲ. ಹೇಳಿದ ಕೃಷ್ಣನು ತಕ್ಷಣ ಮರಣಿಸಿದ್ದಾನೆ. ಇನ್ನು ಬೇಡನು ಮಾತ್ರ ಉಳಿದಿದ್ದಾನೆ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತು ಒಬ್ಬ ಬೇಡನ ಮೂಖಾಂತರವೇ ಹೊರಗೆ ಬರಬೇಕು. ಆದರೆ ಬೇಡನು ಸಹ ತಾನು ಮಾಡಿದ ತಪ್ಪಿಗೆ ಆಗಲೇ ನಿರಾಹಾರದೀಕ್ಷೆ ಮಾಡಿ ಅಲ್ಲಿಯೇ ಕೃಷ್ಣನ ಮುಂದೆಯೇ ಮರಣಿಸಿದ್ದಾನೆಂದು ಬರೆದಿದ್ದಾರೆ. ಅಲ್ಲಿ ಪ್ರತ್ಯೇಕಿಸಿ ನಾನು ಕೇಳುವ ಪ್ರಶ್ನೆ ಏನೆಂದರೆ! ನಿನ್ನ ತಪ್ಪು ಏನು ಇಲ್ಲವೆಂದು, ಎಲ್ಲಾ ನನ್ನ ಕರ್ಮ ಪ್ರಕಾರವೆ ನಡೆದಿದೆಯೆಂದು ಕೃಷ್ಣನು ಬೇಡನೊಂದಿಗೆ ಹೇಳಿದರೂ, ಆತನು ಕೇಳದಂತೆ ನಾನು ಮಾಡಿದ ತಪ್ಪಿಗೆ ಶಿಕ್ಷೆ ಇರಬೇಕೆಂದು, ನಿರಾಹಾರದೀಕ್ಷೆ ಮಾಡಿ ತಕ್ಷಣ ಮರಣಿಸಿದ್ದಾನೆಂದು, ನಂತರ ಕೃಷ್ಣನ ರಥಸಾರಥಿಯಾದ ದಾರಕನು ಅಲ್ಲಿಗೆ ಬಂದಿದ್ದಾನೆಂದು ಬರೆದಿದ್ದಾರೆ. ನಿರಾಹಾರದೀಕ್ಷೆ ಮಾಡಿ ಒಬ್ಬ ಮನುಷ್ಯ ಮರಣಿಸಬೇಕೆಂದರೆ ಕನಿಷ್ಟ 40 ದಿನಗಳಾದರೂ ಹಿಡಿಯುತ್ತದೆ. ಅಂತದ್ದು ನಿರಾಹಾರದೀಕ್ಷೆ ಮಾಡಿ ನಿಮಿಷಕ್ಕೆ ಮರಣಿಸಿದ್ದಾನೆಂದು ಹೇಳುವುದು ಬಹಳ ಸುಳ್ಳು ಅಲ್ಲವೆ?

ಭಾಗವತದಲ್ಲಿ ಕೃಷ್ಣನನ್ನು ಬಾಣದಿಂದ ಬೇಡನು (ಬೇಟೆಗಾರ) ಹೊಡೆದಂತೆ ಬರೆದವರು, ನಡೆದ ಸಂಘಟನೆಯನ್ನು ನೋಡಿ ಕೃಷ್ಣನು ನಿವಾರಿಸಿದರೂ ಕೇಳದಂತೆ ನಿರಾಹಾರ ದೀಕ್ಷೆಯಿಂದ ಮರಣಿಸಿದ್ದಾನೆಂದು ಬರೆದಿದ್ದಾರೆ. ಕೃಷ್ಣನು, ಬೇಡನು ಹೊರತು ಅಲ್ಲಿ ಯಾರೂ ಇಲ್ಲದ ಸಮಯದಲ್ಲಿ ಏನು ನಡೆದಿದೆಯೊ, ಏನು ಮಾತನಾಡಿದ್ದಾರೊ ಯಾರಿಗೂ ತಿಳಿದಿಲ್ಲ. ನಿಜಕ್ಕೆ ಬೇಡನು ಮರಣಿಸಲಿಲ್ಲ. ಬೇಡನು ದುಃಖಪಟ್ಟಾಗ ಕೃಷ್ಣನು ಎಲ್ಲಾ ಕರ್ಮಪ್ರಕಾರವೇ ನಡೆದಿದೆಯೆಂದು ಸುದಾರಿಸಿದ ನಂತರ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತನ್ನು ಕುರಿತು ಕೃಷ್ಣನು ಬೇಡನಿಗೆ ಹೇಳಿ, ಈ ವಿಷಯವನ್ನು ನಾನು ನಿನಗೆ ಹೊರತು ಯಾರಿಗೂ ಹೇಳಲಿಲ್ಲ ಎಂದನು. ಕೃಷ್ಣನು ಹೇಳಿದ ಕೊನೆಯ ಸಂದೇಶವಾದ ಕಲಿಯುಗದಲ್ಲಿ ಆಧ್ಯಾತ್ಮಿಕ ಭವಿಷ್ಯತ್ತನ್ನು ಕೇಳಿದ ಬೇಡನು, ನಾನೆಷ್ಟು ಅದೃಷ್ಟವಂತನು ಎಂದು ಸಂತೋಷಪಟ್ಟಿದ್ದಾನೆ. ನನ್ನ ಜೀವನದ ಅಂತ್ಯ ಭಾಗದಲ್ಲಿ ನಾನು ಹೇಳುವ ದೊಡ್ಡ ರಹಸ್ಯ ಇದು. ಇದನ್ನು ನೀನು ಹೊರತು ಕೇಳದವನು ಯಾರೂ ಇಲ್ಲವೆಂದು ಕೃಷ್ಣನು ಹೇಳಿದ ಮಾತನ್ನು ಅನುಸರಿಸಿ ನಾನು ಉತ್ತಮನೆಂದು ಬೇಡನು ಅಂದುಕೊಂಡನು. ಯುದ್ಧರಂಗದಲ್ಲಿ ಕೃಷ್ಣನ ಮೂಲಕ ಗೀತೆಯನ್ನು ಕೇಳಿ, ಈ ರಹಸ್ಯ ನಿನಗೆ ಹೊರತು ಯಾರಿಗೂ ತಿಳಿಯದೆಂದು ಕೃಷ್ಣನು ಹೇಳಿದಾಗ, ಅರ್ಜುನನು ತನಗೆ ತಾನು ದೊಡ್ಡದಾಗಿ ಊಹಿಸಿಕೊಂಡಂತೆ ಕೃಷ್ಣನು ಹೇಳಿದ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತು, ದೈವಜ್ಞಾನ ರಹಸ್ಯವನ್ನು ಕೇಳಿದ ಬೇಡನು ಸಹ ಅರ್ಜುನನು ಅಂದುಕೊಂಡಂತೆ ಅಂದುಕೊಂಡಿದ್ದಾನೆ. ಆ ಕಾಲದಲ್ಲಿ ಯುದ್ಧ ಮುಗಿದುಹೋದ ನಂತರ ಅರ್ಜುನನು ವ್ಯಾಸನಿಗೆ ಹೇಳಿದಾಗ, ಅದು ವ್ಯಾಸನ ಮುಖಾಂತರ ಎಲ್ಲರಿಗೂ ತಿಳಿದಿದೆ. ಕೃಷ್ಣನು ಹೇಳಿದ ಗೀತೆಯನ್ನು ಅರ್ಜುನನು ವ್ಯಾಸನಿಗೆ ಹೇಳಿದಂತೆ, ಭಾರತದಲ್ಲಾಗಲಿ, ಭಾಗವತದಲ್ಲಾಗಲಿ ಬರೆಯಲಿಲ್ಲ. ಅದರೂ ಹೀಗೆ ನಡೆದಿದೆಂದು, ಅರ್ಜುನನೇ ಸ್ವತಃವಾಗಿ ವ್ಯಾಸನಿಗೆ ಹೇಳಿದ್ದಾನೆಂದು ನಾವು ಹೇಳಿದ್ದೇವೆ. ಇಲ್ಲಿ ಬೇಡನಿಗೆ ಕೃಷ್ಣನು ಹೇಳಿದ ವಿಷಯ ಸಹ ಭಾರತ, ಭಾಗವತಗಳಲ್ಲಿ ಬರೆಯಲಿಲ್ಲ. ಅದರೂ ಈ ವಿಧವಾಗಿ ನಡೆದಿದೆಯೆಂದು ನಾವು ಹೇಳುತ್ತಿದ್ದೇವೆ. ಈ ನನ್ನ ಮಾತು

ಕೇಳಿದ ಕೆಲವರು ಪಂಡಿತರು, ಕವಿಗಳು ಈತನು ಯಾರು? ಸ್ವತಃವಾಗಿ ಹೀಗೇ ನಡೆದಿದೆಂದು ಹೇಳುವುದಕ್ಕೆ? ಎಂದು ಕೇಳಬಹುದು. ಇದಕ್ಕೆ ಉತ್ತರವನ್ನು ನಂತರ ಹೇಳುತ್ತೇನೆ, ಆದರೆ ಈ ಪ್ರಶ್ನೆಯಲ್ಲಿ ಈತನು ಯಾರು ಎನ್ನುವ ಪ್ರಶ್ನೆ ನನಗೆ ತುಂಬಾ ಇಷ್ಟವಾಯಿತು.

ನಾನು ಸತ್ಯವನ್ನು ಹೇಳಿದರೆ ವಿಶ್ವಾಸಿಸದವರು ನಿರಾಹಾರದೀಕ್ಷೆಯಿಂದ ಬೇಡನು ಮರಣಿಸಿದ್ದಾನೆ ಎಂದಾಗ, ನಿರಾಹಾರದೀಕ್ಷೆಗೆ ನಿಮಿಷಗಳಲ್ಲಿ ಯಾರೂ ಮರಣಿಸುವುದಿಲ್ಲ ಅಲ್ಲವೆ! ಎಂದು ಏಕೆ ಕೇಳದಂತಿದ್ದೀರ? ಕೃಷ್ಣನು ರಕ್ತಸ್ರಾವದಿಂದ ಮರಣಿಸಿದ್ದಾನೆಂದು ಸತ್ಯವನ್ನು ನಾವು ಹೇಳಿದರೆ ನಂಬಲಾರದವರು, ಕೃಷ್ಣನು ರಥವನ್ನೇರಿ ವೈಕುಂಠಕ್ಕೆ ಹೋಗಿದ್ದಾನೆಂದು ಭಾಗವತದಲ್ಲಿ ಬರೆದ ಮಾತನ್ನು ಹೇಗೆ ನಂಬಿದ್ದೀರೆಂದು ಕೇಳುತ್ತಿದ್ದೇವೆ. ನಿರಾಹಾರದೀಕ್ಷೆಯಿಂದ ನಿಮಿಷಗಳ ಅವಧಿಯಲ್ಲಿ ಮರಣಿಸಿದ್ದಾನೆನ್ನುವ ಮಾತಾಗಲಿ, ಕೃಷ್ಣನು ರಥದ ಮೇಲೆ ವೈಕುಂಠಕ್ಕೆ ಹೋಗಿದ್ದಾನೆನ್ನುವುದಾಗಲಿ ಪೂರ್ತಿ ಅಶಾಸ್ತ್ರೀಯ, ಅಸತ್ಯ. ಕಲ್ಪಿತ ಪುರಾಣಗಳನ್ನು ಕುರುಡರಂತೆ ನಂಬುವವರು ಆಧಾರಪೂರಿತ ವಿಷಯಗಳನ್ನು ಏಕೆ ನಂಬುವು ದಿಲ್ಲವೆಂದು ನಾವು ಕೇಳುತ್ತಿದ್ದೇವೆ. ಕೃಷ್ಣನು ಬೇಡನಿಗೆ ಇನ್ನು ಕೆಲವು ವಿಷಯಗಳನ್ನು ಹೇಳಿದ್ದಾನೆ. ಆ ವಿಷಯಗಳನ್ನು ಕ್ರೈಸ್ತ, ಹಿಂದೂಮತಗಳಿಗೆ ಎರಡಕ್ಕು ಕಣ್ತೆರೆಸುವಂತಹ ವಿಷಯಗಳಾಗಿ ಇವೆ. ಕೃಷ್ಣನು ದೇವರ ಧರ್ಮಗಳನ್ನು ತಿಳಿಪಡಿಸುವುದಕ್ಕೆ ಅವತರಿಸಿ ಬಂದಿದ್ದಾನೆ. ದ್ವಾಪರಯುಗ ಅಂತ್ಯದಲ್ಲಿ ದೈವ ಧರ್ಮಗಳನ್ನು ಭಾರತದೇಶದಲ್ಲಿ ತಿಳಿಸಿದ್ದಾನೆ. ಹಾಗೆಯೇ ಕಲಿಯುಗ ಪ್ರಥಮಾಂಕ ದಲ್ಲಿಯೇ ಬಂದು ಮತ್ತೊಂದು ಸಲ ಧರ್ಮಗಳನ್ನು ಇತರ ದೇಶದಲ್ಲಿ ತಿಳಿಸುತ್ತೇ ನೆಂದು ಹೇಳಿದ್ದಾನೆ. ಇಸ್ರಾಯೇಲ್ ದೇಶದಲ್ಲಿ ಯೇಸುವಾಗಿ ಅವತರಿಸಿ ಧರ್ಮ ಗಳನ್ನು ಹೇಳಿಹೋಗುತ್ತೇನೆಂದು, ಅವಶ್ಯಕತೆ ಅನುಗುಣವಾಗಿ ನಂತರ ಸಹ ಬರುತ್ತೇನೆಂದು ಹೇಳಿದ್ದಾನೆ. ಬೇಡನನ್ನು ಅಡ್ಡ ಇಟ್ಟುಕೊಂಡು ಹೇಳಿದ ಮಾತುಗಳು ಈದಿನಕ್ಕು ಸತ್ಯವಾದವಾಗಿ ಕಾಣಿಸುತ್ತಿವೆ. ಇನ್ನು ಆತನು ಹೇಳಿದ ಮಾತುಗಳು ಹೀಗೆ ಇವೆ. ಕೃಷ್ಣನಾಗಿ ಬಂದ ನಾನು ಕಲಿಯುಗ ಪ್ರಥಮಾಂಕ

ದಲ್ಲಿಯೇ ಯೇಸುವಾಗಿ ಬರುತ್ತೇನೆ. ಹಾಗೆ ಬಂದಿರುವ ನನ್ನನ್ನು ಯಾರೂ ಗುರುತಿಸಲಾರರು. ಈಗ ಹೇಳಿದ ಗೀತೆಯಾಗಲಿ, ಆಗ ಹೇಳುವ ವಾರ್ತೆಯಾಗಲಿ ಎರಡು ನನ್ನ ಧರ್ಮಗಳನ್ನೇ ತಿಳಿಸುತ್ತವೆ. ಎಲ್ಲಿ ಯಾವ ವಾಕ್ಯಬೇಧವು ಹೊಂದಿರುವುದಿಲ್ಲ. ನಾನೇ ಯೇಸು, ಯೇಸುವೇ ನಾನು ಆದರೂ ಶರೀರಗಳು, ಹೆಸರುಗಳು ಬೇರೆಯಾದರೂ ಇಬ್ಬರೂ ಒಬ್ಬರೇ ಎಂದು ಯಾರಿಗೂ ತಿಳಿಯುವುದಿಲ್ಲ. ನನ್ನ ಬೋಧನೆ, ಯೇಸು ಬೋಧನೆ ಎರಡೂ ಒಂದೇ ಆದರೂ, ಗ್ರಂಥಗಳು ಅವುಗಳ ಹೆಸರುಗಳು ಬೇರೆಬೇರೆಯಾದರೂ, ಎರಡೂ ಒಂದೇಯೆಂದು ಯಾರೂ ಗುರುತಿಸಲಾರರು. ಅಷ್ಟೇ ಅಲ್ಲದೆ ನಾನು ಹೇಳಿದ ಗೀತೆ, ಯೇಸು ಹೇಳಿದ ನಾಲ್ಕು ಸುವಾರ್ತೆಗಳು ಪುನಃ ವಿವರವಾಗಿ ಮತ್ತೊಬ್ಬ ವ್ಯಕ್ತಿ ಹೇಳುವವರೆಗು ಯಾರಿಗೂ ಅರ್ಥವಾಗುವುದಿಲ್ಲ. ಆ ವ್ಯಕ್ತಿಯನ್ನು ಕುರಿತು ಯೇಸು ಹೇಳಿದ ವಾರ್ತೆಗಳಲ್ಲಿ ಆದರಣಕರ್ತ ಎಂದು ಬರೆಯಲ್ಪಡುತ್ತದೆ. ಯೇಸು ಹೇಳಿದ "ಆದರಣಕರ್ತ" ಎನ್ನುವ ಹೆಸರಿನಲ್ಲಿನ ಮೊದಲ ಅಕ್ಷರ, ಕೊನೆಯ ಅಕ್ಷರ ಎರಡು ಅಕ್ಷರಗಳು ಮೊದಲನೆಯದು ಮೊದಲಿನಲ್ಲಿಯು, ಕೊನೆಯದು ಕೊನೆಯಲ್ಲಿಯು ಇರುವ ಹೆಸರು ಆತನಿಗಿರುತ್ತದೆ. ಆ...ರ್ತ ಎನ್ನುವ ಎರಡಕ್ಷರಗಳ ಹೆಸರು ಹೊಂದಿರುವವನೆ ನಾನು ಹೇಳಿದ ಬೋಧನೆಯನ್ನೂ, ಹಾಗೆ ಯೇಸು ಹೇಳಿದ ಸುವಾರ್ತೆಗಳನ್ನೂ ಏಕ ಕಾಲದಲ್ಲಿ ವಿವರಿಸಿ ಹೇಳುತ್ತಾನೆ. ಹಾಗೆ ಹೇಳುವವನೇ ಕಾಲಜ್ಞಾನವನ್ನು ಹೇಳುವ ವೀರಬ್ರಹ್ಮಯ್ಯನವರಿಗೂ, ಸಮಸ್ತ ಮಾನವರಿಗೂ ಗುರುವಾಗುತ್ತಾನೆ.

ಯೇಸುಪ್ರಭುವನ್ನು ವಿಶ್ವಾಸಿಸಿದವನು ನನ್ನನ್ನು (ಕೃಷ್ಣನನ್ನು) ವಿಶ್ವಾಸಿಸುವುದಿಲ್ಲ. ಹಾಗೆಯೇ ಗೀತೆಯನ್ನು ಓದಿದವನು ಯೇಸುನನ್ನು ವಿಶ್ವಾಸಿಸುವುದಿಲ್ಲ. ಇತ್ತ ನಾನು ಅತ್ತ ಯೇಸು ಉತ್ತರ ದಕ್ಷಿಣ ಧೃವಗಳಂತೆ ಕಾಣಿಸುತ್ತಿರುವುದರಿಂದ ಹಿಂದೂಗಳು ಕ್ರೈಸ್ತರನ್ನು, ಕ್ರೈಸ್ತರು ಹಿಂದೂಗಳನ್ನು ಅಸಹಿಸಿಕೊಳ್ಳುವ ಸ್ಥಿತಿಯಲ್ಲಿ ಇರುತ್ತಾರೆ. ಆ ಸಮಯದಲ್ಲಿ ಯೇಸು ಹೇಳಿದ ಆದರಣಕರ್ತ ಹೊರತು ಯಾರೂ ಎರಡು ಮತಗಳಿಗೆ ಸಮಾಧಾನಗಳು ಹೇಳಲಾರರು. ಹಾಗೆಯೇ ಸಮನ್ವಯಪಡಿಸಲಾರರು. ಕ್ರೈಸ್ತರಲ್ಲಿ ಆದರಣಕರ್ತ,

ಹಿಂದೂಗಳಲ್ಲಿ ಆ...ರ್ತ ಅದವನು ಒಬ್ಬನೇ. ಆ ಒಬ್ಬನೇ ಎರಡು ಮತಗಳಲ್ಲಿನ ಯೇಸು ಹೇಳಿದ ವಾಕ್ಯಗಳಿಗು, ನಾನು ಹೇಳಿದ ಗೀತೆಗು ಸರಿಯಾದ ಭಾವನೆಯನ್ನು ಹೇಳಿ, ಎರಡು ಬೋಧನೆಗಳನ್ನು ಒಂದಾಗಿಯೇ ತೋರಿಸುತ್ತಾನೆ. ಎರಡು ಮತಗಳಲ್ಲಿ ಹೇಳಿದ ನನ್ನನ್ನು, ಯೇಸುನನ್ನು ಒಬ್ಬನಾಗಿಯೇ ತೋರಿಸುತ್ತದೆ. ನಾನು ಮೂರುಸಾವಿರ ವರ್ಷಗಳ ನಂತರ ಹುಟ್ಟಿ, ಈ ಜನ್ಮದಲ್ಲಿ ಹೇಳಿರುವುದು ಪುನಃ ಆಗ ಹೇಳುತ್ತೇನೆ. ಹಾಗೆ ಹೇಳಿದ ನಾನೇ, ಯೇಸು ಹೆಸರಿನಿಂದ ಸ್ವಲ್ಪಕಾಲವಿದ್ದು ಹೋಗುತ್ತೇನೆ. ನಂತರ ಸ್ವಲ್ಪ ಕಾಲಕ್ಕೆ ಬಂದವನಾಗಿ ಎರಡು ಜನ್ಮಗಳಲ್ಲಿ ಇರುವುದು ನಾನೇಯೆಂದು, ಹೇಳಿರುವುದು ನಾನೇಯೆಂದು ತಿಳಿಸುವನು. ಹಾಗೆ ಹೇಳುವುದರಿಂದ ಆತನು ಇತ್ತ ಹಿಂದುಗಳಿಗೂ, ಅತ್ತ ಕ್ರೈಸ್ತರಿಗು ವಿರೋಧಿಯಾಗಿ ಕಾಣಿಸುತ್ತಾನೆ. ಸಮಾಜದಲ್ಲಿ ಎಷ್ಟು ವಿರುದ್ಧತೆ ಬಂದರೂ ನನ್ನ ಕೆಲಸ ಇದೇ ಎನ್ನುವಂತೆ ಆತನು ಮಾತ್ರ ಯಾರಿಗೂ ಹೆದರದೆ ತಾನು ಹೇಳಬೇಕಾಗಿರುವುದನ್ನೆಲ್ಲಾ ಹೇಳಿಹೋಗುತ್ತಾನೆ. ಎರಡು ಬೋಧನೆಗಳನ್ನು ವಿವರಿಸಿ ಹೇಳುವವನು ಪ್ರತ್ಯೇಕಿಸಿ ಎರಡು ಮತಗಳಲ್ಲಿ ಇತ್ತ ನಾನು, ಅತ್ತ ಯೇಸು ಹೇಳದೆ ಬಿಟ್ಟಿರುವ ಬೋಧನೆಗಳನ್ನು ತಿಳಿಸುತ್ತಾನೆ. ಅಷ್ಟೇ ಅಲ್ಲದೆ ಆದಿಯಿಂದ ತಿಳಿಯದ ಆಧ್ಯಾತ್ಮಿಕ ರಹಸ್ಯಗಳನ್ನು ತಿಳಿಸಿ, ಆತನ ಪ್ರತ್ಯೇಕತೆ ಏನೋ ಇತರರಿಗೆ ಅರ್ಥವಾಗುವಂತೆ ಮಾಡಿದರೂ, ಆತನನ್ನು ಯಾರೂ ಗುರುತಿಸಲಾರರು. ಮಾನವನಿಗೆ ಬೇಕಾದ ಜ್ಞಾನವನ್ನು ನಾನು ಒಂದು ವಿಧಾನದಿಂದ ಹೇಳಿದಾಗ, ಯೇಸು ಅದನ್ನೇ ಮತ್ತೊಂದು ವಿಧವಾಗಿ ಹೇಳಿದಾಗ, ಎರಡೂ ಒಂದೇಯೆಂದು ಹೇಳುವ ಆದರಣಕರ್ತ, ಎರಡನ್ನೂ ವಿವರಿಸಿ ಹೇಳುತ್ತಾ, ಎರಡರಲ್ಲಿ ಇರುವುದನ್ನೇ ತನ್ನ ವಿಧಾನದಿಂದ ಹೇಳಿ ಪೂರ್ಣ ಮಾಡುತ್ತಾನೆ." ಎಂದು ಹೇಳಿದ್ದಾನೆ. ಕೃಷ್ಣನು ಹೇಳಿದ ವಿಧಾನವನ್ನು ನೋಡಿದರೆ ಬರುವ ಮೂರನೆಯವನು ಹೇಗಿರುತ್ತಾನೋ ಸ್ವಲ್ಪ ಅರ್ಥವಾಗುತ್ತದೆ.

ಮನುಷ್ಯ ಬದುಕುವುದಕ್ಕೆ ಆಹಾರ ತಿನ್ನಬೇಕು. ಆಹಾರದಲ್ಲಿ ನಾವು ಅನ್ನವನ್ನು ತಿನ್ನುತ್ತಿದ್ದೇವೆ. ಅನ್ನ ಒಂದನ್ನೇ ತಿಂದರು ಹಸಿವು ತೀರುತ್ತದೆ.

ಆದರೆ ಅನ್ನದೊಳಗೆ ಸಾರನ್ನು ಬೆರೆಸಿಕೊಂಡು ತಿಂದರೆ ರುಚಿಯಾಗಿರುತ್ತದೆ. ಅನ್ನದೊಳಗೆ ಸಾರನ್ನು ಬೆರೆಸಿಕೊಂಡು ತಿಂದು ಹಸಿವು ತೀರಿಸಿಕೊಳ್ಳುವವರು ಬಹಳಜನ ಇದ್ದರೂ, ಸ್ವಲ್ಪಜನ ಅನ್ನವನ್ನು ಸಾರಿನಿಂದ ತಿಂದ ನಂತರ ಕೊನೆಯಲ್ಲಿ ಮಜ್ಜಿಗೆಯಿಂದ ತಿನ್ನುತ್ತಾರೆ. ಹಾಗೆ ಮಜ್ಜಿಗೆಯಿಂದ ತಿಂದರೆ ಪೂರ್ತಿ ತೃಪ್ತಿಯಾದಂತಾಗುತ್ತದೆ. ಈ ವಿಧವಾಗಿ ಆಹಾರವನ್ನು ಮೂರು ಭಾಗಗಳಾಗಿ ಹೇಳಿಕೊಳ್ಳಬಹುದು. ಒಂದು ಅನ್ನ, ಎರಡು ಸಾರು, ಮೂರು ಮಜ್ಜಿಗೆ, ಈ ಮೂರನ್ನು ಸಂಪೂರ್ಣವಾದ ಆಹಾರವೆಂದು ಹೇಳಬಹುದು. ಅನ್ನವನ್ನು, ಸಾರನ್ನು, ಮಜ್ಜಿಗೆಯನ್ನು ಮೂರನ್ನು ತಿಂದವನು ಸಂಪೂರ್ಣ ಆರೋಗ್ಯದಿಂದ ಇರುತ್ತಾನೆ. ಮೂರು ಆಹಾರ ಭಾಗಗಳಲ್ಲಿಯೂ ಪೋಷಕ ಪದಾರ್ಥಗಳು ಸಂಪೂರ್ಣವಾಗಿ ಇರುವುದರಿಂದ ಮೂರು ಭಾಗಗಳ ಆಹಾರವನ್ನು ತಿಂದವನು ಶರೀರದಲ್ಲಿ ತೃಪ್ತಿಯಾಗಿ ಆರೋಗ್ಯದಿಂದ ಜೀವಿಸುತ್ತಾನೆ. ಅನ್ನ, ಸಾರು, ಮಜ್ಜಿಗೆಯನ್ನು ಕುರಿತು ಈಗ ಹೇಳಿಕೊಳ್ಳಬೇಕಾದ ಅವಶ್ಯಕತೆಯೇನು ಬಂದಿದೆ ಯೆಂದು ಕೆಲವರಂದುಕೊಳ್ಳಬಹುದು. ಇದನ್ನು ಉಪಮಾನವಾಗಿ ಹೇಳುತ್ತಿದ್ದೇವೆ. ದ್ವಾಪರಯುಗದಲ್ಲಿ ಕೃಷ್ಣನು ಗೀತೆಯನ್ನು ಹೇಳಿದ್ದಾನೆ. ಗೀತೆಯನ್ನು ಆಧಾರ ಮಾಡಿಕೊಂಡು ಮುಂದಕ್ಕೆ ಹೋಗುವವರಿದ್ದರೂ, ಕಲಿಯುಗದಲ್ಲಿ ಯೇಸು ಸಹ ಜ್ಞಾನವನ್ನು ಹೇಳಿದ್ದಾನೆ. ಯೇಸು ಹೇಳಿದ ಜ್ಞಾನವನ್ನು ಆಧಾರ ಮಾಡಿಕೊಂಡು ಹೋಗುವವರು ಸಹ ಎಷ್ಟೋ ಜನ ಇದ್ದಾರೆ. ಈ ಎರಡು ಜ್ಞಾನಗಳನ್ನು ಆಹಾರದಲ್ಲಿನ ಎರಡು ಭಾಗಗಳಾಗಿ ಹೋಲಿಸಿ ನೋಡಿಕೊಳ್ಳೋಣ. ಕೃಷ್ಣನು ಹೇಳಿದ ಗೀತಾ ಜ್ಞಾನವನ್ನು ಆಹಾರದಲ್ಲಿ ಒಂದನೆಯದಾದ ಅನ್ನವಾಗಿ ಹೋಲಿಸಿಕೊಳ್ಳೋಣ. ಅನ್ನ ಆಹಾರದಲ್ಲಿ ಮುಡಿಪದಾರ್ಥವಂತಹದು. ಅನ್ನ ಒಂದೇ ಬಣ್ಣಹೊಂದಿ, ಒಂದೇ ರುಚಿ ಹೊಂದಿರುತ್ತದೆ. ಅನ್ನ ಒಂದನ್ನೇ ಹೊಟ್ಟೆ ತುಂಬಾ ತಿನ್ನಬಹುದು. ಹಾಗೆ ಒಂದು ಅನ್ನವನ್ನು ಹೊಟ್ಟೆತುಂಬಾ ತಿಂದರೂ ಮನುಷ್ಯ ಬದುಕಬಹುದು. ಆದರೆ ತಿನ್ನುವ ಆಹಾರ ರುಚಿಯಾಗಿ ಇರುವುದಕ್ಕೆ, ದೇವರು ಕೃಷ್ಣನನ್ನು ಕಳಿಸಿ ಗೀತಾಜ್ಞಾನವನ್ನು ಹೇಳಿಸಿದಂತೆ, ಯೇಸುನನ್ನು ಕಳಿಸಿ ವಾರ್ತಾ ಜ್ಞಾನವನ್ನು ಹೇಳಿಸುತ್ತಾನೆ. ಯೇಸು ಹೇಳಿದ

ವಾರ್ತಾ ಜ್ಞಾನ ಅನ್ನದೊಂದಿಗೂ ಸಹ ಅನ್ನವನ್ನು ಕಲಿಸಿಕೊಂಡು ತಿನ್ನುವ ಸಾರಿನಂತಹದು. ಅನ್ನದ ರುಚಿಬೇರೆ, ಸಾರಿನ ರುಚಿಬೇರೆಯಾದರೂ ಎರಡೂ ಮನುಷ್ಯನಿಗೆ ಅಗತ್ಯವಾದ ಆಹಾರಪದಾರ್ಥಗಳೆ. ಯೇಸು ಹೇಳಿದ ಜ್ಞಾನವನ್ನು ಮತ್ತು ಕೃಷ್ಣನು ಹೇಳಿದ ಜ್ಞಾನವನ್ನು ಅರ್ಥ ಮಾಡಿಕೊಂಡರೆ, ಅನ್ನವನ್ನು ಬಡಿಸಿದ ವ್ಯಕ್ತಿ, ಸಾರನ್ನು ಬಡಿಸಿದ ವ್ಯಕ್ತಿ ಬೇರೆ ಬೇರೆಯಾದರೂ, ಅನ್ನ ಸಾರು ಬೇರೆಬೇರೆಯಾದರೂ ಎರಡೂ ತಿನ್ನುವ ಪದಾರ್ಥಗಳೇಯೆಂದು ತಿಳಿದು ಕೊಂಡರೆ, ಎರಡು ಪದಾರ್ಥಗಳನ್ನು ಕಲಿಸಿಕೊಂಡು ತಿಂದವನು ಹೊಂದುವ ರುಚಿಯಂತೆ, ಗೀತಾ ಜ್ಞಾನವನ್ನು, ವಾರ್ತಾ ಜ್ಞಾನವನ್ನು ಎರಡನ್ನು ಸಮನ್ವಯವಾಗಿ ಅರ್ಥ ಮಾಡಿಕೊಂಡರೆ, ಎಷ್ಟೋ ಅಭಿರುಚಿ ತೃಪ್ತಿ ಏರ್ಪಡುತ್ತದೆ. ಹಾಗಲ್ಲದೆ ಅನ್ನ ಬೆಳ್ಳಗಿದೆ, ಸಾರು ಕಪ್ಪಗಿದೆ ಅದು ಬೇರೆ ಇದು ಬೇರೆ ನಾನು ಅನ್ನವನ್ನು ಒಂದನ್ನೇ ತಿನ್ನುತ್ತೇನೆಂದು, ಅನ್ನವನ್ನು ಮಾತ್ರ ತಿಂದರೂ ಹೊಟ್ಟೆ ತುಂಬುತ್ತದೆ. ಹಾಗೆ ಸಾರನ್ನು ಮಾತ್ರ ತಿನ್ನುತ್ತೇನೆಂದು ಸಾರನೊಂದನ್ನೇ ತಿಂದರೂ ಹೊಟ್ಟೆ ತುಂಬುತ್ತದೆ. ಹಾಗೆ ತಿನ್ನುವುದರಲ್ಲಿರುವ ರುಚಿ ಬೇರೆಯಾಗಿರುತ್ತದೆ. ಎರಡನ್ನು ಬೆರೆಸಿಕೊಂಡು ತಿನ್ನುವುದರಿಂದ ರುಚಿ ಬೇರೆಯಾಗಿದ್ದು ಚೆನ್ನಾಗಿರುತ್ತದೆ.

ಈಗ ಭೂಮಿಮೇಲೆ ನಾವು ಅನ್ನವನ್ನು ಮಾತ್ರ ತಿನ್ನುತ್ತೇವೆನ್ನುವಂತೆ ಕೃಷ್ಣನೊಂದರ ಗೀತಾ ಜ್ಞಾನವನ್ನು ಮಾತ್ರ ಓದಿದ ಹಿಂದೂಗಳೆನ್ನುವವರು ಕೆಲವರಿದ್ದಾರೆ. ಹಾಗೆಯೇ ನಾವು ಸಾರನ್ನು ಮಾತ್ರ ತಿನ್ನುತ್ತೇವೆನ್ನುವಂತೆ ಯೇಸುವೊಂದರ ವಾರ್ತಾ ಜ್ಞಾನವನ್ನು ಮಾತ್ರ ಓದಿದ ಕ್ರೈಸ್ತರೆನ್ನುವವರು ಎಷ್ಟೋ ಜನ ಇದ್ದಾರೆ. ಇಂತಹ ಸಮಯದಲ್ಲಿ ಅನ್ನ ಸಾರು ಎರಡರ ವಿಷಯ ತಿಳಿದ ಆದರಣಕರ್ತ ಬಂದು ಎರಡರ ವಿವರವನ್ನು ವಿವರಿಸಿ ಎರಡನ್ನು ಕಲಿಸಿಕೊಳ್ಳಿರೆನ್ನುವಂತೆ ಗೀತೆಯಲ್ಲಿನ ಜ್ಞಾನವನ್ನು, ವಾರ್ತೆಗಳಲ್ಲಿನ ಜ್ಞಾನವನ್ನು ವಿವರಿಸಿ ಹೇಳುತ್ತಾನೆ. ಅಲ್ಲಿಯವರೆಗೂ ಕೃಷ್ಣನು ಬೇರೆ, ಯೇಸು ಬೇರೆಯೆಂದು ಹಾಗೆಯೇ ಗೀತಾಜ್ಞಾನ ಬೇರೆ, ವಾರ್ತಾಜ್ಞಾನ ಬೇರೆಯೆಂದು ತಿಳಿದುಕೊಳ್ಳುತ್ತಾರೆ. ಭೂಮಿಮೇಲೆ ಕ್ರೈಸ್ತ ಪಾಸ್ಟರ್ ಫಾದರ್‌ಗಳೆನ್ನುವ ಬೋಧಕರಿಗು, ಹಿಂದೂ

ಗುರುಗಳೆನ್ನುವ ಬೋಧಕರಿಗು ವಿಭಿನ್ನವಾಗಿ ಅಲ್ಲಿಯವರೆಗೂ ಎರಡರಲ್ಲಿ ಯಾರಿಗೂ ತಿಳಿಯದ ವಿವರವನ್ನು ಆದರಣಕರ್ತ ಬೋಧಿಸಿದಾಗ, ವಿವರ ತಿಳಿದಿರುವುದಕ್ಕೆ ಕೆಲವರು ಮಾತ್ರ ಸಂತೋಷಿಸುತ್ತಾರೆ. ಬಹಳಜನ ಬೋಧಕರು ಆತನನ್ನು ವಿರೋಧಿಸುತ್ತಾರೆ. ಆತನ ಮೇಲೆ ದಾಳಿಗಳು ಸಹ ಮಾಡುತ್ತಾರೆ. ಅದರೂ ಆತನು ಯಾರಿಗೂ ಭಯಪಡದಂತೆ ತನ್ನ ಕೆಲಸವನ್ನು ತಾನು ಮಾಡುತ್ತಾನೆಂದು ಕೃಷ್ಣನು ಸಹ ಹೇಳಿದ್ದಾನೆ. ಎರಡಕ್ಕು ಸಮನ್ವಯಕರ್ತನಾದ ಆತನನ್ನು ಯೇಸು ಆದರಣಕರ್ತ ಎಂದು ಹೇಳಿದಾಗ, ಆತನ ಹುಟ್ಟು ಹಿಂದೂಮತದಲ್ಲಿ ಇರುವುದರಿಂದ ಮತ್ತು ಆತನು ಎರಡು ಮತಗಳಿಗೂ ಆದರ್ಶವಾಗಿ ಇರುವುದರಿಂದ, ಯೇಸು ಹೇಳಿದ ಆದರಣಕರ್ತ, ಹಿಂದೂಗಳಲ್ಲಿ "ಆದರ್ಶಕರ್ತ" ಎನ್ನುವ ಹೆಸರಿನಿಂದ ಚಲಾವಣೆ ಆಗುತ್ತಾನೆಂದು ಕೃಷ್ಣನು ಬೇಡನಿಗೆ ಹೇಳಿಹೋಗಿದ್ದಾನೆ. ಕೃಷ್ಣನು ಹೇಳಿದ ಆದರ್ಶಕರ್ತ, ಯೇಸು ಹೇಳಿದ ಆದರಣಕರ್ತ ಇಬ್ಬರೂ ಒಬ್ಬರೇಯೆಂದು ತಿಳಿದುಹೋಗಿದೆ. ಆದರಣಕರ್ತನಾದ ಆದರ್ಶಕರ್ತ ಎನ್ನುವ ಹೆಸರು ಯಾರಿಗಿದೆಯೋ ಹುಡುಕಿದರೆ ಆ ಹೆಸರನ್ನನು ಸರಿಸಿ ಸುಲಭವಾಗಿ ಮೂರನೇ ವ್ಯಕ್ತಿಯನ್ನು ಗುರುತಿಸುತ್ತೇವೆ. ಆ ಹೆಸರಿರುವವನು ಬಂದು ಹೋಗಿದ್ದಾನಾ, ಅಥವಾ ಬಂದಿದ್ದಾನಾ, ಅಥವಾ ಬರುವಂತಹ ಕಾಲದಲ್ಲಿ ಬರುತ್ತಾನಾ, ಎನ್ನುವ ವಿಷಯ ಮಾತ್ರ ಅರ್ಥವಾಗದ ವಿಷಯ.

ಆದರ್ಶಕರ್ತ ಎನ್ನುವ ಹೆಸರಿರುವವನು ಆದರಣಕರ್ತನಾಗಿ ಇತ್ತ ಯೇಸು, ಅತ್ತ ಕೃಷ್ಣನ ಜ್ಞಾನವನ್ನು ವಿವರಿಸಿ ಹೇಳುವುದಲ್ಲದೆ, ಇನ್ನೂ ಅರ್ಥವಾಗದೆ ಉಳಿದಿರುವ ಧರ್ಮಗಳನ್ನು ಅಂದರೆ ಇನ್ನೂ ತಿಳಿಯದಂತಿರುವ ಧರ್ಮಗಳನ್ನು ಹೊಸ ವಿಧಾನದಲ್ಲಿ ತಿಳಿಸಿ ಸಂಪೂರ್ಣಗೊಳಿಸುತ್ತಾನೆಂದು ಕೃಷ್ಣನು ಹೇಳಿಹೋಗಿದ್ದಾನೆ! ಆತನು ಪೂರ್ಣಮಾಡಿದ ಧರ್ಮಗಳನ್ನು ಹೇಗೆ ಹೋಲಿಸಬಹುದೊ ವಿವರಿಸಿಕೊಳ್ಳೋಣ. ಮನುಷ್ಯನಿಗೆ ಸಂತೃಪ್ತಿ ಕೊಡುವ ಪೂರ್ತಿ ಊಟ ಮೂರು ಭಾಗಗಳಾಗಿ ಇರುತ್ತದೆಂದು, ಆ ಮೂರು ಭಾಗಗಳನ್ನು ಅನ್ನ, ಸಾರು, ಮಜ್ಜಿಗೆ (ಮೊಸರು) ಎಂದು ಹೇಳಿಕೊಂಡಿದ್ದೇವೆ. ಅನ್ನವನ್ನು

ರುಚಿಕರವಾದ ಸಾರಿನಿಂದ ತಿಂದರೂ, ಕೊನೆಯಲ್ಲಿ ಮಜ್ಜಿಗೆಯಿಂದ ತಿಂದರೇನೆ ತೃಪ್ತಿಯಾಗಿರುತ್ತದೆ, ಸಂಪೂರ್ಣ ಊಟ ಆದಂತಿರುತ್ತದೆ. ಹಾಗೆ ಬರುವಂತಹ ಆದರ್ಶಕರ್ತ, ಕೃಷ್ಣನು ಗೀತೆಯನ್ನು ಹೇಳಿದಾಗ ಅದರಲ್ಲಿ ಸಹ ತಿಳಿಯದಿರುವುದು ಏನಾದರೆ ಇದೆಯೋ, ಹಾಗೆಯೇ ಯೇಸು ತನ್ನ ವಾರ್ತೆಯನ್ನು ಹೇಳಿದಾಗ ಅಲ್ಲಿಯೂ ಸಹ ತಿಳಿಯದಿರುವುದು ಏನಾದರೆ ಇದೆಯೋ, ಎರಡು ಕಡೆ ತಿಳಿಯದೆ ಉಳಿದಿರುವುದನ್ನು ಪೂರ್ತಿಯಾಗಿ ತಿಳಿಸುತ್ತಾನೆ. ದೇವರ ಧರ್ಮಗಳ ವಿಷಯದಲ್ಲಿ ಯಾರ ಹತ್ತಿರ ಪ್ರಶ್ನೆ ಎನ್ನುವುದಾಗಲಿ, ಸಂಶಯ ಎನ್ನುವುದಾಗಲಿ ಇಲ್ಲದಂತೆ ಮಾಡುತ್ತಾನೆ. ಇದರಿಂದ ಆದರ್ಶಕರ್ತ ಎನ್ನುವ ಹೆಸರಿನಿಂದ ಬಂದಿರುವವನು ನಾಸ್ತಿಕರ ಹತ್ತಿರವಾಗಲಿ, ಹೇತುವಾದಿಗಳ ಹತ್ತಿರವಾಗಲಿ ದೇವರ ಬಗ್ಗೆ ಕೇಳುವ ಪ್ರಶ್ನೆ ಇಲ್ಲದಂತೆ ಮಾಡುತ್ತಾನೆ. ಆದ್ದರಿಂದ ಆದರ್ಶಕರ್ತ ಇತ್ತ ನಾಸ್ತಿಕರಿಗೂ, ಅತ್ತ ಆಸ್ತಿಕರಿಗೂ ತಿಳಿಯದ ಜ್ಞಾನ ವಿಧಾನವನ್ನು ತಿಳಿಸುತ್ತಾನೆಂದು ಅರ್ಥವಾಗುತ್ತಿದೆ. ದ್ವಾಪರಯುಗದಲ್ಲಿ ಕೃಷ್ಣನು ಮರಣಿಸುತ್ತಾ ಹೇಳಿದ ಆದರ್ಶಕರ್ತ, ಕಲಿಯುಗದಲ್ಲಿ ಯೇಸು ಬೋಧಿಸುತ್ತಾ ಹೇಳಿದ ಆದರಣಕರ್ತ, ಎಷ್ಟೋ ದೊಡ್ಡ ಜ್ಞಾನಹೊಂದಿ ಕ್ರೈಸ್ತರಿಗು, ಹಿಂದೂಗಳಿಗು ಸರಿಹೋಗದವನಾಗಿ ಇರುತ್ತಾನೆ. ಆದರಣಕರ್ತ, ಆದರ್ಶಕರ್ತ ಆದವನು ಹೇಳಿದ ಬೋಧನೆಯನ್ನು ಗ್ರಹಿಸಿದ ಹಿಂದೂಗಳು, ಕ್ರೈಸ್ತರು ಆತನಲ್ಲಿಯೇ ಕೃಷ್ಣನನ್ನು, ಆತನಲ್ಲಿಯೇ ಯೇಸುನನ್ನು ನೋಡಿಕೊಳ್ಳುತ್ತಾರೆ. ನಾನು ಈಗ ಹೇಳಿದ ವಿಷಯಗಳು ಹಿಂದೂ ಮತ ಪ್ರಚಾರಕ್ಕಾಗಿಯೊ, ಅಥವಾ ಕ್ರೈಸ್ತ ಮತ ಪ್ರಚಾರಕ್ಕಾಗಿಯೊ ಅಲ್ಲ. ಎರಡು ಮತಗಳಿಗು ಅತೀತವಾದ ದೇವರನ್ನು ಕುರಿತು ತಿಳಿಸುವ ವಿಧಾನವೆಂದು ತಿಳಿಯಬೇಕು. ಅಷ್ಟೇ ಅಲ್ಲದೆ ಕೃಷ್ಣನು ಹೋಗುತ್ತಾ ಹೋಗುತ್ತಾ ಕೊನೆಯದಾಗಿ ಹೇಳಿದ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತಿನಲ್ಲಿ ಆದರ್ಶಕರ್ತ ಹೆಸರಿರುವುದು ವಿಶೇಷ. ಈ ದಿನ ಭೂಮಿಮೇಲಿರುವ ಜ್ಞಾನವನ್ನು ಕುರಿತು, ಅಜ್ಞಾನವನ್ನು ಕುರಿತು, ಹುಟ್ಟಿ ಬಂದ ಮತಗಳನ್ನು ಕುರಿತು ಕೃಷ್ಣನು ಆ ದಿನವೇ ಹೇಳಿದ್ದಾನೆ. ಇದೆಲ್ಲವೂ ಕೃಷ್ಣನು ಕೊನೆಯ ದಿನ ಹೇಳಿದ ಭವಿಷ್ಯತ್ತು ವಿವರವೆಂದು ತಿಳಿಯಬೇಕು.

ಈಗೊಂದು ಪ್ರಶ್ನೆ ಬಾರದೆ ಇರುವುದಿಲ್ಲ. ಅದೇನೆಂದರೆ! ಕೃಷ್ಣನು ಯುದ್ಧರಂಗದಲ್ಲಿ ಬೋಧನೆ ಹೇಳಿದಾಗ ಕೇಳಿದ ಅರ್ಜುನನು ನಂತರ ವ್ಯಾಸನಿಗೆ ಹೇಳಿದ್ದಾನೆಂದು, ವ್ಯಾಸನ ಮೂಲಕ ಎಲ್ಲರಿಗೂ ತಿಳಿದಿದೆಯೆಂದು ಹೇಳಿದ್ದೀರ. ಅದನ್ನು ಒಂದು ವಿಧವಾಗಿ ಸತ್ಯವೇಯೆಂದು ಒಪ್ಪಿಕೊಳ್ಳಬಹುದು. ಆದರೆ ಕೃಷ್ಣನು ಮರಣಿಸುವ ಕೊನೆಯ ಸಮಯದಲ್ಲಿ ಕಲಿಯುಗ ಆಧ್ಯಾತ್ಮಿಕವನ್ನು ಕುರಿತು ಹೇಳಿದ್ದಾನೆಂದು, ಅದನ್ನು ಬೇಡನು ಕೇಳಿದ್ದಾನೆಂದು ಹೇಳಿದ್ದೀರ. ಅಲ್ಲಿ ಯಾರೂ ಇಲ್ಲದ ಆ ಸಮಯದಲ್ಲಿ ಕೃಷ್ಣನು ಹೇಳಿದ ಸಮಾಚಾರವನ್ನು ಕೇಳಿದ ಬೇಡನು (ಬೇಟೆಗಾರ) ಆ ವಿಷಯವನ್ನು ನಂತರ ಯಾರಿಗೂ ಹೇಳಿದಂತೆ ಸುಳಿವು ಇಲ್ಲ. ಬೇಡನು ಹೇಳಿದಂತೆ ಎಲ್ಲಿಯೂ ಇಲ್ಲದಿರುವಾಗ ಅಲ್ಲಿ ನಡೆದ ವಿಷಯ ನಿಮಗೆ ಹೇಗೆ ತಿಳಿದಿದೆ? ನೀವು ಹೇಗೆ ಈ ವಿಷಯಗಳನ್ನೆಲ್ಲವನ್ನು ಹೇಳುತ್ತಿದ್ದೀರೆಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಅರ್ಜುನನು ಗೀತೆಯನ್ನು ವ್ಯಾಸನಿಗೆ ಹೇಳಿದಂತೆ ಸಹ ಭಾರತದಲ್ಲಾಗಲಿ, ಭಾಗವತದಲ್ಲಾಗಲಿ ಇಲ್ಲ. ಅಲ್ಲಿ ವ್ಯಾಸನು ಬಹಳ ತಿಳುವಳಿಕೆಯಿಂದ ಪ್ರವರ್ತಿಸಿ, ಅರ್ಜುನನು ಹೇಳಿರುವುದನ್ನು ತಿಳಿಯದಂತೆ ಮಾಡಿ, ಸಂಜಯನು ಧೃತರಾಷ್ಟ್ರನಿಗೆ ಹೇಳಿದಂತೆ ವರ್ಣಿಸಿದ್ದಾನೆ. ಹೇಗಾದರೇನು, ಕೊನೆಗೆ ಕೃಷ್ಣನು ಅರ್ಜುನನಿಗೆ ಹೇಳಿದ ವಿಷಯ ಹೊರಗೆ ಬಂದಿದೆ. ಆದರೆ ಇಲ್ಲಿ ಭಾಗವತದಲ್ಲಿ ಬಾಣದಿಂದ ಹೊಡೆದ ಬೇಡನ ಪಾತ್ರವನ್ನು ಸಾಯಿಸಿಬಿಟ್ಟು ಬೇಡನನ್ನು ಪೂರ್ತಿಯಾಗಿ ಇಲ್ಲದಂತೆ ಮಾಡಿದ್ದಾರೆ. ಆದ್ದರಿಂದ ಕೃಷ್ಣನು ಹೇಳಿದ ವಿಷಯ ಪ್ರಸ್ತಾವನೆಗೆ ಬರಲಿಲ್ಲ, ನಂತರ ಯಾರಿಗೂ ತಿಳಿಯದಂತೆ ಹೋಗಿದೆ. ಆ ಬೇಡನು ತನಗೆ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತು ತಿಳಿದರೂ, ಆ ವಿಷಯವನ್ನು ಯಾರಿಗೂ ಹೇಳಬೇಕೆಂದು ಕೊಳ್ಳಲಿಲ್ಲ. ತನಗೆ ಪರಿಚಯ ಇರುವವರೆಲ್ಲಾ ನಿತ್ಯ ಬೇಟೆಗೆ ಹೋಗಿ ಬದುಕುವವರೇ, ಆದ್ದರಿಂದ ಅವರಿಗೆ ಈ ವಿಷಯದ ಅವಶ್ಯಕತೆ ಇಲ್ಲ ಎಂದುಕೊಂಡಿದ್ದಾನೆ. ಯಾರಿಗಾದರೂ ಹೇಳಬೇಕೆಂದುಕೊಂಡರು ಇವನಿಗೆ ಹೇಳುವುದಕ್ಕೆ ಅವಕಾಶ ಸಿಗಲಿಲ್ಲ. ಈ ವಿಧವಾಗಿ ಆ ವಿಷಯ ಅವನೊಂದಿಗೆ ಇಲ್ಲದಂತೆಹೋಗಿದೆ. ಹಾಗೆ ಅವನು ಆ ಜನ್ಮದಲ್ಲಿ ಮರಣಿಸಿ ನಂತರ ಜನ್ಮದಲ್ಲಿ

ಹುಟ್ಟುತ್ತಾಬಂದು ಆಗಿನಿಂದ ಇಲ್ಲಿಯವರೆಗೂ ಎಷ್ಟೋ ಜನ್ಮಗಳು ಪಡೆದಿದ್ದಾನೆ. ಆ ರೀತಿಯಾಗಿ ಆ ಜೀವಿಯು ಜನ್ಮಿಸುತ್ತಾ, ಮರಣಿಸುತ್ತಾ ಎಷ್ಟೋ ಜನ್ಮಗಳನ್ನು ಧರಿಸಿದರೂ ಆತನ ಹಿಂದೆ ಆತ್ಮ ಬರುತ್ತಲೇ ಇರುತ್ತದೆ. ಆ ಜೀವಿಯು ಎಷ್ಟು ಜನ್ಮಗಳು ಬದಲಾದರು ಅವನೊಂದಿಗೆ ಶಾಶ್ವತವಾಗಿರುವ ಆತ್ಮ ಸಹ ಅವನ ಹಿಂದೆಯೇ ಇರುತ್ತಾ ಎಲ್ಲಾ ಜನ್ಮಗಳಿಗು ಸಾಕ್ಷಿಯಾಗಿರುತ್ತದೆ. ಹಿಂದಿನ ಜನ್ಮ ವಿಷಯವು ಸಹ ಜೀವಿಗೆ ತಿಳಿದಿಲ್ಲ. ಆದರೆ ಆದಿಯಿಂದ ಎಲ್ಲಾ ಜನ್ಮಗಳಿಗು ಸಾಕ್ಷಿಯಾಗಿರುವ ಆತ್ಮಕ್ಕೆ ಎಲ್ಲಾ ಜನ್ಮಗಳ ವಿಷಯಗಳು ತಿಳಿದಿರುತ್ತವೆ. ದ್ವಾಪರಯುಗ ಅಂತ್ಯದಲ್ಲಿ ಕೊನೆಯದಾಗಿ ಕೃಷ್ಣನು ಬೇಡನಿಗೆ ಹೇಳಿದ ವಿಷಯವೆಲ್ಲಾ ಆತನ ಆತ್ಮಕ್ಕೆ ತಿಳಿದಿರುತ್ತದೆ. ಆತನು ಈಗ ಪ್ರಸ್ತುತ ಜನ್ಮದಲ್ಲಿ ಒಂದು ರೋಗದಿಂದ ದುಃಖಪಡುತ್ತಾ ನನ್ನ ಹತ್ತಿರಕ್ಕೆ ಬರುವುದು ನಡೆದಿದೆ. ಆಗ ನಾನು ಆತನಿಗೆ ಕರ್ಮವನ್ನು ಉದಹರಿಸುವುದಕ್ಕೆ ದೈವಜ್ಞಾನವನ್ನು ಹೇಳುವ ಸಮಯದಲ್ಲಿ, ಆ ಜೀವಿಯು ನಿದ್ರಾವಸ್ಥೆಯೊಳಗೆ ಹೋಗಿ ಒಳಗಿರುವ ಆತ್ಮವೇ ಕೇಳುವುದಕ್ಕೆ ಮೊದಲುಮಾಡಿದೆ. ನಾನು ಕೃಷ್ಣನನ್ನು ಕುರಿತು ಆತನು ಹೇಳಿದ ಜ್ಞಾನವನ್ನು ಕುರಿತು ಹೇಳುವ ಸಮಯದಲ್ಲಿ, ಆತನಲ್ಲಿನ ಆತ್ಮ ಕೃಷ್ಣನ ಮರಣ ಸಮಯದಲ್ಲಿ ನಡೆದ ವೃತ್ತಾಂತವೆಲ್ಲವನ್ನು ಸವಿವರವಾಗಿ ನನಗೆ ಹೇಳಿದೆ. ಆದ್ದರಿಂದ ಅದನ್ನೇ ನಾನು ನಿಮಗೆ ಹೇಳಿದ್ದೇನೆ.

ಇದೇನೊ ಕಾಗಿ–ಗುಬ್ಬಚ್ಚಿ ಕಥೆಯಂತದ್ದು ಎಂದುಕೊಳ್ಳಬೇಡಿ. ಮನುಷ್ಯನಿಗೆ ಜನ್ಮಗಳಿರುವುದು ವಾಸ್ತವ, ಪುನರ್ಜನ್ಮದಲ್ಲಿನ ಜ್ಞಾಪಕ ಅಪರೂಪವಾಗಿ ಯಾರಿಗಾದರೂ ಬರಬಹುದು. ಹಾಗೆ ಬಂದಿರುವ ಸಂಘಟನೆಗಳು ಸಹ ಎಷ್ಟೋ ಇವೆ. ಕಳೆದುಹೋದ ಜನ್ಮಗಳಲ್ಲಿನ ವಿಷಯಗಳು ಜ್ಞಾಪಕ ಬರುವುದಕ್ಕೆ ಒಂದೇ ಒಂದು ಆತ್ಮವೇ ಕಾರಣ. ಜೀವಿಗಾಗಲಿ, ಮನಸ್ಸಿಗಾಗಲಿ, ಬುದ್ಧಿಗಾಗಲಿ ಗತಜನ್ಮ ಜ್ಞಾಪಕಗಳು ಇರುವುದಿಲ್ಲ. ವಿಷಯಗಳನ್ನು ಜ್ಞಾಪಕ ಇಟ್ಟುಕೊಳ್ಳುವ ಸಾಮರ್ಥ್ಯ ಶರೀರದಲ್ಲಿನ ಮನಸ್ಸಿಗೆ ಮಾತ್ರ ಇರುತ್ತದೆ. ಮನಸ್ಸು ಮರಣಿಸಿದ ಜನ್ಮದಲ್ಲಿಯೇ ಹೋಗುತ್ತದೆ. ನಂತರ ಜನ್ಮದಲ್ಲಿ ಹೊಸ

ಮನಸ್ಸು ಬರುತ್ತದೆ. ಆದ್ದರಿಂದ ಪ್ರಸ್ತುತ ಜನ್ಮದಲ್ಲಿ ಗತಜನ್ಮ ಜ್ಞಾಪಕಗಳು ಪ್ರಸ್ತುತವಿರುವ ಮನಸ್ಸಿಗೆ ತಿಳಿದಿರುವುದಿಲ್ಲ. ಮನಸ್ಸು ನಂತರ ಜ್ಞಾಪಕವನ್ನು ಉಂಟುಮಾಡುವುದು ಆತ್ಮ. ಒಬ್ಬ ಮನುಷ್ಯ ನಿದ್ರೆಹೋಗುವ ಸಮಯದಲ್ಲಿ ಮನಸ್ಸು ಹೊರಗಿನ ಅವಯವಗಳ ಸಂಬಂಧ ಕಳೆದುಕೊಂಡು, ಬ್ರಹ್ಮನಾಡಿಯಲ್ಲಿ ಅಡಕವಾಗಿರುತ್ತದೆ. ಆಗ ಆ ಶರೀರದಲ್ಲಿನ ಆತ್ಮ ಮನಸ್ಸಿನಂತೆ ಕೆಲಸಮಾಡಿ ಯಾರಾದರೂ ಕರೆದರೆ, ಆ ಕರೆಯನ್ನು ಬುದ್ಧಿಗು ಜೀವಿಗು ಸೇರಿಸಿ ನಿದ್ರೆಯಿಂದ ಏಳುವಂತೆ ಮಾಡುತ್ತಿದೆ. ಅಷ್ಟೇ ಅಲ್ಲದೆ ಆತ್ಮ ಶರೀರದಲ್ಲಿ ರಾತ್ರಿಹಗಲು ಎಲ್ಲಾ ವಿಷಯಗಳಿಗು ಸಾಕ್ಷಿಯಾಗಿ ಇದೆ. ಒಬ್ಬ ಮನುಷ್ಯ ಎಷ್ಟು ಜನ್ಮಗಳು ಎತ್ತಿದರೂ ಅವನನ್ನು ಬಿಡದಂತಿರುವುದು ಆತ್ಮ ಒಂದೇ. ಆ ದಿನ ಕೃಷ್ಣನು ಮರಣಿಸಿದಾಗ ಬೇಡನ ಶರೀರದಲ್ಲಿನ ಜೀವಿಯೊಂದಿಗಿರುವ ಆತ್ಮ, ಕೃಷ್ಣನ ಮರಣ ಸಮಯದಲ್ಲಿ ಏನು ನಡೆದಿರುವುದು, ಯಾವ ಸಂಭಾಷಣೆ ನಡೆದಿರುವುದು ಎಲ್ಲವನ್ನು ನೋಡಿದೆ. ಇದು ಸರ್ವ ಮಾನವರಲ್ಲಿ ನಡೆಯುವ ಪ್ರಕ್ರಿಯೆಯೇ. ಆದರೆ ಯಾರಿಗೂ ಶರೀರದೊಳಗೆ ನಡೆಯುವ ತತಂಗ (ಕಾರ್ಯ) ತಿಳಿಯುವುದಿಲ್ಲ. ಬೇಡನ ಶರೀರದಲ್ಲಿನ ಆತ್ಮ ನನಗೆ ತಿಳಿಸಿರುವುದು ಕೆಲವರಿಗೆ ವಿಚಿತ್ರವಾಗಿ ಕಾಣಿಸಿದರೂ, ಇದು ನಿಜವಾಗಲು ಕೆಲವು ಸಂದರ್ಭಗಳಲ್ಲಿ ನಡೆಯುವಂತಹದು. ಕೃಷ್ಣನ ಮರಣಕ್ಕೆ ಆತ್ಮ ಸಾಕ್ಷಿ ಆಗಿರುವುದರಿಂದ ಅಂದಿನ ವಿಷಯ ಪ್ರಸ್ತುತ ಜನ್ಮದಿಂದ, ಪ್ರಸ್ತುತ ವ್ಯಕ್ತಿಯಿಂದ ಹೇಳುವುದು ನಡೆದಿದೆ. ಇಲ್ಲಿ ಇನ್ನೊಂದು ವಿಶೇಷತೆಯೂ ಸಹ ಇದೆ. ಅದೇನೆಂದರೆ! ದ್ವಾಪರಯುಗದಲ್ಲಿ ಕೃಷ್ಣನ ಮರಣ ಸಮಯದಲ್ಲಿರುವ ಅಂದಿನ ಬೇಡನು ಅಂದಿನಿಂದ ಎಷ್ಟೋ ಜನ್ಮಗಳನ್ನು ಧರಿಸುತ್ತಾ ಬಂದು, ಕೊನೆಗೆ ಪ್ರಸ್ತುತ ಜನ್ಮದಲ್ಲಿ ನನ್ನ ಮುಂದೆ ಬಂದಿರುವುದು ನಡೆದಿದೆ. ಹಾಗೆ ನನ್ನ ಮುಂದೆ ಬಂದಿರುವ ಪ್ರಸ್ತುತ ವ್ಯಕ್ತಿ ಕ್ರೈಸ್ತ ಮತಕ್ಕೆ ಸೇರಿದವನು. ಆಗಿನ ಹಿಂದೂಮತದಲ್ಲಿನ ಬೇಡನು ಇಂದಿನ ಕ್ರೈಸ್ತ ಮತದಲ್ಲಿನ ವ್ಯಕ್ತಿ ಎಂದು ತಿಳಿಯುತ್ತಿದೆ.

ಇಂದಿನ ಕ್ರೈಸ್ತನು ಅಂದಿನ ವಿಷಯವನ್ನು ಹೇಳುವುದೇನೆಂದು ಆಶ್ಚರ್ಯ ಪಡಬೇಕಾದ ಅವಶ್ಯಕತೆಯಿಲ್ಲ. ಮನುಷ್ಯ ಬದುಕಿ ಇರುವವರೆಗೇ ಮತ,

ಮರಣಿಸಿದ ನಂತರ ಯಾರು ಯಾವ ಮತದಲ್ಲಾದರು ಕರ್ಮಪ್ರಕಾರ ಹುಟ್ಟಬಹುದು. ಗತ ಜನ್ಮದಲ್ಲಿನ ಕ್ರೈಸ್ತರು ಈ ಜನ್ಮದಲ್ಲಿ ಹಿಂದೂಗಳಾಗಿ ಹುಟ್ಟಬಹುದು. ಈ ಜನ್ಮದಲ್ಲಿನ ಹಿಂದೂಗಳು ಬರುವಂತಹ ಜನ್ಮದಲ್ಲಿ ಕ್ರೈಸ್ತರಾಗಿಯೂ ಹುಟ್ಟಬಹುದು. ಒಬ್ಬ ಮನುಷ್ಯ ಯಾವ ಮತದಲ್ಲಿ ಜೀವನ ಸಾಗಿಸಬೇಕೊ ಅವನ ಕರ್ಮವೇ ನಿರ್ಣಯಿಸುತ್ತದೆ. ಅದರ ಪ್ರಕಾರವೇ ಕೆಲವರು ಹಿಂದೂಗಳಾಗಿ, ಇನ್ನು ಕೆಲವರು ಕ್ರೈಸ್ತರಾಗಿ ಹುಟ್ಟುತ್ತಿದ್ದಾರೆ. **ಯಾರಿಗಾದರೂ ಹುಟ್ಟಿನಿಂದ ಬಂದಿರುವ ಮತ ದೇವರ ಸಮ್ಮತಿಯಿಂದ ಬಂದಿರುವುದಾಗಿ ಲೆಕ್ಕಿಸಬೇಕು**. ಯಾರಾದರೂ ಒಬ್ಬ ಹಿಂದೂ, ಕ್ರೈಸ್ತ ಮತದೊಳಗೆ ಬದಲಾವಣೆ ಯಾಗಬೇಕೆಂದು ತಿಳಿದರೂ, ಒಂದುವೇಳೆ ಕ್ರೈಸ್ತನಾಗಿ ಬದಲಾದರೂ, ಅದು ದೇವರಿಗೆ ವಿರುದ್ಧವಾದ ಕಾರ್ಯ ಆಗುತ್ತದೆ. ದೇವರ ಪರಿಪಾಲನೆಯನ್ನು ಧಿಕ್ಕರಿಸಿದಂತಾಗುತ್ತದೆ. ಹಾಗೆ ಒಬ್ಬ ಕ್ರೈಸ್ತನು ಹಿಂದೂವಾಗಿ ಬದಲಾಗಬೇ ಕೆಂದರೂ, ಒಂದುವೇಳೆ ಬದಲಾದರೂ ಆತನು ಸಹ ದೇವರಿಗೆ ವಿರೋಧಿ ಆಗುತ್ತಾನೆ. ದೇವರ ಪಾಲಕರು ಆತನ ಮೇಲೆ ಕೋಪ ಹೊಂದಿರುತ್ತಾರೆ. ಆದ್ದರಿಂದ **ಮತಮಾರ್ಪಾಟು ಮಹಾಪಾಪವೆಂದು, ದೈವ ನಿರ್ಣಯಕ್ಕೆ ವಿರುದ್ಧವಾಗಿ ಮಾಡಿದಂತಾಗುತ್ತದೆಂದು ತಿಳಿಸುತ್ತಿದ್ದೇವೆ.** ಈಗಿನ ಕಾಲದಲ್ಲಿ ಮತ ಮೌಢ್ಯ ಎಲ್ಲಾ ದೇಶಗಳಲ್ಲಿ ಹರಡಿಹೋಗಿದೆ. ಅದರಿಂದಲೇ ಯುದ್ಧಗಳು ನಡೆಯುತ್ತಿವೆ. ಹಿಂಸೆ ಮಿತಿಮೀರುತ್ತಿದೆ. ಒಬ್ಬರಿಗೊಬ್ಬರು ಹೊಡೆದುಕೊಂಡು ಸಾಯುತ್ತಿದ್ದಾರೆ. ಕೊನೆಗೆ ನಮ್ಮಂತವರನ್ನು ಸಹ ಅಗೌರವಾಗಿ ಮಾತನಾಡುತ್ತಿದ್ದಾರೆ. ಇಂತಹ ಕಾಲ ಬರುತ್ತದೆಂದು ದ್ವಾಪರಯುಗದಲ್ಲಿಯೇ ಕೃಷ್ಣನು ಹೇಳಿದ್ದಾನೆ, ಹಾಗೆಯೇ ಬಂದಿದೆ. ನನ್ನದು ಕ್ರೈಸ್ತ ನಿನ್ನದು ಹಿಂದೂತ್ವ ಎನ್ನುವ ಅಜ್ಞಾನ ರೋಗ ಹೋಗುವುದಕ್ಕೆ, ಆ ದಿನವೇ ಔಷಧವನ್ನು ಸಹ ತಯಾರುಮಾಡಿ ಕೊಟ್ಟು ಹೋದಂತೆ ತಿಳಿಯುತ್ತಿದೆ. ಆ ದಿನ ಕೃಷ್ಣನು ಬರುವಂತಹ ಮತ ರೋಗವನ್ನು ಕುರಿತು ಹೇಳಿದ್ದಾನೆ. ಆತನು ಹೇಳಿದಂತೆ ಆ ರೋಗ ಬಂದಿದೆ. ಆದರೆ ರೋಗವನ್ನು ಕುರಿತು ಹೇಳಿದಾಗಲೇ, ರೋಗ ವ್ಯಾಪ್ತಿಯಾಗ ದಂತೆ, ರೋಗ ಪೂರ್ತಿ ನಿವಾರಣೆ ಆಗುವುದಕ್ಕೆ ಔಷಧ ಜ್ಞಾನವನ್ನು ಸಹ ತಿಳಿಸಿದ್ದಾನೆ.

ಮತವೆನ್ನುವ ರೋಗಕ್ಕೆ, ಜ್ಞಾನವೆನ್ನುವ ಔಷಧವೇನೋ ಆ ದಿನ ಆತನು ಸೂಚಿಸಿದರೂ, ಈ ದಿನ ಅದನ್ನು ತಿಳಿಯಲಾರದ ಸ್ಥಿತಿಯಲ್ಲಿ ಇದ್ದೇವೆ. ಆದ್ದರಿಂದ ಮತ ಎನ್ನುವ ರೋಗ ಹೆಚ್ಚಾಗಿ ಹೋಗುತ್ತಿದೆ. ಹಾಗಾಗದೆ ಈಗ ನಾವು ಕೃಷ್ಣನು ಸೂಚಿಸಿದ ವಿಧಾನವನ್ನು ತಿಳಿದುಕೊಳ್ಳೋಣ.

ದೇವರು ಮತವನ್ನು ಸೃಷ್ಟಿಸಲಿಲ್ಲ. ದೇವರು ತನ್ನ ಜ್ಞಾನವನ್ನು ಧರ್ಮಗಳ ರೂಪದಲ್ಲಿ ತಿಳಿಸಿದ್ದಾನೆ. ದೇವರು ತನ್ನ ಶಕ್ತಿಯನ್ನು ತನ್ನ ವ್ಯಕ್ತಿಯನ್ನಾಗಿ ಮಾಡಿ ಭೂಮಿಮೇಲೆ ಜ್ಞಾನವನ್ನು ಬೋಧಿಸುವಂತೆ ಮಾಡಿದ್ದಾನೆ. ಹಾಗೆ ಬಂದಿರುವ ವ್ಯಕ್ತಿಯನ್ನು ಭಗವಂತನೆಂದು ಹಿಂದೂಗಳು, ಪ್ರವಕ್ತ ಎಂದು ಕ್ರೈಸ್ತರು ಕರೆಯುತ್ತಿದ್ದಾರೆ. ಯಾರು ಏನಂದರೂ ಬಂದಿರುವ ವ್ಯಕ್ತಿ ದೇವರ ಶಕ್ತಿಯೇ ಎಂದು ಜ್ಞಾಪಕವಿಟ್ಟುಕೊಳ್ಳಬೇಕು. ಅಪಾರವಾದ ದೈವಶಕ್ತಿಯಲ್ಲಿ ಸ್ವಲ್ಪ ಭಾಗ ವ್ಯಕ್ತಿಯಾಗಿ ಬಂದಾಗ, ಆ ವ್ಯಕ್ತಿಗೂ ಸಹ ಪ್ರಪಂಚದಲ್ಲಿ ಗುರುತಿಗಾಗಿ ಹೆಸರಿರುತ್ತದೆ. ಒಂದು ಕಾಲದಲ್ಲಿ ಒಂದು ಊರಿನಲ್ಲಿರುವ ಪ್ರವಕ್ತನಿಗಾಗಲಿ, ಭಗವಂತನಿಗಾಗಲಿ ಒಂದು ಹೆಸರಿರುತ್ತದೆ. ದ್ವಾಪರಯುಗದಲ್ಲಿ ದೈವ ಭಾಗಗಳಲ್ಲಿ ಒಂದು ಭಾಗವಾಗಿ ಬಂದಿರುವ ವ್ಯಕ್ತಿ ಹೆಸರು ಕೃಷ್ಣ. ಕೃಷ್ಣನು ದ್ವಾಪರಯುಗದಲ್ಲಿ ಉತ್ತರ ಭಾರತದೇಶದಲ್ಲಿ ಮಧುರೆಯಲ್ಲಿ ಹುಟ್ಟಿದ್ದಾನೆ. ಭಗವಂತನಾದ ಕೃಷ್ಣನು ದೇವರ ಧರ್ಮಗಳನ್ನು ತಿಳಿಸಿಹೋಗಿದ್ದಾನೆ. ಆತನು ಹೋದ ನಂತರ ಸುಮಾರು ಮೂರುಸಾವಿರ ವರ್ಷಗಳಿಗೆ ದೈವಶಕ್ತಿ ಕಲಿಯುಗದಲ್ಲಿ ಇಸ್ರಾಯೇಲ್ ದೇಶದಲ್ಲಿ ಜೆರೂಸಲೇಮು ನಗರದಲ್ಲಿ ಒಬ್ಬ ವ್ಯಕ್ತಿಯಾಗಿ ಹುಟ್ಟಿದೆ. ಆ ವ್ಯಕ್ತಿ ಯೇಸು ಎನ್ನುವ ಹೆಸರಿನಿಂದ ಕರೆಯಲ್ಪಟ್ಟಿದ್ದಾನೆ. ದ್ವಾಪರಯುಗದಲ್ಲಿ ಹುಟ್ಟಿದ ದೈವಶಕ್ತಿ ಹೆಸರು ಕೃಷ್ಣ ಎನ್ನುವ ಎರಡಕ್ಷರಗಳು. ಕಲಿಯುಗದಲ್ಲಿ ಹುಟ್ಟಿದ ದೈವಶಕ್ತಿ ಹೆಸರು ಯೇಸು ಎನ್ನುವ ಎರಡಕ್ಷರಗಳು. ದೈವಶಕ್ತಿ ಭೂಮಿಮೇಲಕ್ಕೆ ಬರುವುದೇ ಅಪರೂಪ. ಕೆಲವು ಲಕ್ಷಗಳ ವರ್ಷಗಳಿಗೊಂದು ಸಲ ಬರುವ ದೈವಶಕ್ತಿ, ಮೂರುಸಾವಿರ ವರ್ಷಗಳಿಗೆ ಎರಡನೆ ಸಲ ಬರುವುದು ಆಶ್ಚರ್ಯವಾಗುವಂತಹ ವಿಷಯ. ಭಗವದ್ಗೀತೆ ಯಲ್ಲಿಯೂ ಸಹ ಧರ್ಮಗಳಿಗೆ ಹಾನಿ ಏರ್ಪಟ್ಟಾಗ, ಅಧರ್ಮಗಳು ಮಿತಿಮೀರಿದಾಗ, ಅಧರ್ಮಗಳನ್ನು ಅಡಗಿಸಿ ಪುನಃ

ಧರ್ಮಗಳನ್ನು ಪ್ರತಿಷ್ಠಾಪಿಸುವುದಕ್ಕೆ ಯುಗಯುಗದಲ್ಲಿ ಬರುತ್ತೇನೆಂದಿದ್ದಾನೆ. ಆತನ ಮಾತಿನ ಪ್ರಕಾರ ನೋಡಿದರೂ ಒಂದೊಂದು ಯುಗ ಕೆಲವು ಲಕ್ಷ ವರ್ಷಗಳ ಕಾಲ ಇರುತ್ತದೆ. ಅಂತಹದರಲ್ಲಿ ಅವಶ್ಯಕತೆ ಬಂದು ಪ್ರತಿ ಯುಗದಲ್ಲಿ ಬಂದರೂ, ಒಮ್ಮೆ ಬರುವಿಕೆಗೂ ಮತ್ತೊಮ್ಮೆ ಬರುವಿಕೆಗು ಕೆಲವು ಲಕ್ಷಗಳ ವರ್ಷಗಳ ಅವಧಿ ಇರುತ್ತದೆ. ಅಂತಹದ್ದು ದ್ವಾಪರಯುಗ ಅಂತ್ಯದಲ್ಲಿ ಬಂದಿರುವ ಭಗವಂತನು, ತಕ್ಷಣ ಕಲಿಯುಗದಲ್ಲಿ ಕೇವಲ ಮುರುಸಾವಿರ ವರ್ಷಗಳಿಗೆ ಬರುವುದು ಆಶ್ಚರ್ಯ ಆಗಬೇಕಾದ ವಿಷಯವೇ ಆಗುತ್ತದೆ. ಒಂದು ಸಲ ಭೂಮಿಮೇಲಕ್ಕೆ ದೈವಶಕ್ತಿಯಾದ ಭಗವಂತನು ಬಂದು ಧರ್ಮಗಳನ್ನು ನೆಲಗೊಳಿಸಿ ಹೋದರೆ, ಪುನಃ ಅವು ಅಧರ್ಮಗಳಾಗಿ ಬದಲಾಗುವುದಕ್ಕೆ ಕೆಲವು ಲಕ್ಷಗಳ ವರ್ಷಗಳು ಹಿಡಿಸುತ್ತವೆ. ಆ ನೇತೃತ್ವದಲ್ಲಿ ಒಂದೊಂದು ಸಲ ಭಗವಂತನ ಬರುವಿಕೆ ಸುಮಾರು ಹತ್ತು ಯುಗಗಳಿಗೆ ಒಂದು ಸಲ ಇರಬಹುದು. ಹಾಗಿರುವಾಗ ಕೃಷ್ಣನು ಮರಣಿಸುತ್ತಲೇ ಕಲಿಯುಗ ತಕ್ಷಣ ಪ್ರಾರಂಭವಾಗಿದೆ. ಭಗವಂತನು ಬಂದು ಧರ್ಮಗಳನ್ನು ತಿಳಿಸಿಹೋದ ನಂತರ ಮೂರುಸಾವಿರ ವರ್ಷಗಳಿಗೆ ಪುನಃ ದೈವಶಕ್ತಿ ಭೂಮಿಮೇಲೆ ಹುಟ್ಟಿದೆಯೆಂದು ಹೇಳಿದರೆ, ಮೂರುಸಾವಿರ ವರ್ಷಗಳಿಗೇ ಧರ್ಮಗಳು ಅಧರ್ಮಗಳಾಗಿವೆಯಾ? ಎನ್ನುವ ಪ್ರಶ್ನೆ ಬರಬಲ್ಲದು. ಒಂದುವೇಳೆ ಅಷ್ಟು ಬೇಗನೆ ಧರ್ಮಗಳು, ಅಧರ್ಮಗಳಾಗಿ ಬದಲಾಗಿಹೋದರೆ, ದೈವಶಕ್ತಿ ಭಗವಂತನಾಗಿ ಧರ್ಮಗಳನ್ನು ತಿಳಿಸುವುದಕ್ಕೆ ಒಂದು ಯುಗದಲ್ಲಿಯೇ ಎಷ್ಟೋ ನೂರಾರುಸಲ ಭೂಮಿಮೇಲಕ್ಕೆ ಬರಬೇಕಾಗುತ್ತದೆ. ಹಾಗೆ ನಡೆಯುತ್ತದಾ? ಒಂದು ಯುಗದಲ್ಲಿಯೇ ಧರ್ಮಗಳು ಅಧರ್ಮಗಳಾಗಿ ನೂರಾರು ಸಲ ಬದಲಾಗಿಹೋಗುತ್ತವಾ? ಎಂದು ಪ್ರಶ್ನಿಸಿಕೊಂಡರೆ ಅದಕ್ಕೆ ಉತ್ತರ ಈ ವಿಧವಾಗಿ ಇದೆ.

ದೈವಶಕ್ತಿ ಭಗವಂತನಾಗಿ ಬರಬೇಕೆಂದರೆ ಅಧರ್ಮಗಳು ಒಂದು ಸ್ಥಾಯಿಗೆ ಬೆಳೆಯಬೇಕು. ಅಧರ್ಮಗಳು ಒಂದು ಸ್ಥಾಯಿಯನ್ನು ಸೇರುತ್ತಲೇ ಭಗವಂತನ ಜನ್ಮ ತನಗೆ ತಾನಾಗಿ ಬರುತ್ತದೆ. ಹಾಗೆ ಭಗವಂತನು ಭೂಮಿಮೇಲಕ್ಕೆ

ಬಂದು ಒಂದು ಸಲ ಧರ್ಮಗಳನ್ನು ನೆಲೆಗೊಳಿಸಿದರೆ ಪುನಃ ಅವು ಅಧರ್ಮಗಳಾಗಿ ಬದಲಾಗುವುದಕ್ಕೆ ಕೆಲವು ಯುಗಗಳಕಾಲ ಹಿಡಿಸುತ್ತದೆ. ಒಂದು ಲೆಕ್ಕದ ಪ್ರಕಾರ ಸುಮಾರು ಹತ್ತು ಯುಗಗಳಿಗೆ ಒಂದು ಸಲ ದೈವಶಕ್ತಿ ಮನುಷ್ಯನಾಗಿ ಭೂಮಿ ಮೇಲಕ್ಕೆ ಬರಬಹುದು. ಇದನ್ನನುಸರಿಸಿ ಸುಮಾರು ಒಂದು ಕೋಟಿ ವರ್ಷಗಳ ನಂತರ 8 ಲಕ್ಷಗಳಿಂದ 10 ಲಕ್ಷ ವರ್ಷಗಳೊಳಗೆ ಭಗವಂತನ ಬರುವಿಕೆ ಇರಬಹುದೆಂದು ಅಂದುಕೊಳ್ಳುತ್ತಿದ್ದೇವೆ. ಒಂದುಸಲ ಭೂಮಿಮೇಲೆ ಧರ್ಮಗಳನ್ನು ನೆಲೆಗೊಳಿಸಿದರೆ ಪುನಃ ಅವು ಅಧರ್ಮಗಳಾಗಿ ಬದಲಾಗುವುದಕ್ಕೆ ಸುಮಾರು ಹತ್ತುಯುಗಗಳ ಕಾಲ ಹಿಡಿಸುತ್ತದೆಂದು ತಿಳಿಯುತ್ತಿದೆ. ಇದರಿಂದ ಭಗವಂತನ ಬರುವಿಕೆ ಬೇಗನೆ ಇರುವುದಿಲ್ಲವೆಂದು ತಿಳಿಯುತ್ತಿದೆ. ಹಾಗಿರುವಾಗ ಕೃಷ್ಣನ ನಂತರ ಕೇವಲ ಮೂರುಸಾವಿರ ವರ್ಷಗಳಿಗೆ ಪುನಃ ಯೇಸುವಾಗಿ ಹುಟ್ಟಿದ್ದಾನೆಂದು ಹೇಳುವುದೇನು? ಎಂದು ಕಲವರು ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಹತ್ತಿರದಿಂದ ಬರುವ ಉತ್ತರ ಏನೆಂದರೆ! ದೇವರು ಭೂಮಿಮೇಲೆ ಒಂದುಸಲ ಧರ್ಮಗಳನ್ನು ನೆಲೆಗೊಳಿಸುವುದಕ್ಕೆ ಸ್ವಲ್ಪಕಾಲ ಹಿಡಿಸುತ್ತದೆ. ದ್ವಾಪರಯುಗ ಅಂತ್ಯದಲ್ಲಿ ಕೃಷ್ಣನು ಬಂದು ಒಂದು ಸಲ ಅರ್ಜುನನಿಗೆ ಮಾತ್ರ ಧರ್ಮಗಳನ್ನು ತಿಳಿಸಿದ್ದಾನೆ. ಅದು ಆತನು ಬಂದ ನಂತರ, ಸಮಯವನ್ನು ನೋಡಿ ಸುಮಾರು 90 ವರ್ಷಗಳ ವಯಸ್ಸಿನಲ್ಲಿ ಕೇವಲ ಒಂದುಸಲ ಹೇಳುವುದು ನಡೆದಿದೆ. ಧರ್ಮಗಳನ್ನು ನೆಲೆಗೊಳಿಸುವುದಕ್ಕೆ ಸುಮಾರು ಕೋಟಿ 10 ಲಕ್ಷ ವರ್ಷಗಳಿಗೆ ಒಂದುಸಲ ಬರುವ ಭಗವಂತನು ಕೇವಲ ಹತ್ತು ನಿಮಿಷಗಳೊಳಗೆ ಧರ್ಮಗಳನ್ನು ಬೋಧಿಸುತ್ತಾನಾ? ಹಾಗೆ ಬೋಧಿಸುವುದು ಸಂಪೂರ್ಣವಾಗಿ ಅಧರ್ಮಗಳನ್ನು ಇಲ್ಲದಂತೆ ಮಾಡಿದಂತಾಗುತ್ತದಾ? ಧರ್ಮಗಳನ್ನು ನೆಲೆಗೊಳಿಸುವುದು ಎಷ್ಟೋ ಉನ್ನತವಾದ ಕೆಲಸವಾಗಿದ್ದು, ಆ ಕೆಲಸ ಕೃಷ್ಣನ ಜನ್ಮದಲ್ಲಿಯೇ ಮಾಡಿದ್ದಾನಾ? ಒಂದುಸಲ ನೆಲೆಗೊಳಿಸುವ ಧರ್ಮಗಳು ಹತ್ತು ಕಾಲಗಳಿಗೆ ಮೇಲ್ಪಟ್ಟು ಅಂದರೆ ಹತ್ತು ಯುಗಗಳಿಗೆ ಮೇಲ್ಪಟ್ಟು ಇರಬೇಕಾಗಿ ಬರುತ್ತದೆ. ಅಷ್ಟು ದೀರ್ಘಕಾಲ ಇರಬೇಕಾದ ಧರ್ಮಗಳು ಅಷ್ಟು ಸುಲಭವಾಗಿ ಕೇವಲ ಕೆಲವು ನಿಮಿಷಗಳಲ್ಲಿ ಬೋಧಿಸುತ್ತಾನಾ ಎಂದು ಯೋಚಿಸಬೇಕಾದ ಕೆಲಸವಿದೆ.

ಹಾಗೆ ಯೋಚಿಸಿದರೆ ತಿಳಿಯುವ ರಹಸ್ಯ ಒಂದು ಇದೆ. ಈ ರಹಸ್ಯ ಸುಲಭವಾಗಿ ತಿಳಿಯುವುದಕ್ಕೆ ಒಂದು ಚಿಕ್ಕ ಉದಾಹರಣೆಯನ್ನು ತೆಗೆದುಕೊಳ್ಳೋಣ. ಒಬ್ಬ ವ್ಯಕ್ತಿಗೆ ಹತ್ತು ಲೀಟರ್‌ಗಳ ಹಾಲನ್ನು ಮಾರಬೇಕೆಂದು ಆತನ ಯಜಮಾನ ಹೇಳಿದ್ದಾನೆ. ಆಗ ಆ ವ್ಯಕ್ತಿ ಒಂದು ಊರಿನೊಳಗೆ ಹೋಗಿ ಹಾಲನ್ನು ಮಾರುವುದು ಪ್ರಾರಂಭಮಾಡಿದ್ದಾನೆ. ಹಾಲು ಯಾರಿಗೆ ಅಗತ್ಯವೋ ಕೇಳಿ ಹಾಲನ್ನು ಮಾರಿದ್ದಾನೆ. ಆದರೆ ಆ ಊರಿನಲ್ಲಿ ಕೇವಲ ಐದುಲೀಟರ್‌ಗಳ ಹಾಲನ್ನೇ ಮಾರಿದ್ದಾನೆ. ಇನ್ನೂ ಐದು ಲೀಟರ್‌ಗಳ ಹಾಲು ಉಳಿದಿವೆ. ಆಗ ಪಕ್ಕದ ಗ್ರಾಮಕ್ಕೆ ಹೋಗಿ ಉಳಿದ ಹಾಲನ್ನು ಮಾರಿದ್ದಾನೆ. ಮಾರಿದ ಹಾಲು ಹತ್ತು ಲೀಟರ್‌ಗಳು, ತಿರುಗಿದ ಊರುಗಳು ಎರಡು, ಮಾರಿದವನು ಒಬ್ಬನೇ. ಆದರೆ ಇಲ್ಲಿ ಒಂದು ತತಂಗವನ್ನು ಗಮನಿಸೋಣ. ಮೊದಲು ಹಾಲು ಮಾರಿದ ಊರಿನಲ್ಲಿ ಎಲ್ಲರೂ ಶೂದ್ರರೇ ಇದ್ದಾರೆ. ಆದಕಾರಣ ಮಾರುವವನು ಯಾವ ಆತಂಕವಿಲ್ಲದೆ ಮಾರಿದ್ದಾನೆ. ಎರಡನೇ ಊರಿನಲ್ಲಿ ಎಲ್ಲರೂ ಬ್ರಾಹ್ಮಣರೇ ಇದ್ದಾರೆ. ಅವರು ಬ್ರಾಹ್ಮಣರು ಮಾರುವ ಹಾಲನ್ನೇ ಕೊಂಡುಕೊಳ್ಳುತ್ತಾರೆ. ಆದರೆ ಶೂದ್ರರು ಮಾರುವ ಹಾಲನ್ನು ಕೊಂಡುಕೊಳ್ಳುವುದಿಲ್ಲ. ಮಾರುವವನು ಬ್ರಾಹ್ಮಣನಲ್ಲ. ಆದರೆ ಮಾರಬೇಕಾದ ಹಾಲು ಐದು ಲೀಟರ್‌ಗಳು ಉಳಿದಿವೆ. ಆದ್ದರಿಂದ ಮಾರಬೇಕಾದ ವ್ಯಕ್ತಿ ಮೈಮೇಲಿನ ಅಂಗಿಯನ್ನು ತೆಗೆದುಹಾಕಿ, ಒಂದು ಜಂಧ್ಯವನ್ನು ಕತ್ತಿನಲ್ಲಿ ಹಾಕಿಕೊಂಡು, ಪಂಚೆಕಟ್ಟಿಕೊಂಡು ಆ ಊರಿನೊಳಗೆ ಹೋಗಿ ಹಾಲನ್ನು ಮಾರಿದ್ದಾನೆ. ಅಂಗಿ ಇಲ್ಲದಂತೆ ಕೆಳಗೆ ಪಂಚೆ ಮಾತ್ರ ಕಟ್ಟುಕೊಂಡು ಇರುವುದರಿಂದ, ಆತನು ಬ್ರಾಹ್ಮಣನಂತೆ ಕಾಣಿಸುತ್ತಿದ್ದಾನೆ. ಮೇಲಾಗಿ ತನ್ನ ಹೆಸರು ಶಂಕರಯ್ಯ ಆದರೆ ಶಂಕರಶಾಸ್ತ್ರಿ ಎಂದು ಹೇಳಿಕೊಂಡಿದ್ದಾನೆ. ಹೆಸರಿನಲ್ಲಿಯು, ಆಕಾರದಲ್ಲಿಯು ಬ್ರಾಹ್ಮಣನಾಗಿ ಕಾಣಿಸಿ ಮಾರುವುದರಿಂದ ಆತನ ಐದು ಲೀಟರ್‌ಗಳ ಹಾಲನ್ನು ಅಲ್ಲಿನ ಬ್ರಾಹ್ಮಣರು ತೆಗೆದುಕೊಂಡಿದ್ದಾರೆ. ಹತ್ತು ಲೀಟರ್‌ಗಳ ಹಾಲನ್ನು ಮಾರಿದ ನಂತರ ಹಾಲಿನವನಿಗೆ ಜಂಧ್ಯದಿಂದ ಕೆಲಸವಿಲ್ಲ ಹಾಗೆ ಪಂಚೆಯಿಂದ ಕೆಲಸವಿಲ್ಲ. ಆದುದರಿಂದ ಅವನು ಮನೆಗೆ ಹೋಗಿ ಜಂಧ್ಯವನ್ನು, ಪಂಚೆಯನ್ನು ತೆಗೆದುಹಾಕಿ

ತಾನು ಯಾವಾಗಲೂ ಹುಟ್ಟುಕೊಳ್ಳುವ ಲುಂಗಿಯನ್ನು ಕಟ್ಟುಕೊಂಡು ಮಲಗಿದ್ದಾನೆ. ಅಲ್ಲಿ ಹತ್ತು ಲೀಟರ್‌ಗಳ ಹಾಲನ್ನು ಮಾರುವುದು ಮುಖ್ಯವಾದ ಉದ್ದೇಶ. ಎಷ್ಟು ಊರಿಗಳಲ್ಲಿ ಮಾರಿದ್ದೀಯಾ ಎಂದಾಗಲಿ, ಎಷ್ಟು ಸಮಯಕ್ಕೆ ಮಾರಿದ್ದೀಯಾ ಎಂದಾಗಲಿ ಹಾಲಿನ ಯಜಮಾನ ಕೇಳಲಿಲ್ಲ. ಹಾಲಿನ ಯಜಮಾನನೊಂದರ ಹಾಲನ್ನು ಹಾಲಿನವನು (ಹಾಲನ್ನು ಮಾರುವವನು) ಮಾರಬೇಕೆನ್ನುವುದು ನಿಯಮ. ಅಷ್ಟೇ ಹೊರತು ಈ ಬೀದಿಯಲ್ಲಿಯೇ ಮಾರಬೇಕು, ಆ ಊರಿನಲ್ಲಿಯೇ ಮಾರಬೇಕು, ಗಂಟೆಯೊಳಗೆ ಮಾರಬೇಕು, ಅರ್ಧಗಂಟೆಯೊಳಗೆ ಮಾರಬೇಕು ಎನ್ನುವ ನಿಯಮವಿಲ್ಲ. ಆದ್ದರಿಂದ ಹಾಲಿನ ವನು ಹತ್ತು ಲೀಟರ್‌ಗಳ ಹಾಲನ್ನು ಮಾರಿದರೆ ಹಾಲಿನ ಯಜಮಾನನ ಲೆಕ್ಕದಲ್ಲಿ ಹಾಲಿನವನು ಒಂದುದಿನ ಕೆಲಸ ಮಾಡಿದಂತಾಗುತ್ತದೆ.

ಮೇಲಿನ ವಿಧವಾಗಿ ಹೋಲಿಸಿಕೊಂಡರೆ ಹಾಲಿನ ಯಜಮಾನ ಇದ್ದಂತೆ ಪರಮಾತ್ಮ ಇದ್ದಾನೆ. ಹಾಲಿನವನು ಇದ್ದಂತೆ ಭಗವಂತನಿದ್ದಾನೆ. ಹಾಲಿನವನು ಮಾರುವ ಹಾಲು ಹಾಲಿನ ಯಜಮಾನನವು ಎನ್ನುವಂತೆ, ಭಗವಂತನು ಬೋಧಿಸುವ ಧರ್ಮಗಳು ಪರಮಾತ್ಮನವು (ದೇವರವು). ಮಾರಬೇಕಾದ ಹಾಲು ಹತ್ತು ಲೀಟರ್‌ಗಳು ಆದಂತೆ ತಿಳಿಸಬೇಕಾದ ಧರ್ಮಗಳು ನೂರರಷ್ಟು. ಹಾಲಿನವನು ಹಾಲನ್ನು ಎರಡು ಊರುಗಳಲ್ಲಿ ಮಾರಿದರೂ ಪರವಾಗಿಲ್ಲ ಎನ್ನುವಂತೆ, ಭಗವಂತನು ನೂರರಷ್ಟು ಧರ್ಮಗಳನ್ನು ಎರಡು ದೇಶಗಳಲ್ಲಿ ಹೇಳಿದರು ಪರವಾಗಿಲ್ಲ. ಹತ್ತುಲೀಟರ್‌ಗಳ ಹಾಲನ್ನು ಮಾರಿದಾಗಲೇ ಹಾಲಿನವನಿಗೆ ಒಂದುದಿನ ಕೆಲಸವಾದಂತೆ ಲೆಕ್ಕಿಸಲ್ಪಡುತ್ತದೆ. ಶೇಕಡ ನೂರರಷ್ಟು ಧರ್ಮಗಳನ್ನು ತಿಳಿಸಿದಾಗಲೇ ಭಗವಂತನಿಗೆ ಒಂದುಸಲ ಧರ್ಮಗಳನ್ನು ಬೋಧಿಸಿದಂತಾಗುತ್ತದೆ. ಹಾಲಿನವನು ಹತ್ತು ಲೀಟರ್‌ಗಳ ಹಾಲನ್ನು ಮಾರುವುದಕ್ಕೆ ಎರಡು ಊರುಗಳಿಗೆ ಹೋಗಿ ಎರಡು ಊರುಗಳಲ್ಲಿ ಕಾಣಿಸಿದಂತೆ, ಭಗವಂತನು ಶೇಕಡ ನೂರರಷ್ಟು ಧರ್ಮಗಳನ್ನು ತಿಳಿಸುವುದಕ್ಕೆ ಎರಡು

ದೇಶದೊಳಗೆ ಹೋಗಿ ಎರಡು ದೇಶಗಳಲ್ಲಿ ಕಾಣಿಸುತ್ತಾನೆ. ಒಂದು ಊರಿನಲ್ಲಿ ಶೂದ್ರನಾಗಿ, ಒಂದು ಊರಿನಲ್ಲಿ ಬ್ರಾಹ್ಮಣನಾಗಿ ಕಾಣಿಸಿದಂತೆ ಒಂದು ದೇಶದಲ್ಲಿ ಒಬ್ಬ ಹಿಂದೂಗಳ ಪ್ರವಕ್ತನಾಗಿ, ಮತ್ತೊಂದು ದೇಶದಲ್ಲಿ ಕ್ರೈಸ್ತ ಪ್ರವಕ್ತನಾಗಿ ಕಾಣಿಸುತ್ತಾನೆ. ಹಾಲಿನವನು ಬೆಳಗಿನಜಾವ 6 ಗಂಟೆಗಳಿಗೆ ಒಂದು ಊರಿನಲ್ಲಿ ಕೆಲವು ಹಾಲನ್ನು ಮಾರಿ, ನಂತರ ಸ್ವಲ್ಪ ಹೊತ್ತಿಗೆ ಏಳು ಗಂಟೆಗೆ ಎರಡನೆ ಊರಿನೊಳಗೆ ಹೋಗಿ ಅಲ್ಲಿ ಅವರ ಕುಲಸ್ಥನಾಗಿ ಕಾಣಿಸಿ, ಏಳು ಗಂಟೆಗೆ ಹಾಲನ್ನು ಮಾರಿದಂತೆ, ಭಗವಂತನು ಕೃಷ್ಣನಾಗಿ ದ್ವಾಪರಯುಗ ಕೊನೆಯಲ್ಲಿ ದೇವರ ಧರ್ಮಗಳನ್ನು ಬೋಧಿಸಿ ನಂತರ ಸ್ವಲ್ಪ ಕಾಲಕ್ಕೆ (ಮೂರುಸಾವಿರ ವರ್ಷಗಳಿಗೆ) ಇಸ್ರಾಯೇಲು ದೇಶಕ್ಕೆ ಹೋಗಿ ಅಲ್ಲಿ ಅವರ ಮತಪ್ರವಕ್ತನಾಗಿ ಕಾಣಿಸಿ, ಕಲಿಯುಗದಲ್ಲಿ ದೈವಧರ್ಮಗಳನ್ನು ಬೋಧಿಸಿದ್ದಾನೆ. ಹತ್ತು ಲೀಟರ್‌ಗಳ ಹಾಲನ್ನು ಎರಡು ಊರುಗಳಲ್ಲಿ ಮಾರಿದಾಗ ಹಾಲಿನವನಿಗೆ ಒಂದುದಿನ ಕೆಲಸವಾದಂತೆ, ಭಗವಂತನು ಬೇರೆಬೇರೆ ಸಮಯಗಳಲ್ಲಿ ಬೇರೆಬೇರೆ ದೇಶಗಳಲ್ಲಿ ಶೇಕಡ ನೂರರಷ್ಟು ಧರ್ಮಗಳನ್ನು ಬೋಧಿಸಿದಾಗಲೇ ಆತನಿಗೆ ಒಂದು ಅವತಾರದ ಕೆಲಸಪೂರ್ತಿ ಆದಂತಾಗುತ್ತದೆ. ಹಾಲಿನವನು ಯಜಮಾನನ ಹಾಲನ್ನು ಎಷ್ಟು ಊರುಗಳಲ್ಲಿ ಮಾರಿದರೂ, ಎಷ್ಟು ಸಮಯದಲ್ಲಿ ಮಾರಿದರೂ ಹತ್ತು ಲೀಟರ್‌ಗಳ ಹಾಲನ್ನು ಮಾರಿದಾಗಲೇ ಯಜಮಾನನ ದೃಷ್ಟಿಯಲ್ಲಿ ಒಂದುದಿನ ಹಾಲಿನವನು ಕೆಲಸಮಾಡಿದಂತೆ ಲೆಕ್ಕಿಸಲ್ಪಡುತ್ತದೆ. ಅದೇ ವಿಧವಾಗಿ ಭಗವಂತನು ಎಷ್ಟು ದೇಶಗಳಲ್ಲಿ ಧರ್ಮಗಳನ್ನು ಹೇಳಿದರೂ, ಎಷ್ಟು ಕಾಲದಲ್ಲಿ ಹೇಳಿದರೂ, ನೂರರಷ್ಟು ಧರ್ಮಗಳನ್ನು ತಿಳಿಸಿದಾಗಲೇ, ದೇವರ ದೃಷ್ಟಿಯಲ್ಲಿ ಭಗವಂತನು ಒಂದುಸಲ ಭೂಮಿಮೇಲೆ ಧರ್ಮಗಳನ್ನು ಬೋಧಿಸಿದಂತಾಗುತ್ತದೆ.

| | | |
|---|---|---|
| ಹಾಲಿನ ಯಜಮಾನ | – | ಧರ್ಮಗಳಿಗೆ ಅಧಿಪತಿಯಾದ ದೇವರು |
| ಹಾಲು | – | ಧರ್ಮಗಳು |
| ಹಾಲಿನವನು | – | ಭಗವಂತನು |

| | | |
|---|---|---|
| ಹತ್ತುಲೀಟರ್ ಹಾಲು | – | ನೂರರಷ್ಟು ಧರ್ಮಗಳು |
| ಎರಡು ಊರುಗಳು | – | ಎರಡು ಭೂ ಭಾಗಗಳು |
| ಶಂಕರಯ್ಯ | – | ಕೃಷ್ಣ |
| ಶಂಕರಶಾಸ್ತ್ರಿ | – | ಯೇಸು |
| ಹಾಲಿನವನು (ಶೂದ್ರನು) | – | ಭಗವಂತನಾದ ಕೃಷ್ಣನು |
| ಹಾಲಿನವನು (ಬ್ರಾಹ್ಮಣನು) | – | ಭಗವಂತನಾದ ಪ್ರವಕ್ತ |
| ಮಾರಿದ ಸಮಯ | – | ಬೋಧಿಸಿದ ಸಮಯ |
| ಆರು ಗಂಟೆಗೆ | – | ದ್ವಾಪರಯುಗದಲ್ಲಿ |
| ಏಳು ಗಂಟೆಗೆ | – | ಕಲಿಯುಗದಲ್ಲಿ |
| ಹಾಲನ್ನು ಮಾರುವುದು | – | ಧರ್ಮಗಳನ್ನು ಬೋಧಿಸುವುದು |
| ಒಂದು ದಿನದ ಕೆಲಸ | – | ಒಂದು ಅವತಾರವೊಂದರ ಕೆಲಸ |
| ಹಾಲನ್ನು ಕೊಂಡವರು | – | ಧರ್ಮಗಳನ್ನು ತಿಳಿದುಕೊಂಡವರು |

ಹಾಲನ್ನು ಕೊಂಡ ಒಂದುಊರು – ಮೊದಲು ಧರ್ಮಗಳನ್ನು ತಿಳಿದಿರುವ ದೇಶ **ಭಾರತ ದೇಶ.**

ಹಾಲನ್ನುಕೊಂಡ ಎರಡನೆಊರು – ನಂತರ ಧರ್ಮಗಳನ್ನು ತಿಳಿದಿರುವ ದೇಶ **ಇಸ್ರಾಯೇಲ್ ದೇಶ.**

ಒಂದು ಉದ್ದವಾದ ಸರಳರೇಖೆ ಇದೆಯೆಂದುಕೊಳ್ಳಿ. ಆ ರೇಖೆಗೆ ಎರಡು ಧೃವಗಳಿರುತ್ತವೆ. ಆ ಎರಡು ಧೃವಗಳನ್ನು ಸೇರಿಸುವ ಮಧ್ಯರೇಖೆ ಇರುತ್ತದೆ. ರೇಖೆ ಎಂದರೆ ಗೀಚಿದ ಗೀತೆ (ಗೆರೆ) ಎಂದು ಎಲ್ಲರಿಗು ತಿಳಿದಿದೆ. ಒಂದು ಗೆರೆಗೆ ಎರಡು ಧೃವಗಳು, ಆ ಎರಡು ಧೃವಗಳನ್ನು ಸೇರಿಸಿ ಗೆರೆ ಇರುತ್ತದೆ. ಮುಂದಿನ ಚಿತ್ರದಲ್ಲಿ ನೋಡಿರಿ.



ಚಿತ್ರದಲ್ಲಿ ಕಾಣಿಸುವ ಒಂದನೇ ಕೊನ ಉತ್ತರ ಧೃವ, ಹಾಗೆ ಎರಡನೇ ಕೊನ ದಕ್ಷಿಣ ಧೃವ. ಒಂದು ಎರಡು ಕೊನಗಳನ್ನು ಸೇರಿಸುತ್ತಿರುವ ರೇಖೆಯನ್ನು ಎರಡು ಧೃವಗಳನ್ನು ಏಕಸ್ಥಾಯಿಯಾಗಿ ಸಮತಲವಾಗಿ ತೋರಿಸುವ ಗೀತೆ ಎಂದು ಹೇಳುತ್ತಿದ್ದೇವೆ. ಗೀತೆ ಇದೆಯೆಂದರೆ ಧೃವಗಳಿರುತ್ತವೆ. ಎರಡು ಧೃವಗಳು ಇವೆಯೆಂದರೆ ನೋಡುವುದಕ್ಕೆ ಅವು ಒಂದಕ್ಕೊಂದು ವಿರುದ್ಧವಾದ ದಿಶೆಗಳಲ್ಲಿ ಇರುತ್ತವೆ. ವಿರುದ್ಧ ದಿಶೆಗಳಲ್ಲಿ ಎರಡು ಧೃವಗಳಿದ್ದರೂ, ಎರಡನ್ನು ಸಮಾನವಾಗಿ ತೋರಿಸುವ ಗೀತೆ ಇರುತ್ತದೆ. ಒಟ್ಟಿನಲ್ಲಿ ಹೇಳಬೇಕೆಂದರೆ ಒಂದು ಗೀತೆ ಮೂರು ಭಾಗಗಳಾಗಿ ಇದೆಯೆಂದು ಹೇಳಬಹುದು. ಇದರಿಂದ ಗೀಚಲ್ಪಟ್ಟ ಗೀತೆ ಸಹ ತ್ರೈತದಿಂದ ಕೂಡಿಕೊಂಡಿದೆಯೆಂದು ತಿಳಿಯುತ್ತಿದೆ. ಈಗ ಅಸಲು ವಿಷಯಕ್ಕೆ ಬರೋಣ. ಭಗವಂತನು ತಿಳಿಸಿರುವುದು ಭಗವದ್ಗೀತೆ, ಭಗವಂತನು ಹೇಳಿದ ಗೀತೆಗೂ ಸಹ ತ್ರೈತವು ಅನ್ವಯಿಸುತ್ತಿದೆ. ಭಗವಂತನ ಗೀತೆ ಮೂರು ಭಾಗಗಳಾಗಿದ್ದು ಮೂವರು ಪುರುಷರನ್ನು ತಿಳಿಸುತ್ತಿದೆ. ಭಗವಂತನಿಂದ ಗೀಚಲ್ಪಟ್ಟ ಗೀತೆಗೂ ಸಹ ಎರಡು ಧೃವಗಳು ಇವೆ. ಭಗವದ್ಗೀತೆ ಸಹ ಒಂದುಕೊನ ಉತ್ತರ ಧೃವವಾಗಿ, ಎರಡನೆ ಕೊನ ದಕ್ಷಿಣ ಧೃವವಾಗಿ ಇದೆ. ಉತ್ತರ ಧೃವ ದೇವರು, ದಕ್ಷಿಣ ಧೃವ ಜೀವಿಯೆಂದು ಇದರ ಅರ್ಥ. ಉತ್ತರ ಧೃವವಾಗಿರುವ ಮೊದಲ ಕೊನ ಭಾಗ ಪರಮಾತ್ಮಯೆಂದು, ಅವುಗಳಿಗೆ ಮಧ್ಯದಲ್ಲಿರುವ ಗೀತೆ ಜೀವಾತ್ಮನನ್ನು ಪರಮಾತ್ಮನನ್ನು ಒಂದು ಮಾಡುವುದೇ ಆತ್ಮ ಎಂದು ತಿಳಿಯುತ್ತಿದೆ. ಸಮಸ್ತ ಜಗತ್ತಿನಲ್ಲಿ ಯಾವುದೇ ಜೀವಾತ್ಮ ಆದರೂ ಪರಮಾತ್ಮನನ್ನು ಸೇರಬೇಕೆಂದರೆ ಆತ್ಮ ಮೂಖಾಂತರವೇ ಸಾಧ್ಯವಾಗುತ್ತದೆ. ಜೀವಾತ್ಮಕ್ಕೆ ದಾರಿ ಆತ್ಮವೇ. ಆತ್ಮ ದಾರಿಯಲ್ಲಿ ಪ್ರಯಾಣಿಸಿದರೇನೆ ಪರಮಾತ್ಮ ಎನ್ನುವ ಗಮ್ಯವನ್ನು ಸೇರಬಹುದು. ಆದ್ದರಿಂದ ದೇವರನ್ನು ಸೇರಬೇಕೆನ್ನುವ ಯಾವ ಜೀವಿಯಾದರೂ ಆತ್ಮವನ್ನು ಅಧ್ಯಯನ ಮಾಡಲೇಬೇಕು, ಇದು ಶಾಸನ. ಆತ್ಮವನ್ನು ಕುರಿತು ಅಧ್ಯಯನ ಮಾಡುವುದನ್ನೇ ಆಧ್ಯಾತ್ಮಿಕ ಎನ್ನುತ್ತೇವೆ. ಆಧ್ಯಾತ್ಮಿಕ ತಿಳಿಯದೆ ಜಗತ್ತಿನಲ್ಲಿ ಯಾರಿಗೂ ಮುಕ್ತಿ ಲಭಿಸುವುದಿಲ್ಲ.

ಗೀಚಲ್ಪಟ್ಟ ಗೆರೆ ಮೂರು ಭಾಗಗಳಾಗಿ ಇದ್ದಂತೆ, ಹೇಳಲ್ಪಟ್ಟ ಗೀತೆ ಮೂರು ಭಾಗಗಳಾಗಿ ಇದೆ. ತನ್ನ ಗೀತೆ ತ್ರೈತದಿಂದ ಕೂಡಿಕೊಂಡಿದೆಯೆಂದು ಮೂರು ಭಾಗಗಳಾಗಿ ಪ್ರಜೆಗಳಿಗೆ ತಿಳಿಯಲ್ಪಡುತ್ತದೆಂದು ತಿಳಿದ ಕೃಷ್ಣನು, ಆ ರಹಸ್ಯವನ್ನು ಕೊನೆಯಲ್ಲಿ ಬೇಡನಿಗೆ ಹೇಳಿಹೋಗಿದ್ದಾನೆ. ಹಾಲಿನವನು ಎರಡು ಊರುಗಳಲ್ಲಿ ಹಾಲು ಮಾರಿದಂತೆ, ಭಗವಂತನು ಎರಡು ಸಮಯಗಳಲ್ಲಿ ಎರಡು ದೇಶಗಳಲ್ಲಿ ತನ್ನ ಬೋಧನೆಯನ್ನು ತಿಳಿಸಬೇಕಾಗಿದೆ. ಊಟ ಮಾಡುವವನು ಮಜ್ಜಿಗೆಯಿಂದ ತಿಂದಾಗಲೇ ಅದು ಸಂಪೂರ್ಣ ಊಟವೆಂದು ತಿಳಿದುಕೊಂಡಂತೆ, ಕೊನೆಯಲ್ಲಿ ಮೂರನೆಸಲ ಬೋಧನೆಯೊಂದರ ವಿವರವನ್ನು ತಿಳಿಸಿದಾಗ ಸಂಪೂರ್ಣವಾಗಿ ಹೇಳಿದಂತಾಗುತ್ತದೆ. ಗೀಚಲ್ಪಟ್ಟ ಗೀತೆ ಮೂರು ಭಾಗಗಳಿರುವಂತೆ, ಹೇಳಲಾದ ಗೀತೆ ಮೂರು ಭಾಗಗಳಾಗಿ ಇರಬೇಕು. ಹಾಗೆಯೇ ಹೇಳಲಾದ ಗೀತೆ ಮೂರು ಆತ್ಮಗಳನ್ನು ತಿಳಿಸುವುದಾಗಿರಬೇಕು. ಈ ಸೂತ್ರವು ಅನ್ವಯಿಸಿದಾಗ ಅದು ಭಗವಂತನು ಮಾನವನಿಗೆ ಬೋಧಿಸಿದ ಬೋಧನೆ ಆಗುತ್ತದೆ. ಯಾವಾಗಾದರೆ ಕೃಷ್ಣನು ಅರ್ಜುನನಿಗೆ ಧರ್ಮಗಳನ್ನು ಯುದ್ಧರಂಗದಲ್ಲಿ ತಿಳಿಸಿದ್ದಾನೊ, ಆಗ ಹಾಲಿನವನು ತನ್ನ ಹಾಲನ್ನು ಒಂದು ಊರಿನಲ್ಲಿ ಮಾರಿದಂತಾಗಿದೆ. ಇನ್ನು ಕೆಲವು ಧರ್ಮಗಳನ್ನಾಗಲಿ ಅಥವಾ ಒಂದು ಧರ್ಮ ವನ್ನಾಗಲಿ ಮತ್ತೊಂದು ಕಾಲದಲ್ಲಿ ಮತ್ತೊಂದು ದೇಶದಲ್ಲಿ ಹೇಳಬೇಕೆಂದು ಕೃಷ್ಣನಿಗೆ ತಿಳಿದಿದೆ. ಹಾಗೆ ಎರಡನೆ ಸಲ ಎರಡನೆ ಕಡೆ ತಾನೇ ಹೇಳಬೇಕೆಂದು, ಹಾಗೆ ಹೇಳಿರುವುದನ್ನೇ ಮೂರನೆ ಸಲ ತಾನೇ ವಿವರಿಸಬೇಕೆಂದು ಸಹ ಕೃಷ್ಣನಿಗೆ ತಿಳಿದಿದೆ. ಹಾಗೆ ಮೂರು ಸಲ ಮಾಡಿದಾಗ ತಾನು ಒಂದು ಸಲ ಭೂಮಿಮೇಲೆ ಧರ್ಮಗಳನ್ನು ತಿಳಿಸಿದಂತಾಗುತ್ತದೆ.  ಆದ್ದರಿಂದ ತನ್ನ ಪ್ರಣಾಳಿಕೆಯನ್ನು ಅಥವಾ ಯೋಜನೆಯನ್ನು ಮೊದಲೇ ತಿಳಿಸಿದಂತೆ ಆಧಾರಕ್ಕಾಗಿ, ಬೇಡನಿಗೆ ತನ್ನ ಎರಡನೇ ಬರುವಿಕೆಯನ್ನು, ಮೂರನೇ ಬರುವಿಕೆಯನ್ನು ಕುರಿತು ಸಮಾಚಾರವನ್ನು ತಿಳಿಸಿಹೋಗಿದ್ದಾನೆ. ಆ ಸಮಾಚಾರದಿಂದ ಬೇಡನಿಗೆ ಯಾವುದೇ ಅಗತ್ಯವಿಲ್ಲ. ಆದರೂ ಕೃಷ್ಣನು ತನ್ನ ಮರಣಕಾಲದಲ್ಲಿ ಹೇಳಿದ್ದಾನೆ. ಎರಡನೆ ಸಲ ಬಂದಾಗ ಈ ಸಮಾಚಾರವನ್ನು ಹೇಳಿದರೆ ಯಾರೂ

ನಂಬುವುದಿಲ್ಲ. ಕೃಷ್ಣನ ಹೆಸರು ಹೇಳಿಕೊಂಡು ಯೇಸು ಉತ್ತಮನೆನಿಸಿಕೊಂಡಿದ್ದಾನೆಂದು ಯಾರಾದರೂ ಅನ್ನುತ್ತಾರೆ. ಉದಾಹರಣೆಗೆ ಈಗ ನಮಗೆ ತಿಳಿದ ಒಬ್ಬ ಉದ್ಯೋಗಿ ನಾನು ಕಳೆದ ಜನ್ಮದಲ್ಲಿ ಮಹಾತ್ಮಾಗಾಂಧಿಯೆಂದು ಹೇಳಿಕೊಂಡರೆ ಯಾರೂ ನಂಬುವುದಿಲ್ಲ. ಆ ಉದ್ಯೋಗಿ ಹೇಳಿದಂತೆ, ಆತನು ಹೋದ ಜನ್ಮದಲ್ಲಿ ನಿಜವಾಗಲು ಗಾಂಧಿಯೇ ಆದರೂ ಯಾರೂ ನಂಬುವ ಸ್ಥಿತಿಯಲ್ಲಿ ಇರುವುದಿಲ್ಲ. ಮೇಲಾಗಿ ಆ ಮಾತನ್ನು ಹೇಳುವುದರಿಂದ ಇವನು ತನ್ನ ಅಧಿಕಾರಿಗಳ ಹತ್ತಿರ ಗೌರವವನ್ನು ಸಂಪಾದಿಸಿಕೊಳ್ಳುವುದಕ್ಕೆ ಹಾಗೆ ಹೇಳುತ್ತಿದ್ದಾನೆಂದು ಅನ್ನುತ್ತಾರೆ. ಹಾಗಲ್ಲದೆ ಗಾಂಧಿ ಬದುಕಿರುವಾಗ, ಮರಣಿಸುವಮುನ್ನ ಬರುವಂತಹ ಜನ್ಮದಲ್ಲಿ ಇಂತಹ ವ್ಯಕ್ತಿಯಾಗಿ ಹುಟ್ಟಿ, ಇಂತಹ ಉದ್ಯೋಗ ಮಾಡುತ್ತೇನೆಂದು ಹೇಳಿದ್ದರೆ ಪ್ರಸ್ತುತ ಕಾಲದಲ್ಲಿ ಆ ವ್ಯಕ್ತಿ ಆ ಉದ್ಯೋಗಿಯಾಗಿ ಇದ್ದಾಗ, ಯಾರಾದರೂ ಈತನು ಇಂತಹ ಗಾಂಧಿ ಎಂದು ಗುರುತಿಸುತ್ತಾರೆ ಮತ್ತು ಗೌರವವಾಗಿ ನೋಡುತ್ತಾರೆ.

ಏನಾದರೂ ನಡೆಯದಮುನ್ನ ಹೇಳಿದರೆ ಹೇಳಿದವನಿಗೆ ನಡೆದ ಕಾರ್ಯಕ್ಕೆ ಬೆಲೆ ಇರುತ್ತದೆ. ಹಾಗಲ್ಲದೆ ನಡೆದ ನಂತರ ಹೇಳಿದರೆ ಮುಗಿದ ಕೆಲಸಕ್ಕಾಗಲಿ, ಹೇಳಿದ ವ್ಯಕ್ತಿಗಾಗಲಿ ಬೆಲೆ ಇರುವುದಿಲ್ಲ. ಆದ್ದರಿಂದ ಕೃಷ್ಣನು ನಡೆಯುವಂತಹದನ್ನು ಕುರಿತು ಮೊದಲೆ ಹೇಳಿದ್ದಾನೆ. ಆ ಬೆಲೆಯುಳ್ಳ ಸಮಾಚಾರವನ್ನು ಕೇಳಿದ ವ್ಯಕ್ತಿ ಆಗಲೇ ಹೊರಗೆ ಹೇಳದಿದ್ದರೂ, ನಂತರ ಹೇಳುವುದರಿಂದ ಕೃಷ್ಣನು ಹೇಳಿದ ಸಮಾಚಾರಕ್ಕೆ ಬೆಲೆ ಕೈಗೂಡಿದೆ. ಕೃಷ್ಣನು ಬದುಕಿರುವಾಗ ಹೇಳಿದ ಗೀತೆಯಲ್ಲಿ, ನಾನು ಧರ್ಮಗಳನ್ನು ಸಂಸ್ಥಾಪನೆ ಮಾಡುವುದಕ್ಕೆ ಯುಗಯುಗದಲ್ಲಿಯು, ನನ್ನನ್ನು ನಾನು ಸೃಷ್ಟಿಸಿಕೊಂಡು ಬರುತ್ತೇನೆಂದು ಹೇಳಿದ್ದಾನೆ. ಹಾಗೆ ಯೇಸುವಾಗಿ ಬಂದ ಸಮಯದಲ್ಲಿಯೂ ಸಹ ನಂತರ ನಾನು ಬರುತ್ತೇನೆಂದು ಹೇಳಿದ್ದಾನೆ. ಕೃಷ್ಣನಾಗಿ ಬಂದಿರುವಶಕ್ತಿ, ಯೇಸುವಾಗಿ ಬರುತ್ತೇನೆಂದು ಭಗವದ್ಗೀತೆಯಲ್ಲಿಯೂ, ಯೇಸುವಾಗಿ ಬಂದ ವ್ಯಕ್ತಿ ಆದರಣಕರ್ತನಾಗಿ ಇಂತಹ ವಿಳಾಸದಲ್ಲಿ ಬರುತ್ತೇನೆಂದು ಬೈಬಲ್

ನಲ್ಲಿಯೂ ಹೇಳಲಿಲ್ಲ. ಮುಖ್ಯವಾಗಿ ಈ ಕಾರಣದಿಂದ ಕೃಷ್ಣನ ಭಕ್ತರಾದವರು ಯೇಸುನನ್ನು, ಯೇಸು ಭಕ್ತರಾದವರು ಕೃಷ್ಣನನ್ನು ಯಾವುದನ್ನು ನಂಬದಂತಿದ್ದಾರೆ. ಕೃಷ್ಣನನ್ನು, ಯೇಸುನನ್ನು ಬೇರೆಬೇರೆ ವ್ಯಕ್ತಿಗಳಾಗಿ ಲೆಕ್ಕಿಸಿ ಕೃಷ್ಣನನ್ನು ಕ್ರೈಸ್ತರು, ಯೇಸುನನ್ನು ಹಿಂದೂಗಳು ಅಸೂಯೆಯಿಂದ ದೂಷಿಸುತ್ತಿದ್ದಾರೆ. ಇಬ್ಬರ ಎರಡು ಮತಗಳನ್ನು ಸೃಷ್ಟಿಸಿಕೊಂಡು ಮತಗಳ ಮತ್ತಿನಲ್ಲಿ ಒಂದು ಮತಕ್ಕೆ ಮತ್ತೊಂದು ಮತ ವಿರೋಧವೆನ್ನುವಂತೆ ಪ್ರವರ್ತಿಸುತ್ತಿದ್ದಾರೆ. ಇದಕ್ಕೆಲ್ಲ ಕಾರಣ ಕೃಷ್ಣ ಎನ್ನುವ ಹೆಸರಿನಿಂದ ಐದುಸಾವಿರದ ನೂರಹದಿನೇಳು (5117) ವರ್ಷಗಳ ಕೆಳಗೆ ಬಂದ ವ್ಯಕ್ತಿಯೇ, ಎರಡುಸಾವಿರದ ಹದಿನಾರು (2016) ವರ್ಷಗಳ ಕೆಳಗೆ ಯೇಸುವಾಗಿ ಬಂದಿದ್ದಾನೆಂದು ಯಾರೂ ಗುರುತಿಸಲಾರದೆ ಹೋಗಿದ್ದಾರೆ. ಈಗ ನಾನು ಹೇಳುವ ಈ ಸಮಾಚಾರ ಸ್ವಲ್ಪಜನ ಕ್ರೈಸ್ತರಿಗೆ ಇಷ್ಟವಿಲ್ಲದಿರಬಹುದು. ಹಾಗೆ ಸ್ವಲ್ಪಜನ ಹಿಂದೂಗಳಿಗು ಸಹ ನನ್ನ ಮೇಲೆ ಕೋಪವನ್ನು ತರಿಸುತ್ತದೆ. ಆದರೂ ದೇವರ ವಿಷಯವನ್ನು ತಿಳಿದು, ಸತ್ಯವನ್ನು ಮುಚ್ಚಿಟ್ಟು ಹೊರಗೆ ಹೇಳದಿದ್ದರೆ ಅದು ಭಯಂಕರ ಪಾಪವಾಗುತ್ತದೆ. ಆದ್ದರಿಂದ ಯಾರು ಏನಂದುಕೊಂಡರೂ ತಪ್ಪದೆ ಹೇಳಬೇಕಾಗಿ ಬಂದಿದೆ.

**"ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಅಸತ್ಯ ಆಗುವುದಿಲ್ಲ"** ಎನ್ನುವ ಸೂತ್ರವನ್ನು ಅನುಸರಿಸಿ ನೋಡಿದರೆ, ಎಷ್ಟುಜನ ಅಲ್ಲ ಇಲ್ಲ ಎಂದರೂ ಸತ್ಯ ಜೀವಿಸಿಯೇ ಇರುತ್ತದೆ. ಕೊನೆಗೆ ಯಾರಾದರೂ ಸತ್ಯವನ್ನು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಕೃಷ್ಣನು ಯೇಸುವಾಗಿ ಬಂದಿದ್ದಾನೆಂದು ಹೇಳುವುದು ಸತ್ಯ, ಆದ್ದರಿಂದ ಆ ಮಾತನ್ನು ಆಲೋಚಿಸಿ ನೋಡಿದರೆ ಯಾರಿಗಾದರೂ ಸತ್ಯವಾಗಿ ಕಾಣಿಸುತ್ತದೆ. ಕೃಷ್ಣನ ಜೀವನ ಕಳೆದುಹೋಗಿ 5117 ವರ್ಷಗಳಾಗಿದೆ. ಹಾಗೆ ಯೇಸು ಜೀವನ ಕಳೆದುಹೋಗಿ ಇಲ್ಲಿಗೆ 2016 ವರ್ಷಗಳಾಗಿದೆ. ಇಬ್ಬರ ಜೀವನಗಳು ಕಳೆದುಹೋಗಿರುವವೇ ಆದ್ದರಿಂದ ಕಳೆದವರ ಚರಿತ್ರೆಯನ್ನು ಯಾರೂ ಇಲ್ಲ ಎನ್ನುವುದಿಲ್ಲ. ಕೃಷ್ಣನು ಹುಟ್ಟಿದ್ದಾನೆ, ಹಾಗೆ ಯೇಸು ಹುಟ್ಟಿದ್ದಾನೆ. ಯಾರಿಗಾದರೂ ಜೀವನದಲ್ಲಿ ಜನನ ಮತ್ತು ಮರಣಗಳು ಎರಡು ಮುಖ್ಯವಾದ

ಘಟ್ಟಗಳು. ಈಗ ಮುಖ್ಯ ಘಟ್ಟವಾದ ಕೃಷ್ಣನು ಹುಟ್ಟಿರುವುದನ್ನು, ಯೇಸು ಹುಟ್ಟಿರುವುದನ್ನು ಕುರಿತು ನೋಡೋಣ. ಕೃಷ್ಣನು ಹಳೆಯದಾದ ಸೆರೆಮನೆಯಲ್ಲಿ, ಅಶುಭ್ರವಾದ ಸ್ಥಳದಲ್ಲಿ, ತಾಯಿ ಪಕ್ಕದಲ್ಲಿ ತಂದೆ ಹೊರತು ಯಾರೂ ಇಲ್ಲದ ದೀನಸ್ಥಿತಿಯಲ್ಲಿ ಹುಟ್ಟಿದ್ದಾನೆ. ಯೇಸು ಸಹ ಹಳೆಯದಾದ ಪಶುಗಳಕೋಣೆಯಲ್ಲಿ, ಅಶುಭ್ರವಾದ ಕಡೆ, ತಾಯಿ ಪಕ್ಕದಲ್ಲಿ ತಂದೆ ಹೊರತು ಯಾರೂ ಇಲ್ಲದ ದೀನಸ್ಥಿತಿಯಲ್ಲಿ ಹುಟ್ಟಿದ್ದಾನೆ. ಜೀವನದ ಪ್ರಾರಂಭ ಘಟ್ಟದಲ್ಲಿ ನಡೆದ ವಿಧಾನವನ್ನು ಇತ್ತ ಹಿಂದೂಗಳು, ಅತ್ತ ಕ್ರೈಸ್ತರು ಯುಕ್ತಿಯನ್ನುಪಯೋಗಿಸಿ ಯೋಚಿಸಿದರೆ ಕೃಷ್ಣನು, ಯೇಸು ಇಬ್ಬರೂ ಒಬ್ಬರೇ ಎನ್ನುವುದಕ್ಕೆ ಮೊದಲನೆಯ ಸಾಕ್ಷಿ (ಆಧಾರ) ದೊರೆಯುತ್ತದೆ. ನಂತರ ನೋಡಿದರೆ ಕೃಷ್ಣನು ಹುಟ್ಟಿರುವುದು ಪ್ರಮಾದ ಸಮಯದಲ್ಲಿ, ಹಾಗೆಯೇ ಯೇಸು ಹುಟ್ಟಿರುವುದು ಸಹ ಪ್ರಮಾದದ ಸಮಯವೆ. ಕೃಷ್ಣನು ಹುಟ್ಟಿದ್ದಾನೆಂದು ತಿಳಿಯುತ್ತಲೇ ಆತನನ್ನು ಸಾಯಿಸುವುದಕ್ಕೆ ಆ ದೇಶರಾಜ ಸಿದ್ಧವಾಗಿದ್ದಾನೆ. ಹಾಗೆ ಯೇಸು ಹುಟ್ಟಿದ್ದಾನೆಂದು ತಿಳಿಯುತ್ತಲೇ ಆತನನ್ನು ಸಾಯಿಸುವುದಕ್ಕು ಸಹ ಆ ದೇಶರಾಜ ಸಿದ್ಧವಾಗಿದ್ದಾನೆ. ಕೃಷ್ಣನು ಹುಟ್ಟುತ್ತಲೇ ಸ್ವಲ್ಪ ಸಮಯಕ್ಕೆ ಹುಟ್ಟಿದ ಕಡೆ ಇಲ್ಲದಂತೆ ತಂದೆಯಾಗಿರುವ ವಸುದೇವನು ಪಕ್ಕ ಪ್ರಾಂತಕ್ಕೆ ತೆಗೆದುಕೊಂಡಿಹೋಗಿದ್ದಾನೆ. ಹಾಗೆಯೇ ಯೇಸು ಹುಟ್ಟಿದ ಸ್ವಲ್ಪ ಸಮಯಕ್ಕೆ ಆತನ ತಂದೆಯಾಗಿರುವ ಯೋಸೇಪು, ಹುಟ್ಟಿದ ಕಡೆ ಇಲ್ಲದಂತೆ ಪಕ್ಕದ ಪ್ರಾಂತಕ್ಕೆ ತೆಗೆದುಕೊಂಡು ಹೋಗಿದ್ದಾನೆ. ಕೃಷ್ಣನಾಗಲಿ, ಯೇಸುವಾಗಲಿ ಇಬ್ಬರೂ ರಾತ್ರಿಸಮಯವೆ ಹುಟ್ಟಿದ್ದಾರೆ. ರಾತ್ರಿ ಸಮಯ ಹುಟ್ಟಿದವರು ಆ ರಾತ್ರಿಗೆ ಹುಟ್ಟಿದ ಸ್ಥಳದಲ್ಲಿ ಇಲ್ಲದಂತೆ ಅಲ್ಲಿಗೆ ದೂರವಾಗಿ ಸ್ವಲ್ಪಕಾಲ ಅಜ್ಞಾತವಾಗಿ ಬೆಳೆದಿದ್ದಾರೆ. ಕೃಷ್ಣನು ಯೇಸು ಇಬ್ಬರೂ ಒಂದೇಯೆಂದು ತಿಳಿಯುವುದಕ್ಕೆ ಒಂದೇ ಹೋಲಿಕೆಹೊಂದಿರುವ ಸಂಘಟನೆಗಳು ಅವರು ಹುಟ್ಟಿದ ದಿನದಂದು ನಡೆದಿವೆ. ಸ್ವಲ್ಪ ತಿಳುವಳಿಕೆಯನ್ನು ಉಪಯೋಗಿಸಿ ನೋಡಿದರೂ, ಅವರಿಬ್ಬರ ಜನನ ರಹಸ್ಯ ತಿಳಿದುಹೋಗುತ್ತದೆ. ಅವರು ಇಬ್ಬರು ಒಬ್ಬರಲ್ಲ ಎನ್ನುವುದಕ್ಕೆ ಅವಕಾಶ ಇಲ್ಲದಂತೆ, ಅವರಿಬ್ಬರ ಹುಟ್ಟುಗಳು ಒಂದೇ ವಿಧವಾಗಿ ನಡೆದಿವೆ.

ನಂತರ ಕೃಷ್ಣನಿಗೆ ಮೂವತ್ತು ವರ್ಷಗಳ ವಯಸ್ಸಿನಲ್ಲಿ ಆತನ ಜೀವನದಲ್ಲಿ ಹೇಳಿಕೊಳ್ಳುವಂತಹ ಬದಲಾವಣೆ ಬಂದಿದೆ. ಹಾಗೆ ಯೇಸುವಿಗೂ ಸಹ ಮೂವತ್ತು ವರ್ಷಗಳ ವಯಸ್ಸಿನಲ್ಲಿ ಬದಲಾವಣೆ ಕಾಣಿಸುತ್ತಿದೆ. ಮೂವತ್ತು ವರ್ಷಗಳ ವಯಸ್ಸಿನಲ್ಲಿ ಕೃಷ್ಣನು ಮಧುರೆಯನ್ನು ಬಿಟ್ಟು ದ್ವಾರಕಗೆ ಹೋಗಿದ್ದಾನೆ. ಹಾಗೆ ಯೇಸು ಸಹ ತನಗೆ ಮೂವತ್ತು ವರ್ಷಗಳ ವಯಸ್ಸು ಬರುತ್ತಲೇ ತಾಯಿ ತಂದೆಯನ್ನು ಬಿಟ್ಟು ಹೊರಟುಹೋಗಿದ್ದಾನೆ. ಕೊನೆಯಲ್ಲಿ ಮುಖ್ಯ ಘಟ್ಟವಾದ ಮರಣದಲ್ಲಿ ಕೃಷ್ಣನು ಗಾಯಗೊಂಡು ರಕ್ತಸೋರಿ ಮರಣಿಸಿದ್ದಾನೆ. ಹಾಗೆ ಯೇಸು ಸಹ ಗಾಯಗೊಂಡು ರಕ್ತಸೋರಿ ಮರಣಿಸಿದ್ದಾನೆ. ಕೃಷ್ಣನು ಮರಣಿಸುವ ಸಮಯದಲ್ಲಿ ತನ್ನವರು ಯಾರೂ ಕೃಷ್ಣನ ಹತ್ತಿರ ಇಲ್ಲ. ಹಾಗೆ ಯೇಸು ಮರಣಿಸುವಾಗ ಸಹ ಆತನ ಹತ್ತಿರ ತನ್ನವರು ಯಾರೂ ಇಲ್ಲ. ಕೃಷ್ಣನು ಮರಣಿಸುವಾಗ ಆತನು ಕುಡಿಯುವುದಕ್ಕೆ ನೀರೂ ಸಹ ಅಲ್ಲಿ ಇಲ್ಲ. ಹಾಗೆಯೇ ಯೇಸುವಿಗೂ ಸಹ ನೀರು ಸಿಗಲಿಲ್ಲ. ಕೃಷ್ಣನು ತನ್ನ ಕಾಲಿಗೆ ಬಲವಾಗಿ ನಾಟಿಕೊಂಡ ಬಾಣದಿಂದ ಮರಣಿಸಿದ್ದಾನೆ. ಹಾಗೆ ಯೇಸು ತನ್ನ ಕಾಲುಗಳಿಗೆ ಬಲವಾಗಿ ನಾಟಿಕೊಂಡ ಕಬ್ಬಿಣದ ಕೀಲದಿಂದ (ಮೊಳೆ) ಮರಣಿಸಿದ್ದಾನೆ. ಈ ವಿಧವಾಗಿ ಕೃಷ್ಣನ ಮತ್ತು ಯೇಸುವಿನ ಜನನ ಮರಣಗಳು ಒಂದೇ ಸ್ಥಿತಿಯಾಗಿ ನಡೆದುಹೋಗಿವೆ. ಭೂಮಿಮೇಲೆ ಆ ವಿಧವಾಗಿ ಯಾರಿಗೂ ನಡೆಯದಂತೆ ಕೇವಲ ಇವರಿಬ್ಬರ ವಿಷಯದಲ್ಲಿಯೇ ಹಾಗೆ ನಡೆದಿರುವುದು, ಇವರಿಬ್ಬರು ವಿಶೇಷವಾಗಿ ಇಬ್ಬರು ಪ್ರವಕ್ತರಾಗಿ ಇರುವುದರಿಂದ ಇವರ ಜನನ ಮರಣಗಳನ್ನು ವಿಶ್ಲೇಷಿಸಿ ನೋಡಬೇಕಾಗಿ ಬಂದಿದೆ. ಹಾಗೆ ನೋಡಿದರೆ ಇವರಿಬ್ಬರು ಒಬ್ಬರೇಯೆಂದು ತಿಳಿಯದವರು ಸಹ ತಿಳಿದುಕೊಳ್ಳುವಂತೆ ಹಾಗೆ ನಡೆದಿದೆಂದು ತಿಳಿಯುತ್ತಿದೆ. ಕೃಷ್ಣನು ಮರಣಿಸುತ್ತಾ ಹೇಳಿದ ಮಾತು ಸತ್ಯವೆಂದು ತಿಳಿಯುವುದಕ್ಕೆ ಯೇಸು ಜನನ, ಮರಣ ಎರಡು ಕೃಷ್ಣನ ಜನನ ಮರಣಗಳೊಂದಿಗೆ ಸರಿಹೋಗುವಂತೆ ನಡೆದಿವೆ. ಕಾಣಿಸದಿರುವುದನ್ನು ನಂಬುವುದಿಲ್ಲ. ಕಾಣಿಸುವುದನ್ನೇ ನಂಬುತ್ತೇವೆಂಬ ಹೇತುವಾದಿಗಳಿಗು, ಕಾಣಿಸದಿರುವುದು ಅಸತ್ಯ ಕಾಣಿಸುವುದೇ ಸತ್ಯ ಎನ್ನುವ ನಾಸ್ತಿಕವಾದಿಗಳು

ಸಹ ಒಪ್ಪಿಕೊಳ್ಳುವಂತೆ ಕಾಣಿಸುವ ಸಂಘಟನೆಗಳಂತೆ ಕೃಷ್ಣನ, ಯೇಸುವಿನ ಜನನ ಮರಣಗಳು ನಡೆದಿವೆ.

ಭೌತಿಕವಾಗಿ ಕೃಷ್ಣನು ಯೇಸುವಾಗಿ ಹುಟ್ಟಿದ್ದಾನೆಂದು, ಕೃಷ್ಣನಾಗಲಿ ಯೇಸುವಾಗಲಿ ಇಬ್ಬರು ಒಬ್ಬರೇಯೆಂದು, ಆ ಒಬ್ಬರು ದೈವದಲ್ಲಿನ ಶಕ್ತಿಯೇ ಯೆಂದು, ಆ ದೈವಶಕ್ತಿಯೇ, ಒಬ್ಬ ವ್ಯಕ್ತಿಯಾಗಿ, ಅದೇ ಎರಡು ಕಾಲಗಳಲ್ಲಿ, ಎರಡು ಆಕಾರಗಳಲ್ಲಿ, ಎರಡು ಹೆಸರುಗಳಿಂದ ಚಲಾವಣೆ ಆಗಿದೆಯೆಂದು ತಿಳಿಯುತ್ತಿದೆ. ಒಂದೇ ದೈವಶಕ್ತಿ ಧರ್ಮಗಳನ್ನು ಪೂರ್ತಿಯಾಗಿ ತಿಳಿಸುವುದಕ್ಕೆ, ಧರ್ಮಗಳು ಎಲ್ಲರಿಗೂ ತಿಳಿಸುವುದಕ್ಕೆ ಮೊದಲು ಒಬ್ಬ ಕೃಷ್ಣನಾಗಿ ಹುಟ್ಟಿ, ನಂತರ ಎರಡನೆ ಸಲ ಯೇಸುವಾಗಿ ಹುಟ್ಟಬೇಕಾಗಿ ಬಂದಿದೆ. ಕಾಣಿಸುವುದನ್ನೇ ನಂಬುವ ಪ್ರಜೆಗಳು, ಬೇರೆಬೇರೆಯಾಗಿ ಕಾಣಿಸುವ ಕೃಷ್ಣನನ್ನು, ಯೇಸುನನ್ನು ಬೇರೆಬೇರೆಯಾಗಿ ಭಾವಿಸಿಕೊಳ್ಳುತ್ತಿದ್ದಾರೆ. ಕೃಷ್ಣನಾಗಲಿ, ಯೇಸುವಾಗಲಿ ಹೇಳದ ಮತಗಳನ್ನು ಮನುಷ್ಯರು ಏರ್ಪಡಿಸಿಕೊಂಡು, ಇದು ಕೃಷ್ಣನದು, ಇದು ಯೇಸುವಿನದು ಎನ್ನುತ್ತಿದ್ದಾರೆ. ಅಜ್ಞಾನಿಗಳ ದೃಷ್ಟಿಯಲ್ಲಿ ಕೃಷ್ಣನು, ಯೇಸು ಇಬ್ಬರೂ ಬೇರೆಬೇರೆ ವ್ಯಕ್ತಿಗಳಾದರೂ, ಜ್ಞಾನಿಗಳ ದೃಷ್ಟಿಯಲ್ಲಿ ಇಬ್ಬರೂ ಒಂದೇ ಶಕ್ತಿಯಾಗಿರುವ ವ್ಯಕ್ತಿಗಳೆಂದು ತಿಳಿಯುತ್ತಿದೆ. ಈಗಿನ ಕಾಲದಲ್ಲಿ ಜ್ಞಾನಿಗಳ ಸಂಖ್ಯೆ ಕಡಿಮೆಯಾಗಿ, ಅಜ್ಞಾನಿಗಳ ಸಂಖ್ಯೆ ಬೆಳೆದುಹೋಗಿದೆ. ಅಜ್ಞಾನಿಗಳ ಸಂಖ್ಯೆ ಕಡಿಮೆಮಾಡಿ, ಜ್ಞಾನಿಗಳ ಸಂಖ್ಯೆಯನ್ನು ಬೆಳೆಸುವುದಕ್ಕೆ ತಾಳಿದ ಪ್ರಾರಂಭ ಅವತಾರವೇ ಶ್ರೀಕೃಷ್ಣನದು. ಹಾಗೆ ಪ್ರಾರಂಭವಾದ ಅವತಾರ ಮೂರು ಅವತಾರಗಳಿಂದ ಮುಗಿಯುತ್ತದೆ. ಈಗಲೂ ಪರಮಾತ್ಮ ಶಕ್ತಿ ಮೊದಲ ಅವತಾರವಾಗಿ ಕೃಷ್ಣನ ರೂಪದಲ್ಲಿ ಬಂದು ಧರ್ಮಗಳನ್ನು ತಿಳಿಸಿದೆ. ಭೂಮಿಮೇಲೆ ಮನುಷ್ಯರಲ್ಲಿ ಅಜ್ಞಾನವನ್ನು ತೆಗೆದುಹಾಕಿ ಜ್ಞಾನವನ್ನು ಉಂಟುಮಾಡುವ ಕಾರ್ಯದಲ್ಲಿ ಮೊದಲಭಾಗ ದ್ವಾಪರಯುಗದಲ್ಲಿ ನಡೆದಿದೆ. ಮೂರು ಭಾಗಗಳಲ್ಲಿ ಒಂದು ಭಾಗ ಕೃಷ್ಣನ ರೂಪದಲ್ಲಿ ನೆರವೇರಿದೆ. ಎರಡನೆ ಭಾಗ ಸಹ ಯೇಸು ರೂಪದಲ್ಲಿ ನೆರವೇರಿದೆ. ಈಗಲೂ ಎರಡು ಭಾಗಗಳ ಕಾರ್ಯಗಳು ಪೂರ್ತಿ

ಆಗಿವೆ. ಎರಡು ಭಾಗಗಳಲ್ಲಿ ಧರ್ಮಗಳು ಹೇಳಲ್ಪಟ್ಟಿವೆ. ಇಲ್ಲಿಗೆ ಪ್ರತ್ಯಕ್ಷವಾಗಿ ಧರ್ಮ ಸಂಸ್ಥಾಪನಾ ಕಾರ್ಯ ಎರಡು ಭಾಗಗಳಾಗಿ, ಎರಡು ದೇಶಗಳಲ್ಲಿ, ಎರಡು ಶರೀರಗಳ ಮೂಲಕ ಎರಡು ಹೆಸರುಗಳನ್ನು ಹೊಂದಿದ ವ್ಯಕ್ತಿಗಳ ಮುಖಾಂತರ ನಡೆದರೂ ನಾವು ಜ್ಞಾನಿಗಳು ಎಂದುಕೊಳ್ಳುವವರು ಯಾರೂ ಸಹ ಇಷ್ಟು ದೊಡ್ಡ ಮಹತ್ವಕಾರ್ಯವನ್ನು ಗುರುತಿಸಲಾರದೆ ಹೋಗಿದ್ದಾರೆ.

ಒಂದು ಗೀತೆ ಮೂರು ಭಾಗಗಳಿರುವಂತೆ, ತ್ರೈತದಿಂದ ಕೂಡಿದ ಧರ್ಮಗಳು, ತ್ರಿ ಭಾಗಗಳಾಗಿ, ತ್ರಿ ವ್ಯಕ್ತಿಗಳ ಮೂಲಕ ಬೋಧಿಸಲ್ಪಡುತ್ತದೆ. ಬೋಧಿಸುವವನು ಒಬ್ಬನೇಯೆಂದು, ಬೋಧಿಸಲ್ಪಡುವವು ಒಂದೇ ದೇವರ ಧರ್ಮಗಳೆಂದು ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕು. ದೈವ ಧರ್ಮಗಳನ್ನು ಪೂರ್ತಿಯಾಗಿ ಬೋಧಿಸುವುದಕ್ಕೆ ಕೆಲವು ಸಾವಿರಾರು ವರ್ಷಗಳಕಾಲ ಅಗತ್ಯ. ಇಲ್ಲಿಗೆ ಮೊದಲು ಕೃಷ್ಣನು ಬೋಧಿಸಿದಾಗಲಿಂದಲೂ ಸುಮಾರು ಐದುಸಾವಿರ ವರ್ಷಗಳು ಕಳೆದುಹೋಗಿವೆ. ಹಾಗೆಂದು ಐದುಸಾವಿರ ವರ್ಷಗಳೂ ಉದ್ದಕ್ಕು ಧರ್ಮಗಳನ್ನು ಬೋಧಿಸಲಿಲ್ಲ. ದ್ವಾಪರಯುಗ ಅಂತ್ಯದಲ್ಲಿ ಕೃಷ್ಣನ ಮೂಖಾಂತರ ಕೆಲವು ನಿಮಿಷಗಳ ಕಾಲ ಧರ್ಮಗಳು ಬೋಧಿಸಲ್ಪಟ್ಟಿವೆ. ಅದು ಮೊದಲ ಭಾಗವಾಗಿದ್ದು, ಆಗಿನಿಂದ ಮೂರು ಸಾವಿರವರ್ಷಗಳ ನಂತರ ಯೇಸು ಮೂಲಕ ಮೂರು ವರ್ಷಗಳಕಾಲ ಧರ್ಮಗಳು ಬೋಧಿಸಲ್ಪಟ್ಟಿವೆ. ಯೇಸು ಬೋಧಿಸಿರುವುದು ಎರಡನೆ ಭಾಗವಾಗಿದ್ದು, ಆಗಿನಿಂದ ಇಲ್ಲಿಗೆ ಎರಡುಸಾವಿರ ವರ್ಷಗಳು ಕಳೆದಿವೆ. ಮೂರನೇ ಭಾಗದಲ್ಲಿನ ಧರ್ಮಬೋಧನೆಯನ್ನು ಕೃಷ್ಣನು 'ಆದರ್ಶಕರ್ತನ' ಮೂಲಕ ಬೋಧಿಸಲ್ಪಡುತ್ತಾನೆಂದು ಹೇಳಿದಾಗ, ಯೇಸು 'ಆದರಣಕರ್ತನ' ಮೂಲಕ ಬೋಧಿಸಲ್ಪಡುತ್ತಾನೆಂದು ತಿಳಿಸಿದ್ದಾನೆ. ಆದರಣಕರ್ತನಾಗಲಿ, ಅಥವಾ ಆದರ್ಶಕರ್ತನಾಗಲಿ ಯಾವಾಗ ಎಷ್ಟು ವರ್ಷಗಳಿಗೆ ಬರುತ್ತಾರೊ, ಯಾವ ದೇಶದಲ್ಲಿ ಬೋಧಿಸುತ್ತಾರೊ ಎಲ್ಲಿಯೂ ಹೇಳಿದಂತೆ ಇಲ್ಲ. ಎಂದಿಗಾದರೂ ಮೂರನೇ ಬೋಧಕನು ಬರುತ್ತಾನೆ, ಈ ಸಲ ಪೂರ್ತಿ ಧರ್ಮಗಳನ್ನು ತಿಳಿಸುತ್ತಾನೆ. ಹಾಗೆ ಮೂರನೇ ಪುರುಷನೊಂದಿಗೆ ಧರ್ಮಗಳ

ಪುನರುದ್ಧರಣ, ಅಧರ್ಮಗಳನ್ನು ಅಡಗಿಸುವ ಕಾರ್ಯ ಪೂರ್ತಿ ಆಗುತ್ತದೆ. ಮೂರು ಕಾಲಗಳಲ್ಲಿ, ಮೂವರು ಬೋಧಕರ ರೂಪದಲ್ಲಿ ಹೇಳಲ್ಪಡುವವು ಒಂದೇ ದೇವರ ಧರ್ಮಗಳೆಂದು ತಿಳಿಯಬೇಕು. ಮೊದಲು ಕೃಷ್ಣನು ಹೇಳಿರುವವು ಒಂದೇ ದೇವರ ಧರ್ಮಗಳೆಂದು ತಿಳಿಯಬೇಕು. ಮೊದಲು ಕೃಷ್ಣನು ಹೇಳಿರುವವು ಒಬ್ಬ ದೇವರ ಧರ್ಮಗಳು, ನಂತರ ಯೇಸು ಹೇಳಿರುವವು ಮತ್ತೊಬ್ಬ ದೇವರ ಧರ್ಮಗಳು ಅಲ್ಲವೇಅಲ್ಲ. ಇಬ್ಬರು ಹೇಳಿರುವವು ನಂತರ ಬರುವಂತಹ ಮೂರನೆಯವರು ಹೇಳುವಂತಹವು, ಎಲ್ಲವೂ ಒಂದೇ ದೇವರ ಧರ್ಮಗಳೆಂದು ತಿಳಿಯಬೇಕು. ಕೃಷ್ಣನು ಹೇಳಿರುವವು ಹಿಂದೂಮತ ಧರ್ಮಗಳೆಂದು, ಯೇಸು ಹೇಳಿರುವುದು ಕ್ರೈಸ್ತ ಮತ ಧರ್ಮಗಳೆಂದು ಎಂದಿಗೂ ಹಾಗೆ ತಿಳಿದುಕೊಳ್ಳ ಬಾರದು. ಕೃಷ್ಣನಾಗಲಿ, ಯೇಸು ಆಗಲಿ ಮತಧರ್ಮಗಳನ್ನು ಬೋಧಿಸಲಿಲ್ಲ. ಅವರಿಬ್ಬರು ಬೋಧಿಸಿರುವವು ಒಂದೇ ದೇವರ ಧರ್ಮಗಳು ಮಾತ್ರವೇಯೆಂದು ಜ್ಞಾಪಕ ಇಟ್ಟುಕೊಳ್ಳಬೇಕು.

ಧರ್ಮಗಳ ಪುನರುದ್ಧೀಕರಿಸುವ ಕಾರ್ಯವನ್ನು ಮೊದಲುಮಾಡಿದ್ದು ಕೃಷ್ಣನು. ಕೃಷ್ಣನು ಬಹಳ ತಿಳುವಳಿಕೆಯುಳ್ಳವನು. ಮೊದಲೆ ತನ್ನಲ್ಲಿರುವ, ತನಗೆ ತಿಳಿದಿರುವ, ತನ್ನ ಧರ್ಮಗಳ ಪ್ರಚಾರ ಕಾರ್ಯಕ್ರಮ ಯೋಜನೆಯನ್ನು ಯಾರಿಗೂ ಹೇಳದೆ ತನ್ನಲ್ಲಿಯೇ ನಿಗ್ರಹಿಸಿ ಇಟ್ಟುಕೊಂಡು, ಕೊನೆಗೆ ಮರಣಿಸುವ ಮುನ್ನ ಬೇಡನಿಗೆ ಹೇಳಿದ್ದಾನೆ. ಬೇಡನು ಆ ವಿಷಯವನ್ನು ಯಾರಿಗೂ ಹೇಳುವುದಿಲ್ಲವೆಂದು ಕೃಷ್ಣನಿಗೆ ತಿಳಿದಿತ್ತು. ಬೇಡನಿಗೆ ಹೊರತು ಯಾರಿಗೆ ಹೇಳಿದರೂ, ಅದು ತಕ್ಷಣ ಎಲ್ಲರಿಗೂ ತಿಳಿದುಹೋಗಿ, ಸ್ವಲ್ಪ ಕಾಲಕ್ಕೆ ಬಲಹೀನ ವಾದ ರಹಸ್ಯವಾಗಿ, ಕೊನೆಗೆ ತಿಳಿಯದಂತೆ ಹೋಗುತ್ತದೆಂದು ಕೃಷ್ಣನ ಭಾವ. ಆದ್ದರಿಂದ ಜೀವನಕಾಲವೆಲ್ಲವೂ ತನ್ನಲ್ಲಿಯೇ ಬಚ್ಚಿಟ್ಟುಕೊಂಡಿದ್ದಾನೆ. ಎಲ್ಲಿ ಹೊಡೆದರೆ ಎಲ್ಲಿ ತಗಲುತ್ತದೊ ಕೃಷ್ಣನಿಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದಲೇ ಕೇಳದಿದ್ದರೂ ಅರ್ಜುನನಿಗೆ ಗೀತೆಯನ್ನು ಹೇಳಿದ್ದಾನೆ. ನೀನು ನನಗೆ ಪ್ರೀಯುವಾದವನು, ಸ್ನೇಹಿತನು ಆದ್ದರಿಂದ ನಿನಗೆ ಹೇಳುತ್ತಿದ್ದೇನೆಂದು

ಅರ್ಜುನನನ್ನು ಉಬ್ಬಿಹೋಗು ವಂತೆ ಮಾಡಿದ್ದಾನೆ. ನಿಜಕ್ಕೆ ಕೃಷ್ಣನಿಗೆ ಅರ್ಜುನನು ಪ್ರೀಯನೇನು ಅಲ್ಲ. ಕೃಷ್ಣನಿಗೆ ನಡೆಯುವಂತಹ ವಿಷಯಗಳೆಲ್ಲ ತಿಳಿದಿದೆ. ಮೊದಲೆ ತಿಳಿದವನಾದ್ದರಿಂದ ಯಾರೊಂದಿಗೆ ಹೇಗೆ ಮಾತನಾಡಬೇಕೊ, ಹೇಗೆ ಮಾತನಾಡಿದರೆ ನಡೆಯು ವಂತಹ ಕೆಲಸಕ್ಕೆ ಸರಿಹೋಗುತ್ತದೊ ತಿಳಿದು ಮಾತನಾಡುತ್ತಿದ್ದನು. ಕೃಷ್ಣನಿಗೆ ನಡೆಯುವಂತಹ ವಿಷಯಗಳು ತಿಳಿದಿದೆ ಎನ್ನುವುದಕ್ಕೆ ಆಧಾರವಾಗಿ ಗೀತೆಯಲ್ಲಿ ವಿಜ್ಞಾನಯೋಗದಲ್ಲಿ 26ನೇ ಶ್ಲೋಕದಲ್ಲಿ ಹೀಗೆ ಇದೆ.

**ಶ್ಲೋ॥ ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ॥**

**ಭಾವಾರ್ಥ :** ಜಗತ್ತಿನಲ್ಲಿ ಸರ್ವ ಜೀವರಾಶಿಗಳಿಗೂ ನಡೆಯುವುದು, ನಡೆಯುತ್ತಿರು ವುದು, ನಡೆಯುವಂತಹ ವಿಷಯಗಳು ನನಗೆ ಗೊತ್ತು. ಆದರೆ ನಾನು ಇಂತಹವನೆಂದು ಯಾರಿಗೂ ತಿಳಿದಿಲ್ಲ ಅಂದಿದ್ದಾನೆ.

ಕೃಷ್ಣನೇ ಸ್ವತಃವಾಗಿ ಮೇಲಿನ ಶ್ಲೋಕದಲ್ಲಿ ನನಗೆ ಮೂರು ಕಾಲಗಳು ತಿಳಿದಿವೆ ಎಂದಿದ್ದಾನೆ. ಆದರೆ ಆತನು ಅಂತಹ ದೊಡ್ಡವನೆಂದು, ಆತನು ಸಾಕ್ಷಾತ್ತು ದೇವರಲ್ಲಿನ ಅಂಶವೆಂದು, ನಡೆಯುವಂತಹ ವಿಷಯಗಳು ಆತನಿಗೆ ತಿಳಿಯುತ್ತದೆಂದು ಯಾರಿಗೂ ತಿಳಿದಿಲ್ಲ. ಜ್ಞಾನದ ಮೇಲೆ ಆಸಕ್ತಿ ಇರುವವರು ಎಷ್ಟೋ ಜನ ಭೂಮಿ ಮೇಲೆ ಇರುವಾಗ ಜ್ಞಾನದ ಮೇಲೆ ಆಸಕ್ತಿಯಿಲ್ಲದ ಅರ್ಜುನನಿಗೆ ಗೀತೆಯನ್ನು ಹೇಳಿದ್ದಾನೆ. ಹಾಗೆ ಹೇಳಿದ್ದಾನೆಂದರೆ ಎಲ್ಲಾ ಮೊದಲೆ ತಿಳಿದ ಕೃಷ್ಣನು ಹೀಗೆ ಹೇಳುವುದೆ ಒಳ್ಳೆಯದೆಂದು ತಿಳಿದು ಹೇಳಿರುತ್ತಾನೆ. ಹಾಗೆ ಬೇಡನಿ (ಬೇಟೆಗಾರನಿ)ಗು ಸಹ ಹೇಳಿದ್ದಾನೆ. ನಡೆಯುವಂತಹ ಕಾಲದಲ್ಲಿ ಏನು ನಡೆಯುತ್ತದೆ ಎಂದು ಕೃಷ್ಣನಿಗೆ ತಿಳಿದಿರುತ್ತದೆ. ಆದುದರಿಂದ ಎಲ್ಲವನ್ನು ಆತನು ತಿಳಿದೆ ಮಾಡಿದ್ದಾನೆಂದು ಹೇಳಬಹುದು. ಆ ಜನ್ಮ ಮುಗಿದುಹೋದ ನಂತರ ಮೂರುಸಾವಿರ ವರ್ಷಗಳಿಗೆ ತಾನೇ ಯೇಸುವಾಗಿ ಬರುತ್ತೇನೆಂದು ಕೃಷ್ಣನಿಗೆ ತಿಳಿದಿದೆ. ಆ ರಹಸ್ಯವನ್ನು ಬೇಡನಿಗೆ ಹೇಳಿದರೂ, ಅದು ಹೊರಗೆ

ತಿಳಿಯುವುದಿಲ್ಲ ಎಂದು ಸಹ ತಿಳಿದಿದೆ. ನಂತರ ಕೊನೆಗೆ ಆ ರಹಸ್ಯ ಯಾರಿಗೆ ತಿಳಿಯುತ್ತದೊ ಸಹ ಆತನಿಗೆ ತಿಳಿದಿದೆ. ಐದುಸಾವಿರ ವರ್ಷಗಳಿಗೆ ತನ್ನ ಮಾತನ್ನು ಹೊಸದಾಗಿ ತಿಳಿಸಿದಾಗ ತಿಳಿದವರು ಗ್ರಂಥರೂಪದೊಳಗೆ ಈ ವಿಷಯವನ್ನು ಬರೆಯುತ್ತಾರೆಂದು ಸಹ ತಿಳಿದಿದೆ. ಕೃಷ್ಣನು ಹೇಳಿದ ರಹಸ್ಯ ಯೇಸು ಬಂದುಹೋದ ನಂತರ ತಿಳಿಯುವುದೆ ಒಳ್ಳೆಯದೆಂದು ಕೃಷ್ಣನು ಅಂದುಕೊಂಡಿದ್ದಾನೆ. ಕೃಷ್ಣನು ಸ್ವತಃವಾಗಿ ಯೇಸುವಾಗಿ ಜನ್ಮಿಸಿ ಅಲ್ಲಿಯೂ ಸಹ ತಾನು ಎಂತಹವನಾಗಿರುವುದು, ಯಾರಾಗಿರುವುದು, ಯಾರ ಊಹೆಗೂ ಸಿಗದಂತೆ ಮಾಡಿದ್ದಾನೆ. ಹಾಗೆ ಮಾಡುವುದಕ್ಕೆ ಕಾರಣ ಏನೆಂದರೆ! ಕೃಷ್ಣ, ಯೇಸು ಪಾತ್ರಗಳಲ್ಲಿ ಕೇವಲ ದೈವಧರ್ಮಗಳನ್ನು ಹೇಳಿಹೋಗುವುದೆ ಅಲ್ಲಿನ ಉದ್ದೇಶ. ಅಲ್ಲಿ ಆತನು ಯಾರೆನ್ನುವುದು ತಿಳಿಯುವ ಅವಶ್ಯಕತೆ ಇಲ್ಲ.

ನಡೆದುಹೋಗಿರುವವು, ನಡೆಯುತ್ತಿರುವವು, ನಡೆಯುವಂತಹವು ತಿಳಿದ ಕೃಷ್ಣನು ತಾನು ಯಾರಾಗಿರುವುದು ಕೇವಲ ಜ್ಞಾನಿಗಳಿಗು, ಯೋಗಿಗಳಿಗು ಮಾತ್ರವೆ ತಿಳಿಯಬೇಕೆಂದು, ಅಜ್ಞಾನಿಗಳಿಗೆ ಯಾವಮಾತ್ರ ತಿಳಿಯಬಾರ ದೆಂದುಕೊಂಡಿದ್ದಾನೆ. ಆದ್ದರಿಂದ ಕೃಷ್ಣನು ಯಾರೊ, ಅಜ್ಞಾನಿಗಳಾದವರ್ಯಾರಿಗೂ ತಿಳಿಯದಂತೆ ಹೋಗಿದೆ. ಕೃಷ್ಣನು ತನ್ನ ಯೋಜನೆಯನ್ನು ಜ್ಞಾನಿಗಳಿಗು, ಯೋಗಿಗಳಿಗು ಮಾತ್ರ ತಿಳಿಯುವಂತೆ ಮಾಡಿದ್ದಾನೆ. ಜ್ಞಾನಿಗಳಿಗು, ಯೋಗಿಗಳಿಗು ಯೇಸುವಾಗಿ ಬಾರದಮುನ್ನವೆ ತಿಳಿದರೆ ಜ್ಞಾನಿಗಳಿಂದ, ಯೋಗಿಗಳಿಂದ ತನ್ನ ಕೆಲಸಕ್ಕೆ ಆತಂಕ ಏರ್ಪಡುತ್ತದೆಂದು, ತಾನು ರಚಿಸಿಕೊಂಡ ಯೋಜನೆಯ ಪ್ರಕಾರ ಯೇಸುವಾಗಿ ತನ್ನ ಜೀವನ ಮುಂದುವರಿಯುವುದಿಲ್ಲವೆಂದು ತಿಳಿದು, ಯೇಸು ಹೋದ ನಂತರ ಎರಡುಸಾವಿರ ವರ್ಷಗಳಿಗೆ ತನ್ನ ಜನ್ಮಗಳ ರಹಸ್ಯವನ್ನು ತಿಳಿಯುವಂತೆ ಮಾಡಿದ್ದಾನೆ. ಹಾಗೆ ಮಾಡುವುದರಿಂದ ಕೃಷ್ಣನಿಗೆ ಮೂರನೇ ಬರುವಿಕೆ, ಯೇಸುಗೆ ಎರಡನೆ ಬರುವಿಕೆಯಾದ ಆದರಣಕರ್ತ ವಿಷಯ ಜ್ಞಾನಿಗಳಿಗು, ಅಜ್ಞಾನಿಗಳಿಗು ತಿಳಿದರೂ ಪರವಾಗಿಲ್ಲ ಎಂದುಕೊಂಡನು. ಕೃಷ್ಣನ ಮೊದಲ ಬರುವಿಕೆಯಲ್ಲಿ ಆತನು ದೊಡ್ಡ ಧನಿಕನಾಗಿ ಬಂದಿದ್ದಾನೆ. ಆತನಿಗೆ

ಎರಡನೇ ಬರುವಿಕೆಯಲ್ಲಿ ಯೇಸು ಬಹಳ ಬಡವನು, ಕಟ್ಟುಕೊಳ್ಳುವುದಕ್ಕೆ ಎರಡನೆ ವಸ್ತ್ರವು ಸಹ ಇಲ್ಲದವನು. ಕೃಷ್ಣನು ಚಿನ್ನದ ಆಭರಣಗಳು ಧರಿಸಿ ರೇಷ್ಮೆ ವಸ್ತ್ರಗಳು ಕಟ್ಟಿದವನು, ಯೇಸು ಜನ್ಮದಲ್ಲಿರುವಾಗ ನೂಲುವಸ್ತ್ರವೂ ಸಹ ಸರಿಯಾಗಿ ಇಲ್ಲದವನಾಗಿ ಕಾಣಿಸಿದ್ದಾನೆ. ಇನ್ನು ಮೂರನೇ ಅವತಾರದಲ್ಲಿ ಯಾರಿಗೂ ತಿಳಿಯದಂತಿರುವುದಕ್ಕೆ ಧನಿಕನಲ್ಲದೆ, ಬಡವನಲ್ಲದೆ ಮಧ್ಯಮ ವರ್ಗದವನಾಗಿ ಇರುತ್ತಾನೆಂದು ತಿಳಿಯುತ್ತಿದೆ.

ಭಗವಂತನ ಮೊದಲ ಜನ್ಮದಲ್ಲಿ ಕೃಷ್ಣನು ಅರ್ಜುನನಿಗೆ ಹೇಳಿದ ಭಗವದ್ಗೀತೆಯಲ್ಲಿ ತಾನು ದೇವರೆಂದು ಪ್ರಕಟಿಸಿಕೊಂಡರೂ, ವಿಶ್ವರೂಪವನ್ನು ತೋರಿಸಿದರೂ ಅದನ್ನು ಯಾರೂ ನಂಬದಂತೆ ಪ್ರವರ್ತಿಸಿದ್ದಾನೆ. ಎರಡನೇ ಜನ್ಮವಾದ ಯೇಸುವಾಗಿ ಬಂದಾಗ ತಾನು ದೇವರು ಕಳಿಸಿದರೆ ಬಂದಿರುವ ದೇವರ ಕುಮಾರನೆಂದು ಒಂದುಕಡೆ ಹೇಳುತ್ತಲೇ, ಮತ್ತೊಂದು ಕಡೆ ತಾನು, ದೇವರು ಇಬ್ಬರೂ ಒಂದೇ ಎನ್ನುವ ಸತ್ಯವನ್ನು ಹೇಳಿದ್ದಾನೆ. ಮೂರನೇ ಬರುವಿಕೆಯಾದ ಯೇಸು ಹೇಳಿದ ಆದರಣಕರ್ತ ತಾನು ದೇವರೆಂದಾಗಲಿ ದೇವರು ಕಳಿಸಿದರೆ ಬಂದವನೆಂದಾಗಲಿ ಯಾವುದು ಹೇಳದಂತೆ ಸಾಧಾರಣ ವ್ಯಕ್ತಿಯಾಗಿಯೇ ಪ್ರಕಟಿಸಿಕೊಳ್ಳುತ್ತಾನೆ. ಸಾಧಾರಣ ವ್ಯಕ್ತಿಯಾಗಿರುವ ಆದರಣ ಕರ್ತನನ್ನು ಕಂಡುಕೊಳ್ಳುವುದು ಸಾಧ್ಯವಾಗುವುದಿಲ್ಲ. ಆದರೆ ಕೃಷ್ಣನು ಆತನ ಹೆಸರನ್ನು ಕುರಿತು ಹೇಳಿದ್ದಾನೆ, ಮೂರನೆಯವನು "ಆದರ್ಶಕರ್ತ" ಎಂಬ ಹೆಸರಿನಿಂದ ಚಲಾವಣೆ ಆಗುತ್ತಾನೆಂದು ಹೇಳುವುದರಿಂದ ಮೂರನೇ ಅವತಾರವನ್ನು ಗುರುತಿಸುವುದಕ್ಕೆ ಅವಕಾಶ ಇದೆ. ದೈವ ಧರ್ಮಗಳನ್ನು ತಿಳಿಸುವ ಸುಧೀರ್ಘಕಾರ್ಯ ಮೂರನೇ ಬರುವಿಕೆಯಿಂದ ಮುಗಿದುಹೋಗುತ್ತದೆ. ಮೂರನೇ ಬರುವಿಕೆ ದೈವಮಾರ್ಗದಲ್ಲಿ ಅಲ್ಲಿಯವರೆಗೂ ತಿಳಿಯದ ವಿಧಾನ ವೆಲ್ಲವೂ ತಿಳಿಯಲ್ಪಡುತ್ತದೆ. ದೈವಧರ್ಮಗಳಲ್ಲಿ ಅತಿಚಿಕ್ಕ ಸೂತ್ರಗಳು ಸಹ ತಿಳಿಯಲ್ಪಡುತ್ತವೆ. ಹಾಗೆ ತಿಳಿಯುವುದೇ ಅಲ್ಲದೆ ಮೂರನೇ ರೂಪದಲ್ಲಿ ಬಂದಿರುವ ಭಗವಂತನು ತನ್ನ ಮೊದಲ ಜನ್ಮವಾದ ಕೃಷ್ಣಾವತಾರದಿಂದ ತಿಳಿಸಿದ

ಧರ್ಮಗಳನ್ನು, ಎರಡನೇ ಜನ್ಮವಾದ ಯೇಸು ಅವತಾರದಲ್ಲಿ ತಿಳಿಸಿದ ವಾಕ್ಯಗಳನ್ನು, ತನ್ನ ಮೂರನೇ ಜನ್ಮದಲ್ಲಿ ವಿವರಿಸಿ ಹೇಳುತ್ತಾನೆ. ಮೂರನೇ ಜನ್ಮದೊಂದಿಗೆ ದೈವಧರ್ಮಗಳನ್ನು ತಿಳಿಸುವ ಕಾರ್ಯ ಮುಗಿಯುತ್ತದೆ. ಅಲ್ಲಿಯವರೆಗೂ ಏನು ತಿಳಿಯದಿದ್ದರೂ ತಿಳಿಸಬೇಕಾದ ಜವಾಬ್ದಾರಿ ಮೂರನೇ ಜನ್ಮದಲ್ಲಿಯೇ ಇದೆ.

ಐದುಸಾವಿರ ವರ್ಷಗಳ ಪೂರ್ವದಲ್ಲಿ ಭಗವದ್ಗೀತೆಯನ್ನು ಹೇಳಿದರೂ, ಅದು ವ್ಯಾಸನಿಂದ ಸಂಸ್ಕೃತದಲ್ಲಿ ಬರೆಯಲ್ಪಟ್ಟರೂ, ವ್ಯಾಸನು ಬರೆದಿರುವುದನ್ನು ಎಷ್ಟೋ ಜನ ಪಂಡಿತರು, ಸ್ವಾಮಿಗಳು ತಮ್ಮ ತಮ್ಮ ಭಾಷೆಗಳಿಗೆ ಬದಲಾಯಿಸಿ ವಿವರಿಸಿ ಬರೆದರೂ, ಕೃಷ್ಣನು ಮೂರನೇ ಅವತಾರವಾಗಿ ಬರುವವರೆಗು ಅದರ ನಿಜಾರ್ಥ ಯಾರಿಗೂ ತಿಳಿದಿಲ್ಲ. ಅಲ್ಲಿಯವರೆಗೂ ಎಲ್ಲರೂ ಹೇಳಿಕೊಂಡಿರುವುದು ಕೃಷ್ಣನು ಹೇಳಿದ ಭಾವವಲ್ಲ. ಎಷ್ಟು ದೊಡ್ಡ ಹೆಸರು ಹೊಂದಿದ ಸ್ವಾಮೀಜಿಗಳು ಹೇಳಿದರೂ, ಬರೆದರೂ ದೇವರು ಧರ್ಮಗಳು ವಾಸ್ತವ ಭಾವನೆಗಳು ದೇವರಿಗೆ ತಿಳಿದಿವೆ ಮನುಷ್ಯರಿಗೆ ತಿಳಿದಿಲ್ಲ ಎನ್ನುವ ಸೂತ್ರದ ಪ್ರಕಾರ ಭಗವದ್ಗೀತೆ ಸರಿಯಾಗಿ ಯಾರಿಗೂ ತಿಳಿಯದೆಂದೇ ಹೇಳಬಹುದು. ಈ ಮಾತಿನಿಂದ ಸ್ವಾಮೀಜಿಗಳೆಲ್ಲರು ನನಗೆ ವಿರೋಧಿಗಳಾಗಿ ಹೋಗುತ್ತಾರೆಂದು ತಿಳಿದಿದೆ. ಆದರೂ ಸೂತ್ರದ ಪ್ರಕಾರ ಹೇಳುತ್ತಿದ್ದೇನೆಂದು, ಯಾರನ್ನು ಅವಹೇಳನಮಾಡುವುದಕ್ಕೆ ಅಲ್ಲವೆಂದು ಗ್ರಹಿಸಬೇಕು. ಭಗವದ್ಗೀತೆ ಹುಟ್ಟಿ ಐದುಸಾವಿರ ವರ್ಷಗಳಾದರೂ, ಅದು ನಮಗೆ ಅರ್ಥ ವಾಗಲಿಲ್ಲವೆಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಭಗವದ್ಗೀತೆ ಅರ್ಥ ಆಗಬೇಕೆಂದರೆ ಪುನಃ ಕೃಷ್ಣನೇ ಬಂದು, ಆದಿನ ಯಾವ ಭಾವದಿಂದ ಹೇಳಿದ್ದಾನೊ ಆ ಭಾವವನ್ನು ವಿವರಿಸಿ ಹೇಳಿದರೆ, ಆಗ ಭಗವದ್ಗೀತೆವೊಂದರ ಭಾವನೆ ತಿಳಿಯುತ್ತದೆ. ಆದ್ದರಿಂದ ಕೃಷ್ಣನು ಮೂರನೇ ಅವತಾರದಲ್ಲಿ, ಮೂರನೇ ಪುರುಷನಾಗಿ ಬಂದಾಗ ಗೀತೆಯನ್ನು ಸಂಪೂರ್ಣವಾಗಿ ತಿಳಿಸುತ್ತಾನೆ. ಕೃಷ್ಣನು ಹೇಳಿದ ಮಾತನ್ನು ಕೃಷ್ಣನೇ ವಿವರಿಸಿ ಹೇಳಿದರೆ ಆಗ ಅರ್ಥವಾಗುತ್ತದೆ ಹೊರತು ಬೇರೆಯವರು ಯಾರು ಹೇಳಿದರೂ ಹೇಳುವವರಿಗೂ ಸಹ ತಿಳಿದಿಲ್ಲ ಎಂದೇ ಹೇಳಬಹುದು. ಆದ್ದರಿಂದ ಅದು ನಮಗೂ ಸಹ ತಿಳಿದಿಲ್ಲ.

ಎರಡನೇ ಅವತಾರವಾದ ಯೇಸು ಜನ್ಮದಲ್ಲಿ ತಾನು ಹೇಳಿರುವುದೆಲ್ಲಾ ಹೇಳಿ ಕೊನೆಯಲ್ಲಿ ಹೀಗೆ ತಿಳಿಸಿದ್ದಾನೆ. **"ಈಗ ನಾನು ಹೇಳಿರುವುದು ನಿಮಗೆ ಯಾರಿಗೂ ಅರ್ಥವಾಗುವುದಿಲ್ಲ. ನನ್ನ ನಂತರ ಬರುವ ಆದರಣಕರ್ತ ನಾನು ಹೇಳಿದ ವಿಷಯಗಳನ್ನು ತಿಳಿದುಕೊಂಡು ವಿವರಿಸಿ ಹೇಳುತ್ತಾನೆ. ಆಗ ನಿಮಗೆ ನನ್ನ ಮಾತುಗಳು ಅರ್ಥವಾಗುತ್ತವೆ"** ಎಂದಿದ್ದಾನೆ. ಕೃಷ್ಣನು ಯೇಸುವಾಗಿದ್ದಾಗ ಹೇಳಿದ ಈ ಮಾತುಗಳನ್ನು ಅನುಸರಿಸಿ ಎರಡು ಸಾವಿರ ವರ್ಷಗಳಿಂದ ಯೇಸು ಹೇಳಿದ ಮಾತುಗಳು ಅರ್ಥವಾಗಲಿಲ್ಲವೆಂದು ತಿಳಿಯುತ್ತಿದೆ. ಕೃಷ್ಣನ ಮೂರನೇ ಅವತಾರದಲ್ಲಿಯೇ ಯೇಸು ಹೇಳಿದ ಮಾತುಗಳು ಸಹ ವಿವರಿಸಿ ಹೇಳಲಾಗುತ್ತದೆ. ಆಗ ಯೇಸು ಯಾರೊ, ಆತನು ಹೇಳಿದ ಮಾತುಗಳು ಏನೊ, ಆತನ ಮಾತುಗಳಿಗೆ ಭಾವವೇನೊ ತಿಳಿಯುತ್ತದೆ. ಅಲ್ಲಿಯವರೆಗು ನಾವು ಬೋಧಕರು ಎಂದು ಯೇಸು ಹೆಸರನ್ನು ಹೇಳಿಕೊಳ್ಳುತ್ತಾ, ಆತನ ಬೋಧನೆಗಳನ್ನು ವಿವರಿಸಿದರೂ, ಯೇಸು ಹೇಳಿದಂತೆ ಆದರಣಕರ್ತ ಹೇಳುವವರೆಗು ಅರ್ಥ ಆಗುವುದಿಲ್ಲ. ಯೇಸು ಮಾತಿನ ಪ್ರಕಾರ ಆದರಣಕರ್ತ ಮುಖಾಂತರವೆ ಯೇಸು ಹೇಳಿದ ಮಾತುಗಳ ವಿವರ ಏನೊ ತಿಳಿಯುತ್ತದೆ. ಆದರೆ ಅಲ್ಲಿಯವರೆಗೂ ಯಾವ ಬೋಧಕನು ಹೇಳಿದರೂ ಅರ್ಥ ಆಗುವುದಿಲ್ಲ. ಹಾಗೆ ಅರ್ಥವಾಗಿವೆ ಎಂದರೆ ಯೇಸು ಮಾತು ಅಸತ್ಯವಾಗುತ್ತದೆ. ಯೇಸು ಮಾತು ಎಂದಿಗೂ ಅಸತ್ಯ ಆಗುವುದಿಲ್ಲ. ಆದ್ದರಿಂದ ನಮಗೆ ಇಲ್ಲಿಯವರೆಗೂ ಯೇಸು ಹೇಳಿದ ಮಾತುಗಳು ಎಷ್ಟು ಬೆಲೆಯುಳ್ಳವೊ ಅರ್ಥವಾಗಲಿಲ್ಲವೆಂದು ಒಪ್ಪಿಕೊಳ್ಳುವುದು ಒಳ್ಳೆಯದು.

ಯೇಸು ಹೇಳಿದ ಮಾತುಗಳೆ ಅಲ್ಲ, ಕೃಷ್ಣನು ಹೇಳಿದ ಗೀತೆಯೂ ಸಹ ಅರ್ಥವಾಗಲಿಲ್ಲವೆಂದು ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ನಮಗೆ ದ್ವಾಪರಯುಗದಲ್ಲಿನ ಗೀತೆ, ಕಲಿಯುಗದಲ್ಲಿನ ಯೇಸು ವಾಕ್ಯಗಳನ್ನು ವಿವರಿಸಿ ಹೇಳುವುದಕ್ಕೆ ಮೂರನೇ ಅವತಾರ ಇದೆಯೆಂದು ತಿಳಿಯಬೇಕು. ಮೂರನೇ ಅವತಾರದಲ್ಲಿ ಕೃಷ್ಣನು, ಯೇಸು ಬೆರೆತಿದ್ದಾರೆ. ಆದ್ದರಿಂದ ಕೃಷ್ಣನ ಮಾತಿಗೆ

ಕೃಷ್ಣನು, ಯೇಸು ಮಾತುಗಳಿಗೆ ಯೇಸು ಮೂರನೇ ಪುರುಷನಿಂದ ವಿವರಿಸಿ ಹೇಳುತ್ತಾರೆಂದು ತಿಳಿದುಕೊಳ್ಳಬಹುದು. ಮೂರನೆಯವನು ಹಾಗೆ ಗತಕಾಲದಲ್ಲಿನ ವಾಕ್ಯಗಳಿಗೆ ವಿವರವನ್ನು ಹೇಳುತ್ತಾ, ಸಂದರ್ಭಾನುಸಾರ ತಾನು ಹೇಳ ಬೇಕಾಗಿರುವುದನ್ನು ಸಹ ಹೇಳುತ್ತಾ ಹೋಗುತ್ತಾನೆ. ಒಂದುಕಡೆ ಗತದಲ್ಲಿ ತಾನೇ ಹೇಳಿದ ಗೀತೆಗು, ವಾಕ್ಯಗಳಿಗು ಸರಿಯಾದ ಭಾವವನ್ನು ತಿಳಿಸುತ್ತಾ ಮಧ್ಯ ಮಧ್ಯದಲ್ಲಿ ಅಲ್ಲಿಯವರೆಗು ಉಳಿದಿರುವ ಧರ್ಮಗಳನ್ನು, ಸೃಷ್ಟಿ ಆದಿಯಿಂದ ತಿಳಿಯದ ಹೊಸದಾಗಿರುವ ಧರ್ಮಗಳ ವಿವರವನ್ನು ತಿಳಿಸುತ್ತಾ ಹೋಗುತ್ತಾನೆ. ಇಲ್ಲಿ ಕೆಲವರು ಒಂದು ಪ್ರಶ್ನೆ ಕೇಳಬಹುದು. ಅದು ಏನೆಂದರೆ! ಮೂರನೇ ಅವತಾರದಲ್ಲಿ ಕೃಷ್ಣನು, ಯೇಸು ಕಲೆತು ಇದ್ದಾರೆ. ಗತಕಾಲದಲ್ಲಿ ಕೃಷ್ಣನು ಹೇಳಿದ ಮಾತಿಗೆ ಕೃಷ್ಣನು, ಯೇಸು ಹೇಳಿದ ಮಾತುಗಳಿಗೆ ಯೇಸು ಮೂರನೇ ಅವತಾರದಿಂದ ಹೇಳುತ್ತಾನೆಂದಿದ್ದಾರೆ. ಒಬ್ಬ ಮನುಷ್ಯನಲ್ಲಿ ಎರಡು ದೇವ್ವಗಳು ತೂರಿಕೊಂಡಿದ್ದು ಮಾತನಾಡಿದಂತೆ ಮೂರನೇ ಅವತಾರವಾದ ಮನುಷ್ಯನಲ್ಲಿ ದೆವ್ವಗಳಂತೆ ಕೃಷ್ಣನು, ಯೇಸು ಇಬ್ಬರು ಇದ್ದಾರಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನಿಮಗೆ ಸುಲಭವಾಗಿ ಅರ್ಥವಾಗುವುದಕ್ಕೆ ನಾವು ಹಾಗೆ ಹೇಳಿದ್ದೇವೆ. ಆದರೆ ಮೂರನೇ ಅವತಾರದಲ್ಲಿ ಪ್ರತ್ಯೇಕಿಸಿ ಕೃಷ್ಣನು, ಯೇಸು ಇರುವುದಿಲ್ಲ. ದ್ವಾಪರ ಯುಗದಲ್ಲಿ ಧರ್ಮಪ್ರಚಾರಕ್ಕಾಗಿ ದೇವರಿಂದ ಭಗವಂತನಾಗಿ ಯಾವ ಶಕ್ತಿ ಮೀಸಲಿರಿಸಿಲ್ಪಟ್ಟಿದೆಯೋ, ಆ ಶಕ್ತಿಯೇ ಎರಡನೇಸಲ ಹುಟ್ಟಿದೆ. ಆಗ ಗುರುತಿಗಾಗಿ ಆ ಶರೀರಕ್ಕೆ ಯೇಸು ಎಂದು ಹೆಸರು ಇಡಲಾಗಿದೆ. ಹಾಲಿನವನು ಬ್ರಾಹ್ಮಣ ಬೀದಿಯೊಳಗೆ ಹೋಗಿ ಶಂಕರಯ್ಯ ಎನ್ನುವ ತನ್ನ ಹೆಸರನ್ನು ಶಂಕರಶಾಸ್ತ್ರಿ ಎಂದು ಬದಲಿಸಿಕೊಂಡು ಹಾಲನ್ನು ಅಲ್ಲಿ ಮಾರಿದಂತೆ, ಕೃಷ್ಣನೇ ಇಸ್ರಾಯೇಲ್ ದೇಶದಲ್ಲಿ ತನ್ನ ಹೆಸರನ್ನು ಯೇಸುವಾಗಿ ಹೇಳಿಕೊಂಡು ಧರ್ಮಗಳನ್ನು ತಿಳಿಸಿದ್ದಾನೆಂದು ಗ್ರಹಿಸಬೇಕು. ಹಾಗೆ ಹೆಸರನ್ನು ಬದಲಿಸಿಕೊಂಡು ಹೇಳಿದ ಶಕ್ತಿಯಾದ ಕೃಷ್ಣನೇ, ಮೂರನೇ ಅವತಾರದಲ್ಲಿ "ಆದರ್ಶಕರ್ತ" ಎನ್ನುವ ಹೆಸರನ್ನು ಇಟ್ಟುಕೊಂಡು ಬರುತ್ತಾನೆಂದು ದ್ವಾಪರಯುಗದ ಕೊನೆಯ ಸಮಯದಲ್ಲಿ ಬೇಡನಿಗೆ ಹೇಳಿ ಹೋಗುವುದಾಗಿದೆ. ಯೇಸುವಾಗಿರುವವನು

"ಆದರಣಕರ್ತ" ಬರುತ್ತಾನೆಂದು ಹೇಳಿದ ಕೃಷ್ಣನು ಮೊದಲು ದ್ವಾಪರಯುಗದಲ್ಲಿ ಬೇಡನಿಗೆ ಹೇಳಿದಾಗ ಬರುವ ಮೂರನೆಯವನು "ಆದರ್ಶಕರ್ತ" ಎನ್ನುವ ಹೆಸರು ಹೊಂದಿರುತ್ತಾನೆಂದು ಹೇಳಿದ್ದಾನೆ. ಇಲ್ಲಿ ಆದರಣಕರ್ತ, ಆದರ್ಶಕರ್ತ ಎನ್ನುವ ಎರಡು ಹೆಸರುಗಳು ಕಾಣಿಸುತ್ತಿವೆ. ಹೇಳಿದವನು ಒಂದೇ ಶಕ್ತಿ (ಒಬ್ಬನೇ ವ್ಯಕ್ತಿ) ಆದಾಗ ಎರಡು ಹೆಸರುಗಳು ಹೇಳುವುದೇನು? ಯಾವುದು ನಿಜವೆಂದು ನಂಬಬೇಕು ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರ ಏನೆಂದರೆ!

ಈ ಪ್ರಪಂಚವನ್ನು, ಅದರಲ್ಲಿನ ಜೀವರಾಶಿಗಳನ್ನು ಸೃಷ್ಟಿಸಿದ ದೇವರೆ ಸಾಕ್ಷಾತ್ತು ಭಗವಂತನಾಗಿ ಅವತರಿಸಿದಾಗ, ತನ್ನ ಮೂರನೇ ಅವತಾರಗಳಲ್ಲಿ ಒಂದರಲ್ಲಿ ಒಂದು ಹೆಸರನ್ನು ಹೇಳಿ, ಎರಡನೆಯದರಲ್ಲಿ ಮತ್ತೊಂದು ಹೆಸರನ್ನು ಹೇಳುವುದೇನು? ಎಂದು ನನ್ನ ಬುದ್ಧಿಗೂ ಸಹ ನಿಮಗೆ ಬಂದಿರುವ ಪ್ರಶ್ನೆ ಬಂದಿದೆ. ನಿಮಗೆ ಚೆನ್ನಾಗಿ ಅರ್ಥವಾಗುವುದಕ್ಕೆ ಶರೀರದಲ್ಲಿ ಪ್ರಶ್ನೆ ಹೇಗೆ ಹುಟ್ಟುತ್ತಿದೆ. ಅದಕ್ಕೆ ಉತ್ತರ ಹೇಗೆ ಬರುತ್ತಿದೆಯೊ, ಶರೀರದೊಳಗೆ ನಡೆಯುವು ದನ್ನು ವಿವರಿಸುತ್ತಾ ಹೇಳಿಕೊಳ್ಳೋಣ. ನನ್ನಲ್ಲಿನ ಬುದ್ಧಿ ಎರಡು ಹೆಸರುಗಳು ಏಕೆ ಹೇಳಿದ್ದಾನೆಂದು ಒಂದು ಕಡೆ ಪ್ರಶ್ನಿಸಿದೆ, ಅದೇ ಬುದ್ಧಿಯೇ ದೇವರು ನಿಜವೇ ಹೇಳುತ್ತಾನೆ ಸುಳ್ಳು ಏಕೆ ಹೇಳುತ್ತಾನೆಂದು ಮತ್ತೊಂದು ಕಡೆಯಿಂದ ಉತ್ತರವನ್ನು ಹೇಳಿದೆ. ನಾನು ನನ್ನ ಬುದ್ಧಿಗೆ ಪಕ್ಕದಲ್ಲಿದ್ದು ನೋಡುತ್ತಿದ್ದೇನೆ. ನನ್ನ ಬುದ್ಧಿ ಒಂದು ಕಡೆ ಪ್ರಶ್ನೆ ಹಾಕಿದೆ. ಮತ್ತೊಂದು ಕಡೆ ಉತ್ತರ ಹೇಳಿದೆ. ನಂತರ ತಕ್ಷಣ ಬುದ್ಧಿ ಮತ್ತೊಂದು ಪ್ರಶ್ನೆಯನ್ನು ಪ್ರಶ್ನಿಸಿದೆ. ನೀನೆನ್ನುವಂತೆ ದೇವರು ನಿಜವೇ ಹೇಳಿದರೆ ಯಾವುದೋ ಒಂದನ್ನು ಹೇಳಬಹುದು ಅಲ್ಲವೆ! ಬುದ್ಧಿಯೇ ಹೀಗೆ ಉತ್ತರ ಹೇಳುತ್ತಿದೆ. ಹಾಗೆ ಎರಡು ಹೆಸರುಗಳು ಹೇಳುವುದಕ್ಕೆ ಕಾರಣ ಇರುತ್ತದೆ. ಅದಕ್ಕೆ ನನ್ನ ಬುದ್ಧಿಯೇ ಪುನಃ ಕೇಳಿದೆ. ಆ ಕಾರಣವೇನೊ ಹೇಳು ಇಲ್ಲದಿದ್ದರೆ ಭಗವಂತನು ಹೇಳಿರುವುದು ತಪ್ಪು ಎಂದು ಒಪ್ಪಿಕೊ ಎಂದಿದೆ. ಆ ಮಾತಿಗೆ ಭಗವಂತನು ತಪ್ಪು ಹೇಳುತ್ತಾನಾ ಎಂದಿಗೂ ಹೇಳುವುದಿಲ್ಲ. ಹಾಗೆ ಎರಡು ಹೆಸರುಗಳು ಹೇಳುವುದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳು

ಎಂದು ಬುದ್ಧಿ ಬುದ್ಧಿಗೇ ಹೇಳಿದೆ. ನಾನು ಗಮನಿಸುತ್ತಿರುವಾಗ ನನ್ನ ಪಕ್ಕದಲ್ಲಿರುವ ಬುದ್ಧಿ ಎರಡು ವಿಧಗಳಾಗಿ ಪ್ರಶ್ನೆ ಉತ್ತರವಾಗಿ ಮಾತನಾಡಿಕೊಳ್ಳುವುದು ನಡೆದಿದೆ. ನನ್ನ ಒಬ್ಬನಿಗೇ ಅಲ್ಲ ಪ್ರತಿ ಶರೀರದಲ್ಲಿಯು ಬುದ್ಧಿ ಎರಡು ವಿಧಗಳಾಗಿ ಪ್ರತಿ ವಿಷಯವನ್ನು ವಿಂಗಡಿಸುತ್ತದೆ. ಪ್ರಸ್ತುತಕ್ಕೆ ನನ್ನ ಶರೀರದಲ್ಲಿ ನಾನು ನೋಡುತ್ತಿದ್ದಂತೆಯೇ ನನ್ನ ಬುದ್ಧಿ ಭಗವಂತನು ಎರಡು ಹೆಸರುಗಳನ್ನು ಏಕೆ ಹೇಳಿದ್ದಾನೊ ವಿವರಿಸುತ್ತದೆ. ಅದನ್ನೇ ಹೊರಗೆ ನಿಮಗೆ ತಿಳಿಯುವಂತೆ ವಿವರಿಸುತ್ತಿದ್ದೇನೆ ನೋಡಿರಿ.

ಭೂಮಿ ಮೇಲಿರುವ ಮನುಷ್ಯರಲ್ಲಿ ಮೂರು ವಿಧದವರಿದ್ದಾರೆಂದು ಹೇಳಬಹುದು. ಒಂದು ವಿಧದ ಮನುಷ್ಯರು ದೇವರ ಮೇಲೆ ವಿಶ್ವಾಸ ಇರುವವರು, ಎರಡನೇ ವಿಧದವರು ದೇವರ ಮೇಲೆ ವಿಶ್ವಾಸವಿಲ್ಲದವರು, ಮೂರನೆಯವರು ದೇವರೆನ್ನುವ ವಿಷಯವನ್ನೇ ತಿಳಿಯದೆ ತಟಸ್ಥವಾಗಿರುವವರು. ಮೂರನೇ ವಿಧದವರು ಹಗೆಯುವುದು ಇಲ್ಲ ಹೂಣಿಸುವುದು ಇಲ್ಲ ಎನ್ನುವಂತೆ ದೇವರ ಕುರಿತು ಇದ್ದಾನೆಂದಾಗಲಿ, ಇಲ್ಲವೆಂದಾಗಲಿ ಮಾತನಾಡುವುದಿಲ್ಲ. ಯಾರಾದರೂ ದೇವರಿದ್ದಾನೆಂದು ಹೇಳಿದರೂ ಕೇಳುತ್ತಾರೆ. ಅಷ್ಟೇ ಹೊರತು ನಂತರ ಆ ಮಾತನ್ನು ಹಿಡಿಸಿಕೊಳ್ಳುವುದಿಲ್ಲ. ದೇವರು ಇಲ್ಲವೆಂದು ಹೇಳುವವರ ಮಾತುಗಳನ್ನು ಸಹ ಕೇಳುತ್ತಾರೆ. ಆದರೆ ಆ ಮಾತುಗಳನ್ನು ಸಹ ಹಿಡಿಸಿಕೊಳ್ಳುವುದಿಲ್ಲ. ನಾವು ಅಂತಹವರನ್ನು ಬಹಳ ಜನರನ್ನು ನೋಡಿದ್ದೇವೆ. ಒಳ್ಳೆಯ ಜ್ಞಾನವಿರುವ ಗ್ರಂಥಗಳನ್ನು ಅವರಿಗೆ ಕೊಟ್ಟಿದ್ದೇವೆ. ಕೊಟ್ಟರೆ ತೆಗೆದುಕೊಳ್ಳುತ್ತಾರೆ ಆದರೆ ಅವರು ಓದುವುದಿಲ್ಲ. ಅವರು ಓದುವುದಿಲ್ಲವೆಂದು ತಿಳಿದು, ನಾವೇ ಜ್ಞಾನವನ್ನು ಅರ್ಥವಾಗುವಂತೆ ವಿವರವಾಗಿ ಹೇಳಬೇಕೆಂದು ಹೇಳಿದರೆ ಕೇಳುತ್ತಾರೆ. ಆದರೆ ಕೇಳಿದಕ್ಕೆ ಯಾವುದೇ ಸ್ಪಂದನೆ ಇರುವುದಿಲ್ಲ. ಅಂತವರು ಯಾರು ಹೇಳಿದರೂ ಕೇಳುತ್ತಾರೆ. ಆದರೆ ಅವರಲ್ಲಿ ಬದಲಾವಣೆ ಇರುವುದಿಲ್ಲ. ಅಂತಹ ಮನುಷ್ಯರೆಲ್ಲರನ್ನು ಒಂದು ವಿಧವಾಗಿ ಹೇಳಬಹುದು. ಅಂತವರು ಭೂಮಿಮೇಲೆ ಹೆಚ್ಚಾಗಿ ಇದ್ದಾರೆ. ಅವರ ದಾರಿಯಲ್ಲಿ ಅವರು ಹೋಗುತ್ತಾರೆ ವಿನಃ ಅವರು ಯಾರ

ದಾರಿಗು ಬರುವುದಿಲ್ಲ. ಇನ್ನೂ ಕೆಲವು ಮನುಷ್ಯರಲ್ಲಿ ಕೆಲವರು ದೇವರ ಮೇಲೆ ವಿಶ್ವಾಸ ಇರುವವರಿದ್ದಾರೆ. ಆದರೆ ಅವರಿಗೆ ದೇವರ ಮೇಲೆ ವಿಶ್ವಾಸ ಇದ್ದರೂ, ಎಲ್ಲರೂ ಒಂದೇ ದಾರಿಯಲ್ಲಿ ಹೋಗದಂತೆ ಅನೇಕ ವಿಧಗಳಾಗಿ ಅವರು ದೇವರನ್ನು ಆರಾಧಿಸುತ್ತಿದ್ದಾರೆ. ಅವರಲ್ಲಿ ಕೆಲವರದು ಒಳ್ಳೆಯ ಮಾರ್ಗ ಆಗಬಹುದು. ಕೆಲವರದು ಅಷ್ಟು ಒಳ್ಳೆಯ ಮಾರ್ಗ ಅಲ್ಲದಿರಬಹುದು. ಹೀಗೆ ವಿಶ್ವಾಸಿಗಳನ್ನು ಕುರಿತು ಅಲ್ಲದೆ ಅವಿಶ್ವಾಸ ಇರುವವರು ಸಹ ಭೂಮಿಮೇಲೆ ಕೆಲವರಿದ್ದಾರೆ. ಅವರೇ ಪೂರ್ತಿ ನಾಸ್ತಿಕರು, ಅಂತಹವರು ಪೂರ್ತಿಯಾಗಿ ದೇವರೇ ಇಲ್ಲವೆನ್ನುತ್ತಿರುತ್ತಾರೆ.

ಸ್ಥೂಲವಾದ ಪ್ರಪಂಚ ಓದುಗಳು ಓದಿದ ಕೆಲವರು, ತಮಗೆ ಸ್ವಲ್ಪಮಟ್ಟಿನ ವಿಜ್ಞಾನ ತಿಳಿದಷ್ಟು ಮಾತ್ರಕ್ಕೆ, ವಿಜ್ಞಾನವೆಲ್ಲ ತಿಳಿದುಹೋಗಿದೆ ಎನ್ನುವ ಭ್ರಮೆಯಲ್ಲಿ ಮುಳುಗಿಹೋಗಿ, ಕೊನೆಗೆ ದೇವರೇ ಇಲ್ಲವೆನ್ನುತ್ತಿದ್ದಾರೆ. ದೇವರು ಎನ್ನುವ ಮಾತು ಕೇವಲ ಕೆಲವರ ಭ್ರಮಯೇ ಎಂದು ಹೇಳುತ್ತಿರುವರು. ಎಲ್ಲಾ ತಾವೇ ಮಾಡಿಕೊಳ್ಳುತ್ತಿದ್ದೇವೆಂದು, ನಾವು ಕಂಡುಕೊಂಡ ಯಂತ್ರಗಳಿಂದ ಪರಿಕರಗಳಿಂದ ನಾವು ಸುಖಗಳನ್ನು ಅನುಭವಿಸುತ್ತಿದ್ದೇವೆಂದು ಹೇಳಿಕೊಳ್ಳುತ್ತಿದ್ದಾರೆ. ನಮ್ಮ ಮೇಧಸ್ಸಿನಿಂದ ಎಷ್ಟೋ ಕಂಡುಹಿಡಿದಿದ್ದೇವೆ, ನಂತರ ಎಷ್ಟೋ ಕಂಡುಹಿಡಿ ಯುತ್ತೇವೆ ಎಂದು ಹೇಳುತ್ತಾ, ಈ ದಿನ ಸೆಲ್‌ಫೋನ್‌ನಲ್ಲಿ ಮಾತನಾಡುತ್ತಿದ್ದೇವೆ ಎಂದರೂ, ಕಂಪ್ಯೂಟರ್‌ಗಳಿಂದ ಕೆಲಸ ಮಾಡಿಸುತ್ತಿದ್ದೇವೆಂದರೂ, ವಿಮಾನದಲ್ಲಿ ಕೆಲವೇ ಕ್ಷಣಗಳಲ್ಲಿ ಗುರಿಯನ್ನು ಸೇರುತ್ತಿದ್ದೇವೆಂದರೂ ಇದೆಲ್ಲವೂ ಮನುಷ್ಯ ಕಂಡುಹಿಡಿದ ವಿಜ್ಞಾನದಿಂದ ನಡೆಯುತ್ತಿದೆ. ವಿಜ್ಞಾನವನ್ನು ತಿಳಿಯದ ಮನುಷ್ಯರು ತಮ್ಮನ್ನು ತಾವು ನಂಬದೆ ದೇವರನ್ನು ಮೂಢವಾಗಿ ನಂಬುತ್ತಿದ್ದಾರೆಂದು ಹೇಳುತ್ತಾ, ದೇವರನ್ನು ನಂಬುವವರನ್ನು ತಿಳುವಳಿಕೆ ಇಲ್ಲದವರಾಗಿ ಭಾವಿ ಸುತ್ತಿರುತ್ತಾರೆ. ದೇವರನ್ನು ಅಸೂಯೆಯಿಂದ ಮಾತನಾಡುತ್ತಿರುತ್ತಾರೆ. ಇಂತಹ ವರನ್ನು ಕುರಿತು ಒಂದು ಉದಾಹರಣೆಯನ್ನು ಹೇಳಿಕೊಳ್ಳೋಣ. ಒಬ್ಬನು ತನ್ನ ತಮ್ಮನಿಗೆ ನೀತಿಯನ್ನು ಹೇಳುತ್ತಾ ನಾನು ಇನ್ನೊಬ್ಬರ ಮೇಲೆ ಆಧಾರಪಟ್ಟು

ಬದುಕುತ್ತಿಲ್ಲ, ನನ್ನ ಕಾಲಿನ ಮೇಲೆ ನಾನು ನಿಂತು ಬದುಕುತ್ತಿದ್ದೇನೆ. ಹಾಗೆಯೇ ನೀನು ನಿನ್ನ ಕಾಲಿನ ಮೇಲೆ ನಿಲ್ಲು ಎಂದನಂತೆ. ಆ ಮಾತನ್ನು ಕೇಳಿದ ಅವನ ತಮ್ಮನು ನಿನ್ನ ಕಾಲಿನ ಮೇಲೆ ನಿಂತಿಲ್ಲ, ನಾನು ನನ್ನ ಕಾಲುಗಳ ಮೇಲೆ ನಿಂತಿಲ್ಲ. ಇಬ್ಬರೂ ಸೇರಿ ಭೂಮಿಮೇಲೆ ನಿಂತಿದ್ದೇವೆಯೆಂದು ಎಂದನಂತೆ. ತಮ್ಮನು ತಿಳುವಳಿಕೆಯಿಲ್ಲದವನೆಂದು, ಅನ್ನ ತಮ್ಮನಿಗೆ ಬುದ್ಧಿವಂತಿಗೆಯಿಂದ ನೀತಿಯನ್ನು ಹೇಳಿದನು. ಆದರೆ ತಮ್ಮನು ಕೇಳಿದ ಮಾತನ್ನನುಸರಿಸಿ ಅಣ್ಣನೇ ಬುದ್ಧಿ ಕಡಿಮೆಯವನೆಂದು ತಿಳಿಯುತ್ತಿದೆ. ನನ್ನ ಕಾಲಿನಮೇಲೆ ನಾನು ನಿಂತಿದ್ದೇನೆಂದುಕೊಳ್ಳುವುದು ಕೇವಲ ಭ್ರಮೆ ಮಾತ್ರವೆ. ಹಾಗೆ ಅಂದುಕೊಳ್ಳುವವನು ತಾವು ಮೊದಲಿನಿಂದ ಭೂಮಿಮೇಲೆ ನಿಂತಿದ್ದೇನೆಂಬ ಮಾತನ್ನು ಮರೆತು ಹೋಗಿದ್ದಾನೆ. ಇದರ ಪ್ರಕಾರ ವಿಜ್ಞಾನ ತಿಳಿದವನು ತಮ್ಮ ವಿಜ್ಞಾನಕ್ಕೆ ಆಧಾರವಾದ ಮೆದುಳನ್ನು ದೇವರೇ ಕೊಟ್ಟಿದ್ದಾನೆಂದು, ದೇವರುಕೊಟ್ಟ ಮೆದುಳು ಇಲ್ಲದಂತೆ ಯಾರೂ ವಿಜ್ಞಾನಿ ಆಗಲಾರನೆಂದು, ಶರೀರದಲ್ಲಿನ ಮೆದುಳೆ ಸಮಸ್ತ ವಿಜ್ಞಾನಕ್ಕು ಆಧಾರವೆಂದು ತಿಳಿಯದೆ, ನಾನು ವಿಜ್ಞಾನಿಯೆಂದು ತಿಳಿದುಕೊಳ್ಳುವುದು ನೀರು ಬಿಟ್ಟು ಈಜಿದಂತಾಗುತ್ತದೆ. ಹಾಗೆಯೇ ಭೂಮಿಮೇಲೆ ನಿಂತಿರುವ ವಿಷಯವನ್ನು ಮರೆತುಹೋಗಿ ನನ್ನ ಕಾಲಿನ ಮೇಲೆ ನಾನು ನಿಂತಿದ್ದೇನೆ ಎನ್ನುವಂತಿರುತ್ತದೆ.

ಸಮಸ್ತ ಜ್ಞಾನಕ್ಕು, ವಿಜ್ಞಾನಕ್ಕು ದೇವರೇ ಆಧಾರವೆಂದು ತಿಳಿಯದೆ, ನಾವು ವಿಜ್ಞಾನಿಗಳೆಂದುಕೊಳ್ಳುವವರ ಮೆದುಳಿನಲ್ಲಿನ ಆಲೋಚನೆಗಳನ್ನು, ಊಹೆಗಳನ್ನು ದೇವರೇ ಕೊಡುತ್ತಿರುವಾಗ, ಯಾವ ಶಾಸ್ತ್ರಜ್ಞನು ಯಾವುದು ಕಂಡುಹಿಡಿದರೂ ಆತನಿಗೆ ಆ ಊಹೆಯನ್ನು ಕೊಟ್ಟವನು ಶರೀರದಲ್ಲಿನ ದೇವರೇ ಆಗಿರುವಾಗ, ಅದು ತಿಳಿಯದೆ ನಾನೇ ಕಂಡುಹಿಡಿದಿದ್ದೇನೆಂದುಕೊಳ್ಳುವುದು, ಭೂಮಿಯನ್ನು ಬಿಟ್ಟು ತನ್ನ ಕಾಲುಗಳ ಮೇಲೆ ತಾನು ನಿಂತಿದ್ದೇನೆಂದು ಹೇಳಿದಂತಿರುತ್ತದೆ. ಅಂತಹವನು ತಮ್ಮ ಮೇಧಸ್ಸಿಗೆ ತಾವೇ ಕಾರಕರೆನ್ನುವ ಅಹಂಕಾರದಿಂದ ತುಂಬಿದವನಾಗಿ, ತಮ್ಮ ಶರೀರದಲ್ಲಿನ ದೇವರನ್ನು ಸಹ ದೂಷಿಸುತ್ತಿದ್ದಾರೆ. ನನಗೆ ತಿಳಿಯದಂತೆ ನನ್ನಲ್ಲಿ ಯಾರಿದ್ದಾರೆಂದು ಪ್ರಶ್ನಿಸುತ್ತಿದ್ದಾರೆ.

ಅಂಥವರನ್ನು ಕುರಿತು ಕೃಷ್ಣನು ಭಗವದ್ಗೀತೆಯಲ್ಲಿ ದೈವಾಸುರ ಸಂಪದ್ವಿಭಾಗ ಯೋಗ ಎನ್ನುವ ಅಧ್ಯಾಯದಲ್ಲಿ 18ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ.

**18ಶ್ಲೋ॥ ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂಚ ಸಂಶ್ರಿತಾಃ ।**
**ಮಾ ಮಾತ್ಮ ಪರದೇಹೇಷು ಪ್ರದ್ವಿಷಂತೋ ಭ್ಯ ಸೂಯಕಾಃ ॥**

**ಭಾವಾರ್ಥ :–** "ಅಂಥವರಲ್ಲಿ ಅಹಂಕಾರ ಪೂರ್ತಿಯಾಗಿ ಇರುವಾಗ ಕಾಮ, ಕ್ರೋಧ, ಗರ್ವ ಬಲವಾಗಿ ಕೆಲಸಮಾಡಿದಾಗ, ತಮ್ಮ ಶರೀರದಲ್ಲಿಯೂ ಮತ್ತು ಇತರರ ಶರೀರಗಳಲ್ಲಿಯೂ ಇರುವಂತಹ ನನ್ನನ್ನು ಅಸೂಯೆಯಿಂದ ದ್ವೇಷಿಸುತ್ತಿದ್ದಾರೆ" ಎಂದು ಕೃಷ್ಣನು ಹೇಳಿದ್ದಾನೆ. ಅಂಥವರನ್ನು ತಾನು ಏನು ಮಾಡುತ್ತಾನೊ ಸಹ ಪಕ್ಕದ ಶ್ಲೋಕದಲ್ಲಿ ಹೇಳಿದ್ದಾನೆ.

**19 ಶ್ಲೋ॥ ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾ ಮ್ಯಜಸ್ರ ಮಶುಭಾ ನಾಸುರೀ ಷ್ವೇವ ಯೋನಿಷು॥**

**20ಶ್ಲೋ॥ ಆಸುರೀಂ ಯೋನಿ ಮಾಪನ್ನಾ ಮೂಢಾ ಜನ್ಮನಿ ಜನ್ಮನಿ।**
**ಮಾ ಮಪ್ರಾ ಪ್ಯೈವ ಕೌಂತೇಯ ತತೋಯಾಂತ್ಯಧಮಾಂಗತಿಮ್॥**

**ಭಾವಾರ್ಥ :** "ಕ್ರೂರರು, ದ್ವೇಷಿಗಳು, ಶುಭವನ್ನು ದೂಷಿಸುವ ಆ ನರಾಧಮರನ್ನು ಅಸುರ ಯೋನಿಗಳಲ್ಲಿಯೇ ಹಾಕಿ, ಸಂಸಾರ ದುಃಖಗತಿಗಳನ್ನು ಹೊಂದುವಂತೆ ಮಾಡುತ್ತೇನೆ. ಹಾಗೆ ಅಸುರ ಯೋನಿಗಳಲ್ಲಿ ಜನ್ಮಿಸಿದವರು ಜನ್ಮ ಜನ್ಮಕ್ಕು ಅಜ್ಞಾನಿಗಳಾಗುತ್ತಾ, ನನ್ನನ್ನು ಹೊಂದುವ ಜ್ಞಾನವೊಂದರ ವಿಧಾನವೇ ತಿಳಿಯಲಾರರು. ಅಂಥವರು ಜನ್ಮ ಜನ್ಮಕ್ಕು ಅದೋಗತಿಯನ್ನು ಹೊಂದುತ್ತಾರೆ. ಅವರಿಗೆ ನನ್ನ ಜ್ಞಾನವೊಂದರ ಗಟ್ಟು ಸಿಗುವುದಿಲ್ಲ" ಎಂದು ಕೃಷ್ಣನು ನಾಸ್ತಿಕವಾದರನ್ನು ಕುರಿತು ಮೊದಲೆ ಹೇಳಿದ್ದಾನೆ.

ದೇವರ ಮೇಲೆ ಎಂತಹ ನಂಬಿಕೆಯಿಲ್ಲದೆ ದೇವರನ್ನು ದೂಷಿಸುವವರು, ದೇವರ ಸ್ಥಾಯಿಯನ್ನು ಅವಹೇಳನ ಮಾಡುತ್ತಾ ಮಾತನಾಡುವವರು,

ಎಲ್ಲಾ ಕೆಲಸಗಳಿಗು ತಮ್ಮ ತಿಳುವಳಿಕೆ ಹೊರತು ದೇವರ ಪ್ರಮೇಯ ಇಲ್ಲವೆನ್ನು ವವರು, ವಿಜ್ಞಾನವನ್ನು (ಸೈನ್ಸ್) ಅಡ್ಡ ಇಟ್ಟುಕೊಂಡು ಸೈನ್ಸಿಗೆ ಆಧಾರವಾದ ದೇವರನ್ನು ಇಲ್ಲ ಎನ್ನುವವರು ಯಾರಾದರೆ ಇದ್ದರೋ, ಅಂಥವರು ಎಂದಿಗಾದರೂ ದೇವರ ಜ್ಞಾನವೇನೊ ನೋಡಬೇಕೆಂದುಕೊಂಡರೂ, ಅವರಿಗೆ ತನ್ನ ಜ್ಞಾನವೊಂದರ ಗಟ್ಟು ಸಿಗದಂತೆ ಮಾಡುತ್ತೇನೆಂದು ದೇವರೇ ಹೇಳಿದ್ದಾನೆ. ಈಗಿನಕಾಲದಲ್ಲಿ ದೈವಜ್ಞಾನ ಎಷ್ಟೋ ಗ್ರಂಥರೂಪಗಳಲ್ಲಿ ಮತ್ತು ದೃಶ್ಯರೂಪಗಳಾದ ಡಿ.ವಿ.ಡಿ ಗಳಲ್ಲಿಯು ದೊರೆಯುತ್ತಿದೆ. ಹಾಗಿರುವಾಗ ಜ್ಞಾನವನ್ನು ತಿಳಿದು ಕೊಳ್ಳುವುದಕ್ಕೆ ಗುರು ಹತ್ತಿರಕ್ಕೆ ಹೋಗಬೇಕಾದ ಅವಶ್ಯವಿಲ್ಲ. ದೇವರು ನನ್ನ ಜ್ಞಾನ ನಿಮಗೆ ಸಿಗುವುದಿಲ್ಲ ಎಂದರೂ, ಅದು ಬಜಾರಿನಲ್ಲಿ ಹಣ ಇಟ್ಟರೆ ಗ್ರಂಥರೂಪಗಳಲ್ಲಿ, ದೃಶ್ಯರೂಪಗಳಲ್ಲಿ ದೊರೆಯುತ್ತಿದೆ ಅಲ್ಲವೆ! ಎಂದು ಕೆಲವರು ತಿಳುವಳಿಕೆಯುಳ್ಳವರು ಅಂದುಕೊಳ್ಳುತ್ತಿದ್ದಾರೆ. ನಾವು ಗುರುವಿನ ಹತ್ತಿರಕ್ಕೆ ಹೋಗದಿದ್ದರೂ ಆತನ ಜ್ಞಾನ ನಮ್ಮ ಮನೆಗೆ ಬರುತ್ತಾ ಇದೆ. ನಮಗೆ ಜ್ಞಾನ ತಿಳಿಯುತ್ತಾ ಇದೆ ಅಂದುಕೊಳ್ಳುವವರು ಇದ್ದಾರೆ. ದೇವರ ಮೇಲೆ ವಿಶ್ವಾಸ ಇಲ್ಲದವರಿಗೆ, ಜ್ಞಾನದ ಮೇಲೆ ಶ್ರದ್ಧೆಹೊಂದಿದರೂ, ಗುರುಗಳ ಮೇಲೆ ವಿಶ್ವಾಸ ಇಲ್ಲದವರಿಗೆ ಗುರುವೊಂದರ ಜ್ಞಾನದ ಮೇಲೆ ಶ್ರದ್ಧೆ ಇದ್ದರೂ, ಆ ಜ್ಞಾನ ಗ್ರಂಥರೂಪಗಳಲ್ಲಿ ದೊರೆತರೂ ಗ್ರಂಥದಲ್ಲಿನ ಜ್ಞಾನ ತಲೆಯೊಳಗೆ ಏರುವುದಿಲ್ಲ. ಅದು ಏಕೆ ಏರುವುದಿಲ್ಲ ಎಂದರೆ! ತಿಳಿಯುವ ಜ್ಞಾನದಲ್ಲಿ ಅನೇಕ ಸಂಶಯಗಳು ಏರ್ಪಟ್ಟು ಜ್ಞಾನ ಅರ್ಥ ಆಗದಂತೆಹೋಗುತ್ತದೆ. ಒಂದುವೇಳೆ ಅರ್ಥವಾದರೂ, ಅದರ ಅನುಭವ ಅಥವಾ ಆಚರಣೆ ಅವರಲ್ಲಿ ಇಲ್ಲದಂತೆ ಹೋಗುತ್ತದೆ. ಹೀಗೆ ಎರಡು ವಿಧಗಳಾಗಿ ಜ್ಞಾನ ಅವನಿಗೆ ಅಂಟದಂತೆ ಹೋಗುತ್ತಿದೆ.

ಈಗ ಅಸಲು ವಿಷಯಕ್ಕೆ ಬರೋಣ. ಪರಮಾತ್ಮ ಶಕ್ತಿ ಭಗವಂತನಾಗಿ ಭೂಮಿಮೇಲಕ್ಕೆ ಬಂದಾಗ ಅದರ ಕಾರ್ಯ ಪೂರ್ತಿ ಆಗುವುದಕ್ಕೆ ಮೂರುಸಲ ಭಗವಂತನು ಅವತರಿಸಬೇಕೆಂದುಕೊಂಡಿದ್ದೇವೆ. ಮೊದಲ ಅವತಾರವಾಗಿ ಬಂದವನು ಕೃಷ್ಣನು. ಎರಡನೇ ಅವತಾರವಾಗಿ ಬಂದವನು ಯೇಸು, ನಂತರ

ಮೂರನೇ ಅವತಾರ ಬರುತ್ತದೆಂದು ಮೊದಲ ಅವತಾರ ಕೃಷ್ಣನು ಹೇಳಿದ್ದಾನೆ. ಕೃಷ್ಣನು ಮೂರನೇ ಅವತಾರವನ್ನು ಕುರಿತು "ಆದರ್ಶಕರ್ತ" ಎಂಬ ಹೆಸರನ್ನು ಹೇಳಿದ್ದಾನೆ. ಯೇಸು ಎರಡನೇ ಅವತಾರವನ್ನು ಕುರಿತು "ಆದರಣಕರ್ತ" ಬರುತ್ತಾನೆಂದು ಹೇಳಿದ್ದಾನೆ. ಈ ವಿಧವಾಗಿ ಕೃಷ್ಣನು, ಯೇಸು ಎರಡು ಬೇರೆ ಬೇರೆ ಹೆಸರುಗಳು ಹೇಳುವುದರಿಂದ ಕೃಷ್ಣನು, ಯೇಸು ಇಬ್ಬರು ಒಂದಲ್ಲ ಎಂದು ತಿಳಿದುಹೋಗುತ್ತದೆ. ಇಬ್ಬರು ಒಂದಾದರೆ ಮೂರನೇ ಅವತಾರವನ್ನು ಕುರಿತು ಬೇರೆ ಬೇರೆ ಹೆಸರುಗಳನ್ನು ಏಕೆ ಹೇಳುತ್ತಾರೆಂಬ ಪ್ರಶ್ನೆ ಬರುತ್ತದೆ. ಪ್ರತ್ಯಕ್ಷವಾಗಿ ಯೇಸು, ಕೃಷ್ಣನು ಬರುವ ವ್ಯಕ್ತಿ ಹೆಸರನ್ನು ಬೇರೆಬೇರೆಯಾಗಿ ಹೇಳುವುದರಿಂದ, ಹೇಳಿದ ಇವರಿಬ್ಬರು ಒಂದಲ್ಲವೆಂದು ನಿರೂಪಣೆಯಾಗಿ ತಿಳಿದುಹೋಗುತ್ತಿದೆ. ಹಾಗೆ ಕೃಷ್ಣನು, ಯೇಸು ಬೇರೆ ಬೇರೆಯೆಂದು ಆಧಾರದಿಂದ ತಿಳಿಯುವುದರಿಂದ ಅಜ್ಞಾನ ದ್ವಾರ ತೆರೆದುಕೊಂಡಂತೆ, ಜ್ಞಾನ ದ್ವಾರ ಮುಚ್ಚಿಕೊಂಡಂತೆ ಆಗುತ್ತಿದೆ. ಇದರಿಂದ ಅವಿಶ್ವಾಸಿಗಳಿಗು, ನನ್ನನ್ನು ದೂಷಿಸುವ ಅಸೂಯಪರರಿಗು ನನ್ನ ಜ್ಞಾನ ಲಭಿಸುವುದಿಲ್ಲ ಎಂಬಮಾತು ಇಲ್ಲಿ ಜ್ಞಾಪಕ ಬರುತ್ತದೆ. ದೇವರ ಮೇಲೆ ಅಸೂಯೆ ಹೊಂದಿ ಜ್ಞಾನದ ಮೇಲೆ ಪ್ರೇಮ ಉಂಟಾದಮಾತ್ರಕ್ಕೆ ಅವರಿಗೆ ಜ್ಞಾನ ಲಭಿಸುವುದಿಲ್ಲ ಎಂಬ ವಾಕ್ಯ ಇಂತಹ ಕಡೆ ನೆರವೇರುತ್ತದೆಂದು ಅರ್ಥವಾಗುತ್ತಿದೆ. ನಿಜಕ್ಕೆ ಕೃಷ್ಣನು, ಯೇಸು ಇಬ್ಬರು ಒಂದೇಯೆಂದು ಹೇಳಿಕೊಳ್ಳುತ್ತಾ, ನಾವು ಎಷ್ಟೋ ಆಧಾರಗಳನ್ನು ತೋರಿಸುತ್ತಾ ಬಂದಿದ್ದೇವೆ. ಇಲ್ಲಿಗೆ ಬಂದ ನಂತರ ಇತ್ತ ಕೃಷ್ಣನು, ಅತ್ತ ಯೇಸು ಅದೇ ಕೆಲಸವಾಗಿ ಇಬ್ಬರೂ ಬರುವಂತಹವನನ್ನು ಕುರಿತು ಬೇರೆಬೇರೆ ಹೆಸರುಗಳನ್ನು ಹೇಳಿದ್ದಾರೆ. ಇಲ್ಲಿ ಹಾಗೆ ಹೇಳಬೇಕಾದ ಕೆಲಸ ಏನು ಬಂದಿದೆಯೆಂದು ಯೋಚಿಸಿದರೆ, ಅವಿಶ್ವಾಸಿಗಳಿಗೆ ತಮ್ಮ ಜ್ಞಾನ ಸಿಗಬಾರದೆಂದು, ಅವರಿಗೆ ಇವರ ಮೇಲೆ ಅನುಮಾನ ಬಂದು ಅವರಿಬ್ಬರು ಒಂದಲ್ಲವೆಂದು ನಿರ್ಣಯಿಸಿ ಕೊಳ್ಳುವುದಕ್ಕೆ ಹಾಗೆ ಹೆಸರುಗಳನ್ನು ಮೊದಲೆ ಹೇಳಿದ್ದಾರೆಂದು ತಿಳಿಯುತ್ತಿದೆ. ಕೃಷ್ಣನು ಮೇಧಾವಿಯಾಗಿರುವುದರಿಂದ, ತನಗೆ ಇಷ್ಟ ಇಲ್ಲದವರನ್ನು ದೂರ ಮಾಡುವುದಕ್ಕೆ ಎಣೆದ ಕಥೆಯೇ ಮೂರನೆಯವನ ಹೆಸರನ್ನು ಎರಡು ವಿಧಗಳಾಗಿ

ಹೇಳುವುದೆಂದು ಅರ್ಥವಾಗುತ್ತಿದೆ. ಈ ಹೆಸರುಗಳು ಅಜ್ಞಾನಿಗಳಿಗು, ಅವಿಶ್ವಾಸಿಗಳಿಗು ಹೊರತು ಜ್ಞಾನಿಗಳಿಗು, ವಿಶ್ವಾಸಿಗಳಿಗು ಅಗತ್ಯವಿಲ್ಲ.

ಮೂರನೇ ಅವತಾರವಾಗಿ ಬರುವಂತಹವನು ಆದರ್ಶಕರ್ತ ಆದರೂ, ಆದರಣಕರ್ತ ಆದರೂ ಸೃಷ್ಟಿಕರ್ತದಲ್ಲಿನ ಭಾಗವೇ ಆಗುತ್ತದೆ. ಆದರಣಕರ್ತ, ಆದರ್ಶಕರ್ತ ಎಂಬ ಹೆಸರುಗಳು ಅಜ್ಞಾನಿಗಳಿಗಾಗಿ ಕೃಷ್ಣನು, ಯೇಸು ತಿಳುವಳಿಕೆಯಿಂದ ಹೇಳಿದ್ದಾರೆ. ಅಜ್ಞಾನಿಗಳಿಗೆ ಅನುಮಾನ ಬರುವುದಕ್ಕೆ, ಆ ಅನುಮಾನ ಹೆಚ್ಚಾಗಿ ಜ್ಞಾನಮಾರ್ಗಕ್ಕೆ ಆತಂಕವೇರ್ಪಡಿಸುವುದಕ್ಕೆ ಉದ್ದೇಶ ಪೂರ್ವ ಕವಾಗಿ ಕೃಷ್ಣನು, ಯೇಸು ಎರಡು ಹೆಸರುಗಳನ್ನು ಹೇಳಿದ್ದಾರೆ. ಆ ಹೆಸರುಗಳು ಅಜ್ಞಾನಿಗಳ ಮೇಲೆ ಪ್ರಭಾವ ತೋರಿಸುತ್ತದೆ, ಜ್ಞಾನಿಗಳು ಆ ಹೆಸರುಗಳ ಮಾಯೆಯಲ್ಲಿ ಸಿಲುಕಿಕೊಳ್ಳದಂತೆ ಒಂದು ನಿರ್ಣಯಕ್ಕೆ ಬರುತ್ತಾರೆ. ಕೃಷ್ಣನು, ಯೇಸು ಹೇಳಿದ ಎರಡು ಹೆಸರುಗಳನ್ನು ಒಂದೇ ಹೆಸರಾಗಿ ಬದಲಿಸಿಕೊಳ್ಳುತ್ತಾರೆ. ಅದು ಹೇಗೆಂದರೆ! ಕೃಷ್ಣನು ಹೇಳಿದ "ಆದರ್ಶಕರ್ತ" ನಲ್ಲಿಯೂ, ಯೇಸು ಹೇಳಿದ "ಆದರಣಕರ್ತ" ನಲ್ಲಿಯೂ ಸಮಾನವಾಗಿರುವ ಅಕ್ಷರಗಳು, ಸಮಾನವಾಗಿ ಇಲ್ಲದ ಅಕ್ಷರಗಳು ಇವೆ. ಎರಡರಲ್ಲಿಯು ಸಮಾನವಾಗಿರುವ ಅಕ್ಷರಗಳು ಆ...ಕರ್ತ ಎರಡರಲ್ಲಿಯು ಸಮಾನವಾಗಿ ಇಲ್ಲದಿರುವವು ದರ್ಶ, ದರಣ. ಎರಡು ಹೆಸರುಗಳಲ್ಲಿ ಸಮಾನವಾಗಿ ಇಲ್ಲದ ಅಕ್ಷರಗಳನ್ನು ತೊಲಗಿಸಿ ನೋಡಿದರೆ ಎರಡರಲ್ಲಿಯು "ಆಕರ್ತ" ಮಾತ್ರ ಉಳಿಯುತ್ತಾನೆ. ಇದರಪ್ರಕಾರ ಜ್ಞಾನಿಗಳಾದವರು ಮೂರನೇ ಅವತಾರದಲ್ಲಿ ಬರುವವನನ್ನು "ಆಕರ್ತ" ಎನ್ನುವ ಹೆಸರಿನಿಂದ ಹೇಳಿಕೊಂಡರೆ ಸರಿಹೋಗುತ್ತದೆ. ಆಕರ್ತ ಎನ್ನುವ ಪದ ಕೃಷ್ಣನು ಹೇಳಿರುವುದಕ್ಕು, ಯೇಸು ಹೇಳಿರುವುದಕ್ಕು ಸರಿಹೋಗುತ್ತದೆ. ಎರಡು ಹೆಸರುಗಳನ್ನು ಬೆರೆಸಿದರೆ ಬಂದಿರುವುದು "ಆಕರ್ತ" ಇನ್ನು ಆತನು ಬಂದರೆ ಹೇಗಿರುತ್ತದೊ!

ಮೂರನೇ ಅವತಾರ ಕೃಷ್ಣನ ಲೆಕ್ಕದಲ್ಲಿ "ಆದರ್ಶಕರ್ತ", ಯೇಸು ಲೆಕ್ಕದಲ್ಲಿ "ಆದರಣಕರ್ತ" ಇಂದಿನಿಂದ ನಮ್ಮ ಲೆಕ್ಕದಲ್ಲಿ "ಆಕರ್ತ". ಕೃಷ್ಣನು,

ಯೇಸು ಇಬ್ಬರು ಹೇಳಿದ ಎರಡು ಹೆಸರುಗಳಲ್ಲಿ ದರ್ಶ, ದರಣ ಎನ್ನುವ ಶಬ್ದಗಳನ್ನು ತೆಗೆದುಹಾಕಿದರೆ ಉಳಿದಿರುವವು ಆಕರ್ತ. ಆದ್ದರಿಂದ ಆಕರ್ತ ಎನ್ನುವ ಹೆಸರು ಇಬ್ಬರು ಹೇಳಿರುವುದಕ್ಕೆ ಸಂಬಂಧಿಸಿರುವುದೇಯೆಂದು ತಿಳಿದುಕೊಳ್ಳಬೇಕು. ಭಗವಂತನ ಮೂರನೇ ಬರುವಿಕೆಯಲ್ಲಿ ಒಂದುಸಲ ದೈವಧರ್ಮಗಳ ಪ್ರಚಾರ ಕಾರ್ಯ ಪೂರ್ತಿ ಆಗುತ್ತದೆ. ಇದರಿಂದ

**"ದೇವರು ಮೂರು ಆತ್ಮಗಳಾಗಿ (ಜೀವಾತ್ಮ, ಆತ್ಮ, ಪರಮಾತ್ಮಗಳಾಗಿ) ಇದ್ದಾನೆ." ಎಂದು ತಿಳಿಯುತ್ತಿದೆ.**

**"ಭಗವಂತನು ಮೂರು (ಕೃಷ್ಣ, ಯೇಸು, ಆಕರ್ತ) ಅವತಾರಗಳಾಗಿ ಇದ್ದಾನೆ." ಎಂದು ತಿಳಿಯುತ್ತಿದೆ.**

**"ಮನುಷ್ಯ ಮೂರು ಮಾಯೆಗಳು (ತಾಮಸ, ರಾಜಸ, ಸತ್ವಗುಣ) ಗಳಾಗಿ ಇದ್ದಾನೆ." ಎಂದು ತಿಳಿಯುತ್ತಿದೆ.**

ಮೂರು ಮಾಯೆಗಳಲ್ಲಿ ಸಿಲುಕಿಕೊಂಡ ಮನುಷ್ಯನಿಗೆ ದೈವ ಧರ್ಮಗಳನ್ನು ತಿಳಿಸುವುದಕ್ಕೆ, ಮೂರು ಅವತಾರಗಳಾಗಿ ಭಗವಂತನು ಬಂದು, ಮೂರು ಆತ್ಮಗಳ ತ್ರೈತವನ್ನು (ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳ ಭಾವವನ್ನು) ತಿಳಿಸುತ್ತಿದ್ದಾನೆ. ಆದ್ದರಿಂದ ಭಗವಂತನನ್ನು ಒಂದು ಅವತಾರಕ್ಕೆ ಪರಿಮಿತಿ ಮಾಡಬಾರದು. ಎರಡು ಮೂರು ವರ್ಷಗಳ ವ್ಯತ್ಯಾಸದಿಂದ ಆತನ ಮೂರು ಅವತಾರಗಳು ಮುಗಿದುಹೋಗುತ್ತವೆ. ಆ ಲೆಕ್ಕ ಪ್ರಕಾರ ಐದು ಆರು ವರ್ಷಗಳಲ್ಲಿಯೇ ಭಗವಂತನ ಮೂರು ಬರುವಿಕೆಗಳು ಒಂದುಸಲ ಮುಗಿದುಹೋಗುತ್ತವೆ. ಹಾಗೆ ಒಂದುಸಲ ಮೂರು ರೂಪಗಳಿಂದ ಬಂದಿರುವ ಭಗವಂತನು ಪ್ರತಿಷ್ಠಿಸಿದ ಧರ್ಮಗಳು ಸುಮಾರು ಹತ್ತು ಯುಗಗಳ ಕಾಲಕ್ಕೆ ಪುನಃ ಅಧರ್ಮಗಳಾಗಿ ಬದಲಾಗಬಹುದು. ಅಲ್ಲಿಗೆ ಪುನಃ ಭಗವಂತನ ಅವಶ್ಯಕತೆ ಏರ್ಪಡಬಹುದು. ಪ್ರಸ್ಥುತ ಧರ್ಮಪ್ರತಿಷ್ಠಾಪನೆ ಕಾರ್ಯಕ್ರಮದಲ್ಲಿ ಭಗವಂತನ ಎರಡು ಅವತಾರಗಳು ಬೇರೆಬೇರೆ ದೇಶಗಳಲ್ಲಿ, ಬೇರೆಬೇರೆ

ಹೆಸರುಗಳಿಂದ, ಬೇರೆಬೇರೆ ಮತಗಳಲ್ಲಿ ಬಂದು ಹೋಗಿವೆ. ಇನ್ನು ಉಳಿದಿರುವುದು ಕೃಷ್ಣನು ಹೇಳಿದ ಆದರ್ಶಕರ್ತ, ಯೇಸು ಹೇಳಿದ ಆದರಣಕರ್ತ, ನಾವು ಹೇಳಿದ ಆಕರ್ತವೊಂದರ ಅವತಾರ. ಮೂರನೇ ಅವತಾರ ಮುಖ್ಯವಾದುದಾಗಿ ಇರುತ್ತದೆ. ಏಕೆಂದರೆ! ಕೃಷ್ಣನು ಗೀತೆ ರೂಪದಲ್ಲಿ ಹೇಳಿದ ಜ್ಞಾನವಾಗಲಿ, ಯೇಸು ವಾಕ್ಯ ರೂಪದಲ್ಲಿ ಹೇಳಿದ ಜ್ಞಾನವಾಗಲಿ ಇಲ್ಲಿಯವರೆಗು ಯಾರಿಗೂ ಅರ್ಥವಾಗಲಿಲ್ಲ. ಅರ್ಥವಾಗಲಿಲ್ಲ ಎಂದು ಹೇಳುವುದಕ್ಕೆ ಆಧಾರ ಆ ಎರಡು ಜ್ಞಾನಗಳು ಎರಡು ಮತಗಳಾಗಿ ಬದಲಾಗಿಹೋಗಿವೆ. ಮತ ಎಂದಿಗೂ ದೇವರನ್ನು ತಿಳಿಸಲಾರದು. ದೇವರು ಹೇಳಿದ ಜ್ಞಾನ, ಮತದ ನೆರಳಲ್ಲಿ ಎಂದಿಗೂ ಅರ್ಥವಾಗುವುದಿಲ್ಲ. ಆದ್ದರಿಂದ ಮತಾಭಿಮಾನಿಗಳು ಎಂದಿಗೂ ಜ್ಞಾನಾಭಿಮಾನಿಗಳು ಆಗಲಾರರು ಎನ್ನುವ ಸೂತ್ರದ ಪ್ರಕಾರ, ಯಾವ ಮತದಲ್ಲಾದರೂ ಮತವನ್ನು ಕುರಿತು ದೊಡ್ಡದಾಗಿ ಹೇಳಿಕೊಳ್ಳುವವನಾಗಲಿ, ಮತವ್ಯಾಪ್ತಿ ಮಾಡಬೇಕೆಂದು ಕೊಳ್ಳುವವನಾಗಲಿ, ದೇವರ ಜ್ಞಾನವನ್ನು ತಿಳಿಯಲಾರನು.

ಭಗವಂತನು ಎರಡುಸಲ ಭೂಮಿಮೇಲಕ್ಕೆ ಬಂದು ದೈವಧರ್ಮಗಳನ್ನು ಎರಡು ದೇಶಗಳಲ್ಲಿ ತಿಳಿಸಿಹೋದರೂ, ಈಗಲೂ ಸಹ ಅವುಗಳ ಸಾರಾಂಶ ತಿಳಿಯಲ್ಪಡಲಿಲ್ಲ. ಮತಗಳ ಪ್ರಭಾವ ಹೆಚ್ಚಾಗಿರುವ ಈ ಕಾಲದಲ್ಲಿ, ದೈವಕ್ಕಿಂತ ಧನವನ್ನೇ ಹೆಚ್ಚು ಬೆಲೆಯುಳ್ಳದಾಗಿ ನೋಡುವ ಈ ಕಾಲದಲ್ಲಿ, ಭಗವಂತನ ಮೂರನೇ ಬರುವಿಕೆ ಬರಬೇಕಾಗಿದೆ. ಭಗವಂತನ ಮೂರನೇ ಬರುವಿಕೆಯಿಂದ ಭಗವಂತನು ಹೆಚ್ಚಾಗಿ ಮತಚಾಂದಸ್ಸೊಂದಿಗೆ ತೊಂದರೆಗಳು ಬೀಳಬೇಕಾಗಿ ಬರುತ್ತದೆ. ಅಷ್ಟೇ ಅಲ್ಲದೆ ಇಲ್ಲಿಯವರೆಗೂ ಉಳಿದುಹೋದ ಧರ್ಮಗಳನ್ನು ಸಹ ತಿಳಿಸಬೇಕಾಗಿದೆ. ಒಂದುಕಡೆ ಮಾಯಾ ಪ್ರಭಾವದಿಂದ ಚೆನ್ನಾಗಿ ಪ್ರಚಾರವಾಗಿ, ಕೆಲವು ಲಕ್ಷ ಜನರ ಅಭಿಮಾನವನ್ನು ಹೊಂದಿದ ಗುರುಗಳ ಮಧ್ಯದಲ್ಲಿ, ಅವರಿಗೆ ವಿರುದ್ಧವಾದ ಧರ್ಮಗಳನ್ನು ವಿವರಿಸಬೇಕಾಗಿದೆ. "ಆಕರ್ತ" ತಿಳಿಸುವ ಧರ್ಮಗಳು ಇತ್ತ ನಾಸ್ತಿಕರಿಗಾಗಲಿ, ಅತ್ತ ಆಸ್ತಿಕರಿಗಾಗಲಿ ನುಂಗಲಾರ

ದಂತಿರುತ್ತವೆ. ಮೂರನೇ ಅವತಾರವಾದ ಆಕರ್ತವೊಂದರ ಬೋಧನೆಗಳು ಕೆಲವರಿಗೆ ಅರ್ಥ ಆಗದಿರುವವಾಗಿ, ಈತನು ದೇವರಿದ್ದಾನೆಂಬ ಆಸ್ತಿಕತ್ವವನ್ನು ಬೋಧಿಸುತ್ತಿದ್ದಾನಾ? ಅಥವಾ ದೇವರು ಇಲ್ಲವೆಂದು ನಾಸ್ತಿಕತ್ವವನ್ನು ಬೋಧಿಸುತ್ತಿದ್ದಾನಾ? ಎಂದು ಅಂದುಕೊಳ್ಳುತ್ತಾರೆ. ಮತ್ತೆ ಕೆಲವರು ಮೂರನೇ ರೂಪದಲ್ಲಿ ಭಗವಂತನು ಹೇಳುವ ಬೋಧನೆಗಳನ್ನು ಅರ್ಥಮಾಡಿಕೊಳ್ಳಲಾಗದೆ ಅವಗಾಹನಲೋಪದಿಂದ, ಈತನು ಪರಮತವನ್ನು ಬೋಧಿಸುತ್ತಿದ್ದಾನಾ? ಅಥವಾ ಸ್ವಮತವನ್ನು ಬೋಧಿಸುತ್ತಿದ್ದಾನಾ? ಎಂದು ಅರ್ಥವಾಗದ ಸ್ಥಿತಿಯಲ್ಲಿ ಆತನನ್ನು ಕುರಿತು ಚರ್ಚಿಸಿಕೊಳ್ಳುತ್ತಾರೆ. ಹೊರಗಿನ ಗುರುಗಳನ್ನು ಹೋಲಿಸಿನೋಡಿದರೆ ಅವರ ಹತ್ತಿರ ಲಕ್ಷಾಂತರ ಜನ ಸೇರಿ ದೊಡ್ಡದಾಗಿ ಕಾಣಿಸುತ್ತಿದ್ದರೆ, ಅವರಿಗಿಂತ ಎಲ್ಲಾವಿಧಗಳಲ್ಲಿ ಕಡಿಮೆಯಾಗಿ ಕಾಣಿಸಿ, ಜ್ಞಾನದಲ್ಲಿ ಗುರುಗಳೆಲ್ಲರಿಗಿಂತ ದೊಡ್ಡದಾಗಿ ಕಾಣಿಸುತ್ತಾನೆ. ದೇಶದಲ್ಲಿನ ಗುರುಗಳು, ಗುರು ಶಿಷ್ಯರು ಯಾವುದೋ ಒಂದು ಸಾಧನೆ ಮಾಡಿ ಮೋಕ್ಷವನ್ನು ಹೊಂದಬೇಕೆಂದು ಪ್ರಯತ್ನ ಮಾಡುತ್ತಿರುವಾಗ, ಆಕರ್ತ ಮಾತ್ರ ದೇವರ ಜ್ಞಾನವನ್ನು ತಿಳಿದುಕೊಳ್ಳುವುದಕ್ಕಿಂತ ಧ್ಯಾನ ಮಾಡುವುದು ವ್ಯರ್ಥ ಕೆಲಸ ಎಂದು ಬೋಧಿಸುತ್ತಾನೆ. ಭೂಮಿಮೇಲೆ ಗುರುಗಳು ಅವರವರ ಮತ ಸಾಂಪ್ರದಾಯಗಳನ್ನು ಅವರು ಅನುಸರಿಸುತ್ತಾ, ಅವರ ಶಿಷ್ಯರನ್ನು ಅನುಸರಿಸುವಂತೆ ಮಾಡುತ್ತಿರುವಾಗ, ಆಕರ್ತ ಮಾತ್ರ ಎಲ್ಲಾ ಮತದವರನ್ನು ಒಂದೇ ದೇವರ ಜ್ಞಾನದ ಕೆಳಗೆ ತಂದು, ನನ್ನದು ಇಂತಹ ಮತ ಎಂದು ಹೇಳದಂತೆ, ಎಲ್ಲರದು ಒಂದೇ ಮತವೆನ್ನುವಂತೆ ಮಾಡುತ್ತದೆ. ಎಲ್ಲಾ ಮತದವರು ಆಕರ್ತ ಹತ್ತಿರ ಏಕಮತವಾಗಿ ಪ್ರವರ್ತಿಸುತ್ತಾರೆ. ಒಂದೇ ಜ್ಞಾನ, ಒಂದೇ ದೇವರು ಎನ್ನುವ ಸೂತ್ರಕ್ಕೆ ಕಟ್ಟುಬಿದ್ದಿರುತ್ತಾರೆ.

ಸೃಷ್ಟಿ ಮೊದಲ ಕಾಲದಲ್ಲಿ ಮನುಷ್ಯರಲ್ಲಿ ಮತ ಎನ್ನುವುದು ಇಲ್ಲ. ನಂತರ ಕಾಲದಲ್ಲಿ ಮಾಯಾ ಪ್ರಭಾವದಿಂದ ಮನುಷ್ಯನ ಮೇಧಸ್ಸಿನಲ್ಲಿ ಮತ ಎನ್ನುವುದು ಮುಖ್ಯ ಸ್ಥಾನವನ್ನು ಆಕ್ರಮಿಸಿದೆ. ಆಕರ್ತ ದೃಷ್ಟಿಯಲ್ಲಿ ಮನುಷ್ಯನನ್ನು ದೇವರ ಮಾರ್ಗದಿಂದ ತಪ್ಪಿಸುವುದು ಮತವೆಂದು, ಮೊದಲು ತನ್ನ ಜ್ಞಾನ

ಪ್ರಾರಂಭಿಸುವುದರಲ್ಲಿ ಮತವನ್ನು ನಿರ್ಮೂಲಿಸುವುದೆ ಧ್ಯೇಯವಾಗಿ ಇಟ್ಟುಕೊಳ್ಳುತ್ತಾನೆ. ಮತವಿಲ್ಲದ ಮನುಷ್ಯನಾಗಿ ಯಾರು ಬದಲಾಗುತ್ತಾನೊ ಅವನು ನನ್ನವನೆಂದು ಆಕರ್ತ ಹೇಳುತ್ತಾನೆ. ಇಲ್ಲಿ ನಿಮಗೆ ಒಂದು ಪ್ರಶ್ನೆ ಬರುತ್ತದೆ. ಅದೇನೆಂದರೆ! ಬರುವಂತಹ ಭಗವಂತನ ಮೂರನೇ ಅವತಾರದ ಹೆಸರು "ಆಕರ್ತ" ಅಥವಾ "ಆದರ್ಶಕರ್ತ" ಅಥವಾ "ಆದರಣಕರ್ತ" ಎಂದು ಹೇಳಿಕೊಂಡಿದ್ದೇವೆ. ಆಕರ್ತ ಬರುತ್ತಾನೆಂದು ನೀವೇ ಹೇಳಿದ್ದೀರಾ. ಆಕರ್ತ ಬಂದ ನಂತರ ಉಳಿದ ಧರ್ಮಗಳನ್ನು ಬೋಧಿಸುತ್ತಾನೆ, ಮುಂಚೆ ಬೋಧಿಸಿದ ಧರ್ಮಗಳನ್ನು ವಿವರಿಸುತ್ತಾನೆ ಅಂದಿದ್ದಾರೆ. ಈಗಲೇನೊ ಆತನ ಬರುವಿಕೆಯ ಮುಂಚೆಯೆ ಆತನು ಈ ವಿಧವಾಗಿ ತನ್ನ ಬೋಧನೆಗಳನ್ನು ಹೇಳುತ್ತಾನೆಂದು, ಈ ವಿಧವಾಗಿ ಮತಗಳಿಂದ ಮನುಷ್ಯನ ದೃಷ್ಟಿಯನ್ನು ದೇವರಕಡೆ ಮರಳಿಸುತ್ತಾನೆಂದು, ಮತವಿಲ್ಲದ ಮನುಷ್ಯರನ್ನು ತಯಾರು ಮಾಡುತ್ತಾನೆಂದು ಹೇಳುತ್ತಿದ್ದೀರ. ಈ ವಿಷಯಗಳೆಲ್ಲವನ್ನು ಆಕರ್ತ ನಿಮಗೆ ನಿದ್ರೆಯಲ್ಲಿ ಕನಸಿನಲ್ಲಿ ಹೇಳಿದ್ದಾನಾ? ಎಚ್ಚರದಲ್ಲಿರುವಾಗ ಕಿವಿಯಲ್ಲಿ ಹೇಳಿದ್ದಾನಾ? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನನಗೆ ಆಕರ್ತ ಕಿವಿಯಲ್ಲಿ ಹೇಳಲಿಲ್ಲ, ಕನಸಿನಲ್ಲಿ ಹೇಳಲಿಲ್ಲ. ಆಕರ್ತನಾಗಿ ಬರುವಂತಹ ಕೃಷ್ಣನು ಆಕರ್ತನ ಬಗ್ಗೆ ಬೇಡನಿಗೆ ಕೆಲವು ವಿಷಯಗಳನ್ನು ಹೇಳಿಹೋಗಿದ್ದಾನೆ. ಆ ವಿಷಯಗಳನ್ನೇ ಬೇಡನ ಆತ್ಮ ನನಗೆ ಹೇಳಿದಾಗ, ನಾನು ನಿಮಗೆ ಹೇಳುತ್ತಿದ್ದೇನೆ ಹೊರತು ಸ್ವತಃವಾಗಿ ನಾನು ಹೇಳಲಿಲ್ಲ. ಈ ನನ್ನ ಮಾತುಗಳನ್ನು ಕೇಳಿದ ನಂತರ ಸಹ ಬುದ್ಧಿಯಲ್ಲಿ ಚುರುಕತನ ಇರುವವರು, ದೊಡ್ಡದಾಗಿ ಮೆದುಳನ್ನು ಉಪಯೋಗಿಸುವವರು ಕೆಲವರು ಇನ್ನೊಂದು ವಿಧವಾಗಿ ಸಹ ಕೇಳಬಹುದು. ಅದೇನೆಂದರೆ! ಭಾರತ, ಭಾಗವತಗಳಲ್ಲಿ ಸಹ ಹೇಳದ ಬೇಡನ ಪಾತ್ರವನ್ನು ನೀವೇ ಕಲ್ಪಿಸಿ, ಕೃಷ್ಣನು ಬೇಡನಿಗೆ ಹೇಳಿದ್ದಾನೆಂದು, ಬೇಡನ ಆತ್ಮ ನನಗೆ ಹೇಳಿದೆಯೆಂದು ನಂಬಿಸಿ ನಿಮ್ಮ ಸ್ವಂತಭಾವಗಳನ್ನು ನಮಗೆ ಹೇಳುತ್ತಿದ್ದೀರ ಹೊರತು ಕೃಷ್ಣನು ಬೇಡನಿಗೆ ಹೇಳಲಿಲ್ಲ. ಬೇಡನು ನಿನಗೆ ಹೇಳಲಿಲ್ಲ ಎಂದು ನೀವು ನನ್ನನ್ನು ಕೇಳಬಹುದು ಅದಕ್ಕೆ ನನ್ನ ಉತ್ತರ ಏನೆಂದರೆ!

ಪೂರ್ವಕಾಲದಲ್ಲಿ ಹಿರಿಯರು, ಒಂದು ಗಾದೆ ಮಾತನ್ನು ಹೇಳುತ್ತಿದ್ದರು, **"ಹೊಟ್ಟೆ ಹರಿದುಕೊಂಡರೂ ಗಾರುಡಿವಿದ್ಯೆ ಎನ್ನುವವರು ಇರುತ್ತಾರೆ."** ಎಂದು ಹೇಳಿದ ಸಮತ (ಸಾಮೆತ) ನನಗೆ ಇಲ್ಲಿ ಜ್ಞಾಪಕ ಬಂದಿದೆ. ಅಷ್ಟೇ ಅಲ್ಲದೆ. **"ಅತಿ ಜಾಣ್ಮೆಯು ಮೂರ್ಖರ ಲಕ್ಷಣ"** ಎಂದು ಸಹ ಹಿರಿಯರೆನ್ನುತ್ತಿದ್ದರು. ಯಾವುದಕ್ಕಾದರೂ ಒಂದು ಪರಿಮಿತಿ ಇದ್ದರೆ ಚೆನ್ನಾಗಿರುತ್ತದೆ. ಆದ್ದರಿಂದ ಗೀತೆಯಲ್ಲಿ ಕೃಷ್ಣನು ಸಹ ಮಿತವಾದ ನಿದ್ರೆ, ಮಿತವಾದ ಆಹಾರ, ಮಿತವಾದ ಕೆಲಸ ಎಂದು ಹೇಳಿದ್ದಾನೆ. ಮಿತವಾದ ಕೆಲಸ ಎಂದರೆ ಶರೀರದಿಂದ ಮಾಡುವುದು ಅಲ್ಲ. ಬುದ್ಧಿಯಿಂದ ಮಾಡುವ ಕೆಲಸವನ್ನು ಸಹ ಲೆಕ್ಕಿಸಿಕೊಳ್ಳಬೇಕು. ಆದ್ದರಿಂದ ಹಿರಿಯರು ಅತಿ ಜಾಣ್ಮೆಯು ಮೂರ್ಖರ ಲಕ್ಷಣ ಎಂದಿದ್ದಾರೆ. ಒಂದು ಪರಿಮಿತಿ ಇಲ್ಲದಂತೆ ಅತಿಯಾಗಿ ಯೋಚಿಸಿದರೆ ಅದು ಕೆಡಕಿಗೆ ದಾರಿತೆಗೆಯುತ್ತದೆ. ಎಷ್ಟೋ ವಿವರವಾಗಿ ಶಾಸ್ತ್ರಬದ್ಧವಾಗಿ ಹೇಳುತ್ತಿದ್ದರೂ ಹೇಳಿರುವುದನ್ನು ಕುರಿತು ಇದರಲ್ಲಿ ಒಳ್ಳೆಯದಿದೆಯಾ, ಕೆಡಕಿದೆಯಾ ಎಂದು ತಿಳಿದುಕೊಳ್ಳದೆ, ನನಗೆ ತಿಳುವಳಿಕೆ ಇದೆಯೆಂದು ಪ್ರಶ್ನಿಸುವುದು ಕೆಡಕಿಗೆ ದಾರಿತೆಗೆಯುತ್ತದೆ ಹೊರತು ಒಳ್ಳೆಯದಕ್ಕೆ ದಾರಿತೆಗೆಯುವುದಿಲ್ಲ. ವಾಲಿ ವಾಲವು (ಬಾಲ) ಹತ್ತಿರ ಹುಟ್ಟಿದ್ದಾನೆ ಎಂದು ರಾಮಾಯಣದಲ್ಲಿ ಬರೆದರೆ ಪ್ರಶ್ನಿಸದವರು, ದ್ರೋಣನು ದೊನ್ನೆಯಲ್ಲಿ (ಮಡಿಕೆಯಲ್ಲಿ) ಹುಟ್ಟಿದ್ದಾನೆ ಎಂದು ಭಾರತದಲ್ಲಿ ಹೇಳಿದರೆ ಕೇಳಿ ಪ್ರಶ್ನಿಸದವರು, ಹನುಮಂತನು ಪರ್ವತವನ್ನು ಎತ್ತುಕೊಂಡು ಬಂದಿದ್ದಾನೆಂದು ಬರೆದರೆ ನಂಬುವವರು, ಭೀಮನು ಗಾಳಿಗೆ ಹುಟ್ಟಿದ್ದಾನೆ, ಕರ್ಣನು ಕಿವಿಯಲ್ಲಿ ಹುಟ್ಟಿದ್ದಾನೆ ಎಂದರೆ ಕೇಳುವವರು ಅಲ್ಲಿ ಪ್ರಶ್ನಿಸದಂತೆ, ಆ ಮಾತುಗಳು ಶಾಸ್ತ್ರಬದ್ಧತೆ ಅಲ್ಲವೆಂದು ತಿಳಿದರೂ ಸುಮ್ಮನಿದ್ದು, ಇಲ್ಲಿ ನಾನು ಹೇಳಿದ ಮಾತುಗಳನ್ನು ಅಶಾಸ್ತ್ರೀಯ ಅಲ್ಲದಿದ್ದರೂ ಪ್ರಶ್ನಿಸುವುದು ಒಳ್ಳೆಯದಾ ಎಂದು ಕೇಳುತ್ತಿದ್ದೇನೆ. ಇಂತಹ ಸಂದರ್ಭದಲ್ಲಿಯೇ ಹಿರಿಯರು "ಹೊಟ್ಟೆ ಹರಿದುಕೊಂಡರೂ ಗಾರುಡಿವಿದ್ಯೆ ಎನ್ನುವವರಿರುತ್ತಾರೆ" ಎಂದು ಹೇಳಿದ್ದಾರೆ.

ಗಾರುಡಿವಿದ್ಯೆಯಲ್ಲಿ ಮನುಷ್ಯನನ್ನು ಅಡ್ಡವಾಗಿ ಅರ್ಧಭಾಗಕ್ಕೆ ಗರಗಸದಿಂದ ಕೋಯ್ದು ಎರಡು ತುಂಡುಗಳಾಗಿ ವಿಂಗಡಿಸಿ ತೋರಿಸುತ್ತಾರೆ. ಹಾಗೆ ತೋರಿಸಿದಾಗ ಮನುಷ್ಯ ಸೊಂಟದಭಾಗದಿಂದ ಬೇರ್ಪಟ್ಟು ಎರಡು ಭಾಗಗಳಾಗಿ ಕಾಣಿಸುತ್ತದೆ. ಆದರೆ ಅಲ್ಲಿ ರಕ್ತ ಸೋರುವುದಿಲ್ಲ. ರಕ್ತ ಸೋರಲಿಲ್ಲವೆಂದರೆ ಮನುಷ್ಯ ಎರಡು ತುಂಡುಗಳಾಗಿ ಕತ್ತರಿಸಿದ್ದಾನೆ ಎನ್ನುವುದು ಅಸತ್ಯ. ನಮಗೆ ತಿಳಿಯದ ಪದ್ಧತಿಯನ್ನು ಉಪಯೋಗಿಸಿ ಅಸತ್ಯವನ್ನು ಸತ್ಯವಾಗಿ ತೋರಿಸುತ್ತಿದ್ದಾರೆ. ಆದರೂ ಅದು ಅಸತ್ಯವೆಂದು ಹೇಳುವುದಕ್ಕೆ ಅಲ್ಲಿ ರಕ್ತ ಸೋರಲಿಲ್ಲ. ಅದು ನಿಜವಲ್ಲವೆಂದು, ಹಾಗೆ ತೋರಿಸುವುದು ಗಾರುಡಿವಿದ್ಯೆಯ ಕೆಲಸವೆಂದು ನಮ್ಮೆಲ್ಲರಿಗೂ ತಿಳಿದಿದೆ. ಮನುಷ್ಯನನ್ನು ಎರಡು ತುಂಡುಗಳಾಗಿ ಮಾಡುವುದು ಸ್ಟೇಜಿ (ವೇದಿಕೆ) ಮೇಲೆ ಗಾರುಡಿವಿದ್ಯೆ ಆಗಬಹುದು. ಅದೇ ನಡು ಬಜಾರಿನಲ್ಲಿ ಒಬ್ಬರು ಇನ್ನೊಬ್ಬರನ್ನು ಕತ್ತಿಯಿಂದ ಎರಡು ತುಂಡುಗಳು ಮಾಡಿದರೆ ಅಲ್ಲಿ ರಕ್ತ ಸೋರಿಹೋಗುತ್ತದೆ. ತುಂಡುಗಳಾದವನು ಮರಣಿಸುತ್ತಾನೆ. ಆಗ ಅದು ಗಾರುಡಿ ವಿದ್ಯೆ ಅಲ್ಲ, ನಡೆದಿರುವುದು ಸತ್ಯವೆಂದು ತಿಳಿಯುತ್ತಿದೆ. ಹಾಗೆ ನಡೆದಿರುವುದನ್ನು ಗಾರುಡಿವಿದ್ಯೆ ಎಂದು ಏಕೆ ಕರೆಯಲಿಲ್ಲ ಎಂದರೆ, ತುಂಡುಗಳಾದವನು ಮರಣಿಸಿದ್ದಾನೆ. ಅವನಿಂದ ರಕ್ತ ಸೋರಿಹೋಗುವುದರಿಂದ ಅವನು ಮರಣಿಸಿದ್ದಾನೆ. ಸಾಯಿಸಿದವನನ್ನು ಹಂತಕ ಎನ್ನುತ್ತೇವೆ. ನಡೆದಿರುವುದನ್ನು ಹತ್ಯೆ ಎನ್ನುತ್ತೇವೆ. ಆಗ ಸಾಯಿಸಿದವನು ಗಾರುಡಿಯವನು ಅಲ್ಲ, ನಡೆದಿರುವುದು ಗಾರುಡಿವಿದ್ಯೆ ಅಲ್ಲ. ಇಷ್ಟು ವಿಪುಲವಾಗಿ ತಿಳಿದಾಗ, ಅದರ ಪ್ರಕಾರವೇ ಶಾಸ್ತ್ರಬದ್ಧವಾಗಿರುವ ವಿಷಯಗಳನ್ನು ನಾವು ಹೇಳಿದಾಗ, ನಮ್ಮ ಮಾತುಗಳು ಸತ್ಯವೊ, ಅಸತ್ಯವೊ ಎಂದು ಏಕೆ ತಿಳಿಯಲಿಲ್ಲವೆಂದು ಪ್ರಶ್ನಿಸುತ್ತಿದ್ದೇನೆ. ಕೆಲವು ಆಧಾರಗಳಿಂದ ಯೋಚಿಸಿದರೆ ಯಾವುದು ನಿಜವೊ, ಯಾವುದು ನಿಜ ಅಲ್ಲವೊ ನಿಮಗೆ ಅರ್ಥವಾಗುತ್ತದೆ. ಎದುರುಗಡೆ ಕಾಣಿಸುತ್ತಿದ್ದರೂ ಬಗ್ಗಿ ನೋಡುವುದು, ಇಣಿಕಿ ನೋಡುವುದು, ಎಗರಿ ನೋಡುವುದರಲ್ಲಿ ಅರ್ಥವೇ ಇಲ್ಲ.

ಈ ಅಧ್ಯಾಯದ ಪ್ರಾರಂಭದಲ್ಲಿ ಕೃಷ್ಣನ ಮರಣ ಲೋಕಕ್ಕೆ ಕಣ್ತೆರೆ ಎಂದು ಮೊದಲುಮಾಡಿ ಹೇಳಿದ್ದೇವೆ. ನರಕಾಸುರನು ಮರಣಿಸಿದರೆ ಪ್ರಜೆಗಳಿಗೆ ಸಂತೋಷವಾಗಿದೆ. ಆದರೆ ಇಲ್ಲಿ ಕೃಷ್ಣನು ಮರಣಿಸಿದರೆ ಲೋಕಕ್ಕೆ ಕಣ್ತೆರೆಸುತ್ತ ದೆಂದು ನಾವು ಹೇಳುತ್ತಿಲ್ಲ. ಕೃಷ್ಣನ ಮರಣ ಲೋಕವನ್ನು ಕಣ್ತೆರೆಸಿದೆಯಾ? ಎಂದಿದ್ದೇವೆ. ಅದನ್ನನುಸರಿಸಿ ಮರಣಸಮಯದಲ್ಲಿ ಏನೋ ದೊಡ್ಡ ರಹಸ್ಯವಿದೆಯೆಂದು, ಅದು ತಿಳಿದರೆ ಇಲ್ಲಿಯವರೆಗೂ ಕಣ್ಣುಗಳು ಮುಚ್ಚಿಕೊಂಡ ವರು ಕಣ್ಣು ತೆರೆದುಕೊಳ್ಳುತ್ತಾರೆಂದು ಅರ್ಥವಾಗುತ್ತಿದೆ. ಇಲ್ಲಿ ಮುಖ್ಯವಾದ ಘಟ್ಟ ಏನೆಂದರೆ! ಇಲ್ಲಿಯವರೆಗೂ ಯಾವ ವಿಷಯದಲ್ಲಿ ಕುರುಡರಂತೆ ಇದ್ದೇವೆ? ಇಂದಿನಿಂದ ಯಾವುದರಲ್ಲಿ ದೃಷ್ಟಿಹೊಂದಿರಬೇಕು? ಎನ್ನುವ ಪ್ರಶ್ನೆ ಬರುತ್ತದೆ. ನಮಗೆ ಇಲ್ಲಿಯವರೆಗೂ ಇರುವ ಕುರುಡತನವೇನೊ, ಅದು ಕೃಷ್ಣನ ಮರಣವನ್ನು ತಿಳಿದುಕೊಳ್ಳುವುದರಿಂದ ಹೇಗೆ ದೃಷ್ಟಿ ಉಂಟಾಗುತ್ತದೊ, ಎಲ್ಲರೂ ತಿಳಿದುಕೊಳ್ಳಬೇಕು. ಈದಿನ ಇರುವ ಜನ ಸಂಖ್ಯೆಯಲ್ಲಿ ಶೇ. 80% ರಷ್ಟು ಕ್ರೈಸ್ತರಿದ್ದಾರೆ. ಎರಡನೇ ಸ್ಥಾನವನ್ನು ಆಕ್ರಮಿಸಿರುವುದು ಇಸ್ಲಾಮ್‌ಮತ, ನಂತರ ಬೌದ್ಧಮತ, ಆನಂತರ ಹಿಂದೂಮತ. ಹಿಂದೂಮತ ಈದಿನ ಕೊನೆಯ ಸ್ಥಾನದಲ್ಲಿದೆ. ಕೃತಯುಗ, ತ್ರೇತಾಯುಗ ಕಳೆದುಹೋಗಿ ದ್ವಾಪರಯುಗದ ಪ್ರಾರಂಭದಲ್ಲಿ ಹಿಂದೂಮತ ಪ್ರಪಂಚ ವ್ಯಾಪ್ತವಾಗಿ ಖಂಡಾಂತರಗಳವರೆಗು ವ್ಯಾಪಿಸಿರುತ್ತಿತ್ತು. ಈದಿನ ನಾವು ಹಿಂದೂಮತವಾಗಿ ಕರೆದುಕೊಳ್ಳುವುದು ಆದಿನ ಹಿಂದೂಮತ ಎನ್ನುವ ಹೆಸರಿನಿಂದ ಇಲ್ಲ. ದ್ವಾಪರಯುಗ ಮೊದಲ ಕಾಲದಲ್ಲಿ "ಮತ" ಎನ್ನುವ ಹೆಸರು ಭೂಮಿಮೇಲೆ ಇಲ್ಲ. ಅಂದಿನ ಕಾಲದಲ್ಲಿ "ಪಥ" ಎನ್ನುವ ಹೆಸರಿರುತ್ತಿತ್ತು. ಹಿಂದೂ ಎನ್ನುವ ಪದ 'ಇಂದೂ' ಎನ್ನುವ ಪದವಾಗಿ, ಅರ್ಥದಿಂದ ಕೂಡಿಕೊಂಡಿರುವುದಾಗಿ ಇರುತ್ತಿತ್ತು. ಆದಿನ ಇಂದೂಪಥ ಎನ್ನುವುದು ಪ್ರಪಂಚ ವ್ಯಾಪ್ತವಾಗಿ ಇರುತ್ತಿತ್ತು. ಪ್ರಪಂಚದಲ್ಲಿನ ಮನುಷ್ಯರೆಲ್ಲರೂ ನಾವು ಇಂದೂಗಳು ಎಂದು ಹೇಳಿಕೊಳ್ಳುತ್ತಿದ್ದರು. ಪಥ ಎಂದರೆ ಮಾರ್ಗ ಎಂದು ಅರ್ಥ 'ಇಂದೂ' ಎಂದರೆ ಚಂದ್ರನು ಎಂದು ಅರ್ಥ. ಜ್ಯೋತಿಷ್ಯಶಾಸ್ತ್ರದ

ಪ್ರಕಾರ ಜ್ಞಾನಕ್ಕೆ ಚಂದ್ರನು ಅಧಿಪತಿಯಾಗಿರುವುದರಿಂದ, ಆ ದಿನ ದೈವಜ್ಞಾನ ಇರುವವರನ್ನು ಇಂದೂಗಳು ಎಂದು ಹೇಳುತ್ತಿದ್ದರು. ಜ್ಞಾನಮಾರ್ಗದಲ್ಲಿ ನಡೆಯುವವರೆಲ್ಲರನ್ನು ಜ್ಞಾನಪಥದಲ್ಲಿನವರೆಂದು ಹೇಳುತ್ತಿದ್ದರು. ಆದ್ದರಿಂದ ಜ್ಞಾನಿಗಳು ನಮ್ಮದು ಇಂದೂಪಥ ಎಂದು ಹೇಳುತ್ತಿದ್ದರು. ನಾವು ಇಂದೂಗಳು, ನಮ್ಮದು ಇಂದೂಪಥ ಎಂದು ಹೆಮ್ಮೆಯಿಂದ ಹೇಳುಕೊಳ್ಳುವ ದಿನಗಳು ಪೂರ್ವದಲ್ಲಿದ್ದವು. ಕಾಲಕ್ರಮವಾಗಿ ಮಾಯಾ ಪ್ರಭಾವ ಹೆಚ್ಚಾಗಿ, ಮನುಷ್ಯರೆಲ್ಲರು ಕುರುಡರಾಗಿ ಪಥವನ್ನು ಮತವಾಗಿ, ಇಂದೂವನ್ನು ಹಿಂದೂವಾಗಿ ಬದಲಾಯಿಸಿಕೊಂಡಿದ್ದಾರೆ.

ಒಂದಾನೊಂದುದಿನ ಪ್ರಪಂಚ ವ್ಯಾಪ್ತವಾಗಿರುವ ಇಂದೂಗಳಿಗು ಕೇಂದ್ರ ಬಿಂದುವಾಗಿ ಭಾರತದೇಶ ಇತ್ತು. ದೈವಜ್ಞಾನ ಮೊದಲು ಭಾರತದೇಶದಲ್ಲಿಯೇ ಹುಟ್ಟಿದೆ. ಅದು ಬೆಳೆದು ವಿಶ್ವ ವ್ಯಾಪ್ತವಾಗಿದೆ, ಆದರೆ ಈದಿನ ಅದು ಇಳಿಮುಖವಾಗಿ ಕೊನೆಗೆ ಭಾರತದೇಶದಲ್ಲಿ ಸಹ 'ಇಂದೂ' ಎಂಬ ಹೆಸರು ಕಾಣಿಸದಂತೆ ಹೋಗಿದೆ. ಭಾರತದೇಶದಲ್ಲಿ ಉಳಿದ ಸ್ವಲ್ಪಜನ ತಮ್ಮ ಚರಿತ್ರೆಯನ್ನು ಮರೆತುಹೋಗಿ, ನಾವು ಹಿಂದೂಗಳು ಎಂದು ಅರ್ಥವೇ ಇಲ್ಲದ ಹೆಸರನ್ನು ಹೇಳಿಕೊಳ್ಳುತ್ತಿದ್ದಾರೆ. ದೈವಜ್ಞಾನಕ್ಕೆ ಸಂಬಂಧಿಸಿದ ಇಂದೂ ಎಂಬ ಹೆಸರನ್ನು ಬಿಟ್ಟು, ಭೌಗೋಳಿಕ ಸಂಬಂಧವಾದ ಒಂದು ಪ್ರಾಂತ್ಯದ ಹೆಸರನ್ನು, ಒಂದು ನದಿ ಹೆಸರನ್ನು ಹೇಳಿಕೊಳ್ಳುತ್ತಾ ನಾವು ಹಿಂದೂಗಳು ಎನ್ನುತ್ತಿದ್ದಾರೆ. ಹಾಗೆ ಹೇಳಿಕೊಳ್ಳುವುದು ತಪ್ಪು. ನಮ್ಮನ್ನು ನಾವು ಕಡಿಮೆಮಾಡಿಕೊಂಡು ಹೇಳಿ ಕೊಳ್ಳುತ್ತಿದ್ದೇವೆ. ನಮ್ಮದು ಉನ್ನತವಾದ ಹೆಸರು, ಉನ್ನತವಾದ ಪಥ ಎಂದು ನಾವು ಹೇಳಿದರೂ ಕೇಳುವ ಸ್ಥಿತಿಯಲ್ಲಿ ಇಲ್ಲದ ಕಿವುಡರಾಗಿದ್ದೇವೆ. ನಮ್ಮ ಚರಿತ್ರೆ ಇದು, ನಾವು ಇಂದೂಗಳು, ನಮ್ಮದು ಇಂದೂ ಪಥ ಎಂದು ನಾವು ಒಂದು ಗ್ರಂಥವನ್ನು ಬರೆದು ಉಚಿತವಾಗಿ ಹಂಚಿದರೆ, ಮಹಾನಂದಿಯಲ್ಲಿ ನಾವು ಪರಮತವನ್ನು ಕುರಿತು ಪ್ರಚಾರ ಮಾಡುತ್ತಿದ್ದೇವೆಂದು ನಮ್ಮ ಮೇಲೆ ಕೇಸುಗಳು ಹಾಕಿ ಕೊರ್ಟಿಗೆ ತಿರುಗಿಸುತ್ತಿದ್ದಾರೆಂದರೆ, ನಮ್ಮದು ಪೂರ್ವದ

ಇಂದೂ ಜಾತಿಯೇನಾ ಎಂದು ಅನುಮಾನ ಬಾರದೆ ಇರುವುದಿಲ್ಲ. ಇವು ನಮ್ಮ ಸಾಂಪ್ರದಾಯಗಳು ಎಂದು **"ಇಂದೂ ಸಾಂಪ್ರದಾಯಗಳು"** ಎನ್ನುವ ಹೆಸರಿನಿಂದ ಒಂದು ಗ್ರಂಥವನ್ನು ಬರೆದು ಬಿಡುಗಡೆ ಮಾಡಿದರೆ, ಇಂದೂ ಎನ್ನುವ ಹೆಸರು ಇಡುವುದು ತಪ್ಪು ಎಂದು ವಿಶ್ವಹಿಂದೂ ಪರಿಷತ್‌ನವರು ಗುಂತಕಲ್ಲಿನಲ್ಲಿ ನಮ್ಮಮೇಲೆ ಭೌತಿಕ ದಾಳಿಗಳಿಗೆ ಸಿದ್ಧರಾಗಿರುವುದು ಪರ ಮತಗಳ ಮುಂದೆ ನಾಚಿಕೆಗೇಡು ಅಲ್ಲವೆ! ಕೇಳಿದರೆ ವಿವರವಾಗಿ ನಿಮಗೆ ಅರ್ಥವಾಗುವಂತೆ ಹೇಳುತ್ತೇವೆಂದರೂ ಕೇಳದಂತೆ, ನಾವು ಬರೆದ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಯನ್ನು ತೋರಿಸಿದರೂ, ಆ ಭಗವದ್ಗೀತೆಯನ್ನು ನಡು ಬೀದಿಯಲ್ಲಿ (ಬಜಾರಿನಲ್ಲಿ) ಹಿಂದೂ ಸಮಾಜದವರೇ ಬೆಂಕಿ ಹಚ್ಚಿ ಸುಟ್ಟಿದ್ದಾರೆಂದರೆ, ಪೂರ್ವದಲ್ಲಿರುವ ಇಂದೂಗಳ ಆತ್ಮಗಳು ಆ ದೃಶ್ಯವನ್ನು ನೋಡಿ ಅವರನ್ನು ಶಪಿಸದಂತೆ ಬಿಡುವುದಿಲ್ಲ ಎನಿಸುತ್ತದೆ.

ಈ ದಿನ ಯಾವುದೇ ಇಂದೂ ಸಂಸ್ಕೃತಿಯನ್ನು ತಿಳಿಯದ ಹಿಂದೂ ಸಂಸ್ಥೆಗಳು ಅನೇಕವು ಹುಟ್ಟಿಬರುತ್ತಿವೆ. ಆ ಸಂಸ್ಥೆಗಳಲ್ಲಿ ಇರುವವರಿಗೆ ಪೂರ್ವದಲ್ಲಿ ಇಂದೂ ಮತ ವಿಶ್ವವ್ಯಾಪ್ತವಾಗಿ ಇರುತ್ತಿತ್ತೆಂದಾಗಲಿ, ಈಶ್ವರನು ತನ್ನ ತಲೆಮೇಲೆ ಚಂದ್ರಾಕಾರವನ್ನು ಧರಿಸಿರುವುದರಿಂದ, ನಮಗೆ ಆ ದಿನ ಸಂಪೂರ್ಣ ಜ್ಞಾನವಿರುವುದರಿಂದ, ನಾವು ಇಂದೂಗಳಾಗಿ ಇದ್ದೇವೆಂದಾಗಲಿ ತಿಳಿದಿಲ್ಲ. ಇಂದೂ ಮತ (ಇಂದೂಪಥ) ವೊಂದರ ಹುಟ್ಟು ಪೂರ್ವೋತ್ತರಗಳು ತಿಳಿಯದವರು, ಕೃಷ್ಣನು ಹೇಳಿದ ಭಗವದ್ಗೀತೆಗೆ ಬೆಲೆಕೊಡದವರು, ನಾವು ಹಿಂದೂಗಳೆಂದು, ಮತವನ್ನು ರಕ್ಷಿಸುವುದಕ್ಕೆ ನಾವು ಸಂಘಗಳಾಗಿ ಏರ್ಪಟ್ಟಿದ್ದೇವೆಂದು ಹೇಳಿಕೊಳ್ಳುತ್ತಿದ್ದಾರೆ. ಹಿಂದೂಮತ ಏಕೆ ಕ್ಷೀಣಿಸುತ್ತಿದೆಯೊ, ಅದಕ್ಕಿರುವ ಕಾರಣವೇನೊ ಯಾವಮಾತ್ರವೂ ಅರ್ಥಮಾಡಿಕೊಳ್ಳುತ್ತಿಲ್ಲ. ಇತರ ಮತದವರು ಅವರ ಪ್ರವಕ್ತರು ಹೇಳಿದ ಮಾತುಗಳನ್ನು ಹೇಳಿ, ಅವರ ಮತಗಳನ್ನು ಅಭಿವೃದ್ಧಿ ಮಾಡಿಕೊಳ್ಳುತ್ತಾ ಹೋಗುತ್ತಿದ್ದರೆ, ದಿನ ದಿನಕ್ಕು ಹಿಂದೂಮತ ಕ್ಷೀಣಿಸಿ ಹೋಗುತ್ತಿದೆ. ಹಿಂದೂ ಸಂಸ್ಥೆಗಳು ತಮ್ಮ ಜ್ಞಾನವನ್ನು ತಿಳಿದುಕೊಂಡು, ಜ್ಞಾನವನ್ನು

ಬೋಧಿಸಿ ಕ್ಷೀಣಿಸಿ ಹೋಗುತ್ತಿರುವ ಮತವನ್ನು ರಕ್ಷಿಸಿಕೊಳ್ಳಬೇಕು. ಆದರೆ ಹಾಗಲ್ಲದೆ ಪರ ಮತಗಳ ಮೇಲೆ ದಾಳಿಗಳನ್ನು ಮಾಡುತ್ತಾ ಹಿಂದೂಮತವನ್ನು ರಕ್ಷಿಸುತ್ತೇವೆನ್ನುವುದು, ರೋಗಕ್ಕೆ ಔಷಧವನ್ನು ಕೊಡದಂತೆ ವಿಷವನ್ನು ಕೊಟ್ಟಂತಾಗುತ್ತದೆ. ನಾವು ಹೇಳುವ ಬೋಧನೆಗಳು ಈದಿನ ಎಷ್ಟೋ ಪ್ರಶಂಸಿಸಲ್ಪಡುತ್ತಿವೆ. ಇದನ್ನು ಮಿಗಿಲಾದ ಶಾಸ್ತ್ರವಿಲ್ಲ ಎಂದು ಪ್ರಜೆಗಳೆಲ್ಲರೂ ಕೊಂಡಾಡುತ್ತಿರುವಾಗ, ನಮ್ಮ ಜ್ಞಾನವನ್ನು ಮಾತ್ರ ನೋಡದಂತೆ, ಓದದಂತೆ ನಮ್ಮನ್ನು ಅವಮಾನಪಡಿಸಿದರೆ ಈಗಿರುವ ಹಿಂದೂ ಸಮಾಜ ಕುರುಡು ಸಮಾಜ ಎನ್ನದೇ ಏನನ್ನಬೇಕು?

ಮತ ಎನ್ನುವ ಹೆಸರಿನಿಂದ ಅಜ್ಞಾನ ತುಂಬಿದ ಮನುಷ್ಯರು ಗುಂಪುಗಳಾಗಿ ಸೇರಿ, ಹಿಂದೂಗಳೆ ಇಂದೂತ್ವಕ್ಕೆ ಸಮಾಧಿಕಟ್ಟುವ ಸಮಯ ಬಂದಿದೆ. ಆದ್ದರಿಂದ ಭಗವಂತನ ಮೂರನೇ ಅವತಾರವಾದ ಆಕರ್ತ ಬರುವಿಕೆ ಇಷ್ಟರಲ್ಲಿಯೇ ಇರುತ್ತದೆಂದುಕೊಳ್ಳುತ್ತೇವೆ. ಇಂದೂ ಧರ್ಮಗಳಿಗು ಪೂರ್ತಿ ಹಾನಿ ಏರ್ಪಟ್ಟ ಈ ಸಮಯದಲ್ಲಿಯೇ, ಭಗವಂತನ ಬರುವಿಕೆ ಇರುತ್ತದೆಂದು ಕೊಳ್ಳುತ್ತೇವೆ. ಈದಿನ ಹಿಂದೂಸಂಘಗಳು ಜ್ಞಾನ ಇಲ್ಲದಿರುವವಾಗಿ ಅದರಿಂದ, ಇಲ್ಲಿಗೆ ಉತ್ತರಾಂಧ್ರ ಅರ್ಧಕ್ಕೆ ಅರ್ಧ ಹಿಂದೂಮತವನ್ನು ಬಿಟ್ಟುಹೋಗಿದೆ. ಆದ್ದರಿಂದ ಹಿಂದೂಗಳ ಸಂಘಗಳು ಈಗಲಾದರೂ ಕಣ್ತೆರೆದು, ಜ್ಞಾನ ಪ್ರಚಾರದಿಂದಲೇ ಹಿಂದೂ ಮತ ರಕ್ಷಿಸಲ್ಪಡುತ್ತದೆಂದು, ಜ್ಞಾನವಿಲ್ಲದೆ ಸಂಘಗಳು ಇಟ್ಟುಕೊಂಡು ರಾಜಕೀಯಪಾರ್ಟಿಗಳಂತೆ ಮುಂದುವರಿದರೆ ಪ್ರಜೆಗಳು ಛೀಮಾರಿ ಹಾಕಿ ಬೇರೆ ಮತದೊಳಗೆ ಹೋಗುತ್ತಾರೆಂದು ತಿಳಿಯಬೇಕು. ಆದ್ದರಿಂದ ಈಗಲಾದರೂ ಜ್ಞಾನಿಗಳಿಗು, ಗುರುಗಳಿಗು ಬೆಲೆಕೊಟ್ಟು ಅವರ ಸಲಹೆಗಳಿಂದ ಜ್ಞಾನವನ್ನು ಪ್ರಚಾರ ಮಾಡಿ, ಅದರಮೂಲಕ ಹಿಂದೂತ್ವವನ್ನು ಕಾಪಾಡುವ ಪ್ರಯತ್ನ ಮಾಡಿರೆಂದು ಹೇಳುತ್ತಿದ್ದೇವೆ. ಬರುವಂತಹ ಕಾಲದಲ್ಲಿ ಪ್ರಜೆಗಳು ಮತಗಳ ಭ್ರಮೆಯಲ್ಲಿ ಮುಳುಗಿಹೋಗಿ, ದೈವತ್ವವನ್ನು ಮರೆತು ಹೋಗುತ್ತಾರೆಂಬ ಉದ್ದೇಶದಿಂದಲೇ ಮತಗಳ ವಿಷಯವನ್ನು ತನ್ನ ಮರಣದಲ್ಲಿ ಕೃಷ್ಣನು ಹೇಳಿ ಹೋಗಿದ್ದಾನೆ.

ಈ ದಿನ ಮತಗಳನ್ನು ಬದಲಾಯಿಸಿಕೊಳ್ಳುವವರಿಗೆ ಕಣ್ತೆರೆದು ನೋಡುವಂತೆ ಕೃಷ್ಣನು ತನ್ನ ಮರಣದಲ್ಲಿ ಬೇಡನಿಗೆ ಬರುವಂತಹ ಕ್ರೈಸ್ತಮತವನ್ನು ಕುರಿತು ಹೇಳಿ ಅದರ ಪ್ರವಕ್ತನು ನಾನೇಯೆಂದು ಹೇಳಿದ್ದಾನೆ. ಈಗ ನಿಮಗೆ ಅರ್ಥವಾಗುವುದಕ್ಕೆ ನಾವು ಮತ ಎಂಬ ಪದವನ್ನು ಬಳಸುತ್ತಾ ಹೇಳುತ್ತಿದ್ದೇವೆ. ಆದಿನ ಕೃಷ್ಣನು ಮತವೆಂಬ ಹೆಸರನ್ನು ಉಪಯೋಗಿಸಲಿಲ್ಲವೆಂದು ಜ್ಞಾಪಕ ಇಟ್ಟುಕೊಳ್ಳಬೇಕು. ಧರ್ಮಗಳನ್ನು ನೆಲೆಗೊಳಿಸುವ ಕಾರ್ಯದಲ್ಲಿ ಮೂರುಬಾರಿ, ಮೂರು ಕಾಲಗಳಲ್ಲಿ ಹೇಳಬೇಕಾದ ಜವಾಬ್ದಾರಿ ಕೃಷ್ಣನಿಗಿದೆ. ಆದ್ದರಿಂದ ಎರಡನೇ ಅವತಾರವಾಗಿ ಯೇಸು ಹೆಸರಿನಿಂದ ಬರುತ್ತೇನೆಂದು ಹೇಳಿದ್ದಾನೆ. ಯೇಸು ಹೆಸರಿನಿಂದ ಬಂದು ಅಲ್ಲಿಯೂ ಸಹ ಧರ್ಮಗಳನ್ನು ತಿಳಿಸುತ್ತೇನೆಂದಿದ್ದಾನೆ ಹೊರತು ಒಂದು ಮತವನ್ನು ಸ್ಥಾಪಿಸುತ್ತೇನೆಂದು ಆತನು ಹೇಳಲಿಲ್ಲ. ಯೇಸು ಹೇಳಿದ ಬೋಧನೆ ನಾಲ್ಕುಜನ ಶಿಷ್ಯರು ಬರೆದ ನಾಲ್ಕು ಸುವಾರ್ತೆಗಳ ರೂಪದಲ್ಲಿ ಇದೆ. ಆದರೆ ಪೂರ್ತಿ ಬೈಬಲ್ ರೂಪದಲ್ಲಿ ಇಲ್ಲ. ಆದ್ದರಿಂದ ಈ ಗ್ರಂಥದಲ್ಲಿ ಎಲ್ಲಿಯೂ ಬೈಬಲ್ ಎನ್ನುವ ಪದವನ್ನು ಬಳಸಲಿಲ್ಲವೆಂದು ಗ್ರಹಿಸಬೇಕು. ಯೇಸು ಹೇಳಿದ ವಾಕ್ಯಗಳನ್ನು ಯಾರು ಗ್ರಹಿಸುತ್ತಾನೊ ಅವನು ನಿಜವಾಗಲು ಯೇಸು ಭಕ್ತನಾಗುತ್ತಾನೆ. ಯೇಸು ಭಕ್ತನಾದವನು ಕೃಷ್ಣನು ಯೇಸು ಇಬ್ಬರೂ ಒಬ್ಬರೇಯೆಂದು ಗ್ರಹಿಸುತ್ತಾನೆ. ಹಾಗೆ ಗ್ರಹಿಸದವನಿಗೆ ಯೇಸು ಹೇಳಿದ ಜ್ಞಾನ ಅರ್ಥವಾಗಲಿಲ್ಲವೆಂದು, ಅವನು ಯೇಸು ಭಕ್ತನಲ್ಲವೆಂದು ಅರ್ಥವಾಗುತ್ತದೆ. ಈದಿನ ಯಾರಾದರು ನಾನು ಯೇಸುನನ್ನು ವಿಶ್ವಾಸಿಸುತ್ತಿದ್ದೇನೆ ಎಂದರೂ, ಅವನು ನಾನು ಕ್ರೈಸ್ತನು ಎಂದು ಯೇಸು ಕ್ರೈಸ್ತರ ದೇವರೆಂದು, ಹಿಂದೂಗಳ ದೇವರು ಬೇರೆಯೆಂದು ತಿಳಿದುಕೊಳ್ಳುವುದರಿಂದ ಅವನು ಯೇಸುನನ್ನು ವಿಶ್ವಾಸಿಸಿದವನು ಅಲ್ಲವೆಂದು, ಆದ್ದರಿಂದ ನಿಜವಾದ ಕ್ರೈಸ್ತನು ಅಲ್ಲವೆಂದು ಅರ್ಥವಾಗುತ್ತಿದೆ. ಇದಕ್ಕೆಲ್ಲಾ ಮೂಲ ಕೃಷ್ಣನ ಮರಣದಲ್ಲಿ ನಡೆದ ಸಮಾಚಾರ ಯಾರಿಗೂ ತಿಳಿಯದಿರುವುದರಿಂದ, ಕೃಷ್ಣನು ಮೊದಲೆ ಹೇಳಿದಂತೆ ಯೇಸುವಾಗಿ ಬಂದರೂ, ಯೇಸು ನನ್ನ ದೇವರೆನ್ನುತ್ತಾ ಕೃಷ್ಣನನ್ನು ದೂಷಿಸುವವರು ಇದ್ದಾರೆ. ಹಾಗೆ ಯೇಸು ಭಕ್ತರು ಕೃಷ್ಣನನ್ನು ದೂಷಿಸಿದರೆ ಯೇಸುನನ್ನು ದೂಷಿಸಿದಂತೆ

ಆಗುತ್ತದೆ. ಅದೇ ವಿಧವಾಗಿ ಕೃಷ್ಣನ ಭಕ್ತರು ಯೇಸುನನ್ನು ದೂಷಿಸಿದರೂ, ಯೇಸುವೇ ಕೃಷ್ಣನಾದ್ದರಿಂದ ಅವರು ಕೃಷ್ಣನನ್ನು ದೂಷಿಸಿದಂತಾಗುತ್ತದೆ. ಕೃಷ್ಣನು ಯೇಸುವಾಗಿ ಹುಟ್ಟುತ್ತೇನೆಂದು ಮೊದಲೆ ಹೇಳಿದಂತೆ ತಿಳಿಯುವುದರಿಂದ, ಇತ್ತ ಹಿಂದೂಗಳಿಗು ಅತ್ತ ಕ್ರೈಸ್ತರಿಗು ಕಣ್ತೆರೆಸಿ, ಈಗಿನಿಂದ ತಮ್ಮ ಪ್ರವರ್ತನೆಯನ್ನು ಬದಲಾಯಿಸಿಕೊಂಡು, ಯಾರು ಯಾವ ಮತದಲ್ಲಿ ಇದ್ದರೂ ದೇವರೇ ಅದರಲ್ಲಿ ಹುಟ್ಟಿಸಿದ್ದಾನೆಂದು ತಿಳಿದು, ಮತವನ್ನು ಬದಲಾಯಿಸದಂತಿದ್ದು ಕೃಷ್ಣನನ್ನು, ಯೇಸುವನ್ನು ಸಮಾನವಾಗಿ ನೋಡುವ ಹಿಂದೂಗಳು, ಯೇಸುವನ್ನು ಕೃಷ್ಣನನ್ನು ಸಮಾನವಾಗಿ ನೋಡುವ ಕ್ರೈಸ್ತರು ಸಮಾಜದಲ್ಲಿ ತಯಾರಾಗುತ್ತಾರೆಂದು ತಿಳಿಯುತ್ತಿದ್ದೇವೆ. ಯೇಸು ಹೇಳಿದ ನಾಲ್ಕು ಸುವಾರ್ತೆಗಳನ್ನು ಮಾತ್ರ ಕ್ರೈಸ್ತರು ಓದಬೇಕು. ನಾಲ್ಕು ಸುವಾರ್ತೆಗಳೊಂದಿಗೆ ಒಟ್ಟಾರೆ ಬೈಬಲ್‌ನನ್ನು ಓದುವವನು ಯೇಸುನನ್ನು ಗೌರವಿಸದಂತೆಯೇ, ಆತನ ಬೋಧನೆಗಳಿಗೆ ಪ್ರಾಧಾನ್ಯತೆ ಕೊಡದಂತೆಯೇ, ಅಂತವನು ಕ್ರೈಸ್ತನು ಅಲ್ಲ. ಅದೇ ವಿಧವಾಗಿ ಕೃಷ್ಣನು ಹೇಳಿದ ಕೇವಲ 17 ಅಧ್ಯಾಯಗಳ ಭಗವದ್ಗೀತೆಯನ್ನು ಹಿಂದೂಗಳು ಓದಬೇಕು. ಗೀತೆಯೊಂದಿಗೆ ವೇದಗಳನ್ನು ಓದಿದರೂ ಅಥವಾ ಗೀತೆಯನ್ನು ಬಿಟ್ಟು ವೇದಗಳನ್ನು ಓದಿದರು ಅವನು ಕೃಷ್ಣನನ್ನು ಗೌರವಿಸದಂತೆ. ಆತನ ಬೋಧನೆಗಳಿಗೆ ಪ್ರಾಧಾನ್ಯತೆ ಕೊಡದಂತೆ. ಅಂತವನು ಹಿಂದೂ (ಇಂದೂ) ಅಲ್ಲ. ಈ ವಿಧವಾಗಿ ಲೆಕ್ಕಿಸಿ ನೋಡಿದರೆ ಈದಿನ ಸರಿಯಾದ ಹಿಂದೂ ಇಲ್ಲ. ಹಾಗೆಯೇ ಸರಿಯಾದ ಕ್ರೈಸ್ತನು ಇಲ್ಲ. ಆದ್ದರಿಂದ ಈದಿನ ಈ ಗ್ರಂಥವನ್ನು ಓದಿ ಕೃಷ್ಣನ ಮರಣ ಸಮಯದಲ್ಲಿ ನಡೆದ ರಹಸ್ಯವನ್ನು ಯಾರಾದರೆ ತಿಳಿದುಕೊಳ್ಳುತ್ತಾರೊ ಅವರೆಲ್ಲರಿಗೂ ಕಣ್ತೆರದಂತಾಗುತ್ತದೆ. ನಾವು ನಿನ್ನದು ಆ ಮತ, ನನ್ನದು ಈ ಮತವೆಂದು ಹೇಳಿಕೊಳ್ಳುವುದು ಒಂದೇ ವಂಶದಲ್ಲಿ ಹುಟ್ಟಿದ ಇಬ್ಬರು ಅಣ್ಣತಮ್ಮಂದಿರು ತಮ್ಮ ವಂಶವನ್ನು ಕುರಿತು ತಿಳಿಯದೆ ಅಣ್ಣ ಒಂದು ವಂಶದ ಹೆಸರು, ತಮ್ಮನು ಮತ್ತೊಂದು ವಂಶದ ಹೆಸರು ಹೇಳಿದರೆ ಸ್ವಂತ ತಂದೆಯನ್ನೇ ಮರೆತಂತಾಗುತ್ತದೆ. ಆದ್ದರಿಂದ ಈಗಿನಿಂದಾದರೂ ಕೆಲವು ಸಾವಿರ ವರ್ಷಗಳ ಹಿಂದೆ ಏನು ನಡೆದಿದೆಯೆಂದು ಯೋಚಿಸಿ, ತಮ್ಮ ತಮ್ಮ ಮತಗಳು ಪೂರ್ವದಲ್ಲಿ

ಇಲ್ಲವೇ ಇಲ್ಲವೆಂದು ಗ್ರಹಿಸಿ, ಆಗಿದ್ದಿದ್ದು ಒಂದೇವೊಂದು ಪಥವು ಮಾತ್ರವೇ ಯೆಂದು, ಅದೇ "ಇಂದೂ ಪಥವೆಂದು" ತಿಳಿದು, ಇಂದೂಪಥವನ್ನು ಮರೆತು ಹೋಗಿರುವುದರಿಂದ ಹಿಂದೂಮತ, ಕ್ರೈಸ್ತಮತವೆಂದು ಬೇರೆಬೇರೆಯಾಗಿ ಸೀಳಿಹೋಗಿವೆಯೆಂದು ತಿಳಿದುಕೊಂಡರೆ, ಈದಿನಕ್ಕು ಎರಡರಲ್ಲಿ ಒಂದೇ ಬೋಧನೆ ಇದೆಯೆಂದು, ಎರಡನ್ನು ತಿಳಿಸಿದವನು ಒಂದೇ ಭಗವಂತನೆಂದು ತಿಳಿಯಬಲ್ಲದು.

ನಡೆಯುವಂತಹ ವಿಷಯವನ್ನು ತಿಳಿದ ಕೃಷ್ಣನು ತನ್ನ ಮರಣ ಸಮಯದ ವರೆಗು ಬರುವಂತಹ ತನ್ನ ಜನ್ಮಗಳನ್ನು ಕುರಿತು ತಿಳಿಸಲಿಲ್ಲ. ಕೊನೆಯ ಮರಣ ಸಮಯದಲ್ಲಿ ಬೇಡನನ್ನು ಅಡ್ಡ ಇಟ್ಟುಕೊಂಡು, ಭವಿಷ್ಯತ್ತು ಅವತಾರಗಳನ್ನು ಕುರಿತು ಹೇಳಿದ್ದಾನೆ. ಬೇಡನು ಕೇಳಿರುವುದನ್ನು ಪುನಃ ಹೇಳುವ ಸಮರ್ಥನು ಅಲ್ಲವೆಂದು ತಿಳಿದ ಕೃಷ್ಣನು ಅವನಿಗೆ ಹೇಳಿದ್ದಾನೆ. ಹಾಗೆ ಹೇಳಿರುವುದರಿಂದ ಅವನ ಆತ್ಮ ಆ ವಿಷಯವನ್ನು ಸ್ವೀಕರಿಸಿ, ತನ್ನ ಮೂರನೇ ಅವತಾರ ಸಮಯ ಸಮೀಪಿಸಿದಾಗ ಆತ್ಮವೇ ಆ ವಿಷಯವನ್ನು ಹೊರಗೆ ತಿಳಿಸುವಂತೆ ಭಗವಂತನು ನಿರ್ಣಯಿಸಿದ್ದಾನೆ. ಅಲ್ಲಿಗೆ ಬೆಳೆಯಬೇಕಾದ ಅಜ್ಞಾನವೆಲ್ಲಾ ಬೆಳೆದು, ಮತದ್ವೇಷಗಳು ಹೆಚ್ಚಾಗಿ ಮಾನವನು ಆಧ್ಯಾತ್ಮಿಕವೆನ್ನುವ ದಾರಿಯನ್ನು ಬಿಟ್ಟು, ಮಾಯಾ ದಾರಿಯಲ್ಲಿ ಹೋಗುವಾಗ, ಮೂರನೇ ಪುರುಷನಾಗಿ ಬಂದವನು ತನ್ನ ಜ್ಞಾನವನ್ನು ತಿಳಿಯಪಡಿಸಿ ಧರ್ಮಗಳನ್ನು ಪೂರ್ತಿಯಾಗಿ ನೆಲೆಗೊಳಿಸುತ್ತಾನೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ! ನಾನು ಅನ್ನದಾನ ಮಾಡುತ್ತೇನೆ. ನಾನು ಅನ್ನವನ್ನು ಇಡುವುದರಿಂದ ನಮ್ಮ ಹತ್ತಿರ ಇರುವವರೆಲ್ಲರೂ ಹಸಿವು ಇಲ್ಲದವರಾಗುತ್ತಾರೆ. ಯಾರಿಗೂ ಹಸಿವು ಇಲ್ಲದಂತೆ ಮಾಡುತ್ತೇನೆಂದಾಗ, ನನ್ನ ಹತ್ತಿರ ಇರುವವರೆಲ್ಲರಿಗೂ ಆಹಾರ ಸಿಗದಂತೆಹೋಗಿ ಪೂರ್ತಿ ಹಸಿವುಗೊಂಡವ ರಾದಾಗ, ನಾನು ಕೊಟ್ಟಿರುವ ಆಹಾರದಿಂದ ಅವರ ಹಸಿವು ಪೂರ್ತಿಯಾಗಿ ತೀರಿಹೋದರೆ, ಆಗ ನಾನು ಹೇಳಿದಂತೆ ಎಲ್ಲರ ಹಸಿವು ತೀರಿದಂತಾಗುತ್ತದೆ.

ನಾನು ಅನ್ನವನ್ನು ಮಾಡಿ ಸಿದ್ಧವಾಗಿ ಇಟ್ಟುಕೊಂಡರೂ, ಆ ಸಮಯಕ್ಕೆ ಹಸಿವುಗೊಂಡವರು ಯಾರೂ ಇಲ್ಲದಿದ್ದರೆ ನಾನು ಯಾರ ಹಸಿವು ತೀರಿಸದಂತೆ ಅಲ್ಲವೆ! ಆದ್ದರಿಂದ ಎದುರಿರುವವರು ಹಸಿವಿನಿಂದಿರುವಾಗಲೇ ನನ್ನ ಕಾರ್ಯ ನೆರವೇರುತ್ತದೆ. ಅದೇ ವಿಧವಾಗಿಯೇ ದೇವರು ನಾನು ಭಗವಂತನಾಗಿ ಬಂದು ಅಧರ್ಮಗಳನ್ನು ಇಲ್ಲದಂತೆ ಮಾಡುತ್ತೇನೆಂದಿದ್ದಾನೆ. ಆತನ ಕೆಲಸ ಅಧರ್ಮಗಳನ್ನು ರೂಪ ಬದಲಿಸಿ ಧರ್ಮಗಳನ್ನು ತಿಳಿಯಪಡಿಸುವುದಾದಾಗ, ಆತನು ಬಂದಾಗ ಧರ್ಮಗಳೆಂಬ ಆಹಾರ ಇಲ್ಲದಂತೆಹೋಗಿ ಅಧರ್ಮಗಳೆನ್ನುವ ಹಸಿವು ಇರಬೇಕು. ಆಗ ಧರ್ಮಗಳೆನ್ನುವ ಆಹಾರದಿಂದ ಅಧರ್ಮಗಳೆನ್ನುವ ಹಸಿವನ್ನು ತೀರಿಸಿದವನಾಗುತ್ತಾನೆ. ಆಗ ಪಕ್ಕದವರ ದೃಷ್ಟಿಯಲ್ಲಿ ಎದುರಿರುವವನ ಹಸಿವು ತೀರಿಸಿದವನಾಗುತ್ತಾನೆ. ಭಗವಂತನು ಕೃಷ್ಣನ ರೂಪದಲ್ಲಿ ಇರುವಾಗ ಹೇಳಿದ ಮಾತು ನೆರವೇರುವುದಕ್ಕೆ, ತನ್ನ ಮೂರನೇ ಅವತಾರ ಸಮಯಕ್ಕೆ ಭೂಮಿಮೇಲೆ ಪೂರ್ತಿ ಅಜ್ಞಾನವನ್ನು ಬೆಳೆವಣಿಗೆ ಆಗುವಂತೆ ಮಾಡಿದ್ದಾನೆ. ಇನ್ನು ಅದನ್ನು ರೂಪ ಬದಲಿಸಿ ಧರ್ಮಗಳನ್ನು ನೆಲೆಗೊಳಿಸಿ ತನ್ನಮಾತನ್ನು ನಿಲ್ಲಿಸಿಕೊಳ್ಳುತ್ತಾನೆ. ಈ ವಿಧವಾಗಿ ದೇವರು ಭೂಮಿಮೇಲಕ್ಕೆ ಭಗವಂತನಾಗಿ ಬಂದು, ಮೂರು ಅವತಾರಗಳನ್ನು ಧರಿಸಿ ಪುನಃ ದೇವರಾಗಿ ಬದಲಾಗಿ ಹೋಗುತ್ತಿದ್ದಾನೆ. ದ್ವಾಪರ ಯುಗದಲ್ಲಿ ದೇವರು ಕೃಷ್ಣನಾಗಿಬಂದು, ಧರ್ಮಗಳನ್ನು ಗೀತೆ ರೂಪದಲ್ಲಿ ಹೇಳಿಹೋಗಿ, ನಂತರ ಮೂರು ಸಾವಿರ ವರ್ಷಗಳಿಗೆ ಯೇಸುವಾಗಿ ಬಂದು ಆಗಲೂ ಸಹ ಧರ್ಮಗಳನ್ನು ತಿಳಿಸಿ, ಮೂರನೇ ಅವತಾರವಾಗಿ 'ಆಕರ್ತ' ರೂಪದಲ್ಲಿ ಬಂದು ತನ್ನ ಕಾರ್ಯವನ್ನು ಅಲ್ಲಿಗೆ ಪೂರ್ತಿಮಾಡುತ್ತಾನೆ. ಹಾಗೆ ಪೂರ್ತಿಮಾಡಿದ ಭಗವಂತನು ಪುನಃ ದೇವರಾಗಿ ಬದಲಾಗಿಹೋಗುತ್ತಾನೆ. ಆದುದರಿಂದ ಮೊದಲು ಕೃಷ್ಣನು ದೇವರು, ನಂತರ ಕೃಷ್ಣನು ಭಗವಂತನು ಆ ನಂತರ ಕೃಷ್ಣನು ದೇವರಾಗುತ್ತಾನೆ. ಆದ್ದರಿಂದ ಕೃಷ್ಣನು ದೇವರು ಮತ್ತು ಭಗವಂತನೆಂದು ಹೇಳಬಹುದು.



# ನಮ್ಮ ಕೃಷ್ಣಮಂದಿರ

ಸ್ವಾರ್ಥಪರರು ಹೇಳಿದಂತೆ "ನಮ್ಮ ಕೃಷ್ಣಮಂದಿರ" ಎಂದು ಹೇಳುವುದೇನೆಂದು ಕೆಲವರು ಮನಸ್ಸಿನಲ್ಲಿಯಾದರೂ ಅಂದುಕೊಳ್ಳಬಹುದು. ಪ್ರಪಂಚ ವಿಷಯಗಳಲ್ಲಿ ಸ್ವಾರ್ಥ ಇರಬಾರದು. ಆದರೆ ದೇವರ ವಿಷಯದಲ್ಲಿ ಎಲ್ಲರಿಗೂ ಸ್ವಾರ್ಥ ಇದ್ದರೇನೆ ಒಳ್ಳೆಯದು. ದೇವರ ವಿಷಯಗಳಲ್ಲಿ ಎಷ್ಟು ಸ್ವಾರ್ಥವಿದ್ದರೆ ಅಷ್ಟು ಬೇಗನೆ ದೇವರನ್ನು ಸೇರಬಹುದು. ದೇವರ ವಿಷಯಗಳಲ್ಲಿ ನಾನು ಸ್ವಾರ್ಥಪರನೇ, ಆದ್ದರಿಂದ ಕೆಲವು ಅಸಲಾದ ರಹಸ್ಯಗಳನ್ನು ಇಲ್ಲಿಯವರೆಗು ನಿಮಗೆ ಹೇಳಲಿಲ್ಲ, ಹೇಳುವುದಿಲ್ಲ ಎಂದರೆ ಹೇಳುವುದಿಲ್ಲ. ಅದರೂ ನನ್ನ ಲೆಕ್ಕದಲ್ಲಿ ಅಲ್ಲದೆ ನಿಮ್ಮ ಲೆಕ್ಕದಲ್ಲಿ ರಹಸ್ಯಗಳಾದ ನಮ್ಮ ಕೃಷ್ಣಮಂದಿರವೊಂದರ ವಿಷಯಗಳನ್ನು ಕೆಲವನ್ನು ಮಾತ್ರವೇ ತಿಳಿಸುತ್ತೇನೆ ನೋಡಿರಿ. ಅನಂತಪುರಂ ಜಿಲ್ಲೆ, ತಾಡಿಪತ್ರಿ ಮಂಡಲದಲ್ಲಿರುವ ಚಿನ್ನ ಪೊಡಮಲ ಗ್ರಾಮದಲ್ಲಿ ಕ್ರಿಸ್ತಶಕ 2003 ನೇ ವರ್ಷದಲ್ಲಿ ಕೃಷ್ಣ ಮಂದಿರವನ್ನು ನಿರ್ಮಿಸಿದ್ದೇವೆ. ಎಂಥಹ ಚಂದಾಗಳು ವಸೂಲಿ ಮಾಡದಂತೆ ನಮ್ಮ ಸ್ವಂತ ಹಣದಿಂದ, ನಮ್ಮ ಕೈಲಾದಷ್ಟು ಅಭಿವೃದ್ಧಿ ಮಾಡಿಕೊಳ್ಳುತ್ತಾ ಬಂದಿದ್ದೇವೆ. ಮೊದಲು ಕೃಷ್ಣಪ್ರತಿಮೆ ಯನ್ನು ಪ್ರತಿಷ್ಟಿಸಿದಾಗ ನಾವು ಎಲ್ಲರಂತೆ ಮೂರು ದಿನಗಳು ಧಾನ್ಯದಲ್ಲಿ ಇಟ್ಟು, ಮೂರು ದಿನಗಳು ನೀರಿನಲ್ಲಿ ಇಟ್ಟು, ನಂತರ ಮೂರು ದಿನಗಳು ಯಜ್ಞಗಳು ಮಾಡಿ ಪ್ರತಿಷ್ಟಿಸಲಿಲ್ಲ. ಪ್ರತಿಷ್ಟಿಸಿದಾಗ ಒಂದು ವೇದಮಂತ್ರವನ್ನು ಸಹ ಓದಲಿಲ್ಲ. ಸ್ವತಃವಾಗಿ ನನ್ನ ಕೈಗಳಿಂದ ರಾತ್ರಿ ಸಮಯ ಎಲ್ಲರೂ ನಿದ್ರಿಸುತ್ತಿರುವಾಗ ಅಲ್ಲಿರುವವರಿಗೆ ಸಹ ತಿಳಿಯದಂತೆ ಪ್ರತಿಷ್ಟಿಸಿದ್ದೇವೆ. ಇದೇನಾದರೂ ಪ್ರತಿಷ್ಟೆಯಾ ಎಂದು ನೀವೆಂದು ಕೊಳ್ಳಬಹುದು. **"ದೇವರನ್ನು ಪೂಜಿಸುವುದಕ್ಕಿಂತ ದೇವರನ್ನು ಸೇವಿಸುವುದು ದೊಡ್ಡದು"** ಎನ್ನುವ ಸೂತ್ರವನ್ನು ಹೇಳುವ ನಾನು, ಆ ದಿನ ಆರ್ಭಾಟವಾಗಿ ಮಾಡುವ ಪ್ರತಿಷ್ಠಾಪನೆಗಿಂತ ಸೇವೆ ಮಾಡುವುದು ಒಳ್ಳೆಯದೆಂದು ಅಂದುಕೊಂಡಿದ್ದೇನೆ, ಹಾಗೆಯೇ ಮಾಡಿದ್ದೇನೆ. ಅದೇ ವರ್ಷ ಆ ಪ್ರಾಂತ್ಯದಲ್ಲಿ ಮಲೇರಿಯಾ ವ್ಯಾಧಿ ಶೇ.90% ರಷ್ಟು ಕಡಿಮೆಯಾ ದಂತೆ ಅಲ್ಲಿನವರೆ ಹೇಳಿದಾಗ ಕೇಳಿದ್ದೇವೆ.

ನಾವು 1980 ವರ್ಷದಲ್ಲಿ **"ಪ್ರಬೋಧಾಶ್ರಮವನ್ನು"** ಸ್ಥಾಪಿಸಿ, ಅದರ ಸಮ್ಮುಖದಲ್ಲಿ 1991 ರಲ್ಲಿ **"ಪ್ರಬೋಧ ಸೇವಾಸಮಿತಿ"** ಎನ್ನುವ ಸಂಸ್ಥೆಯನ್ನು ತಯಾರು ಮಾಡಿದ್ದೇವೆ. 2004ನೇ ವರ್ಷ **"ಇಂದೂ ಜ್ಞಾನವೇದಿಕ"** ಎನ್ನುವ ಮತ್ತೊಂದು ಸಂಸ್ಥೆಯನ್ನು ಸ್ಥಾಪಿಸುವುದು ನಡೆದಿದೆ. ಪ್ರಬೋಧಾಶ್ರಮವೊಂದರ ಸಮ್ಮುಖದಲ್ಲಿ ಪ್ರಬೋಧ ಸೇವಾಸಮಿತಿ, ಇಂದೂ ಜ್ಞಾನವೇದಿಕೆ ಎನ್ನುವ ಎರಡು ಸಂಸ್ಥೆಗಳು ಕೆಲಸ ಮಾಡುತ್ತಿವೆ. ಶ್ರೀಕೃಷ್ಣನ ಜ್ಞಾನವನ್ನು ಪ್ರಚಾರ ಮಾಡುವುದು ಮತ್ತು ನಮ್ಮಿಂದ ರಚಿಸಿದ ಗ್ರಂಥಗಳನ್ನು ಪ್ರಚುರಿಸುವುದು ಮುಂತಾದ ಜ್ಞಾನಸೇವಾ ಕಾರ್ಯಕ್ರಮಗಳನ್ನು ಎರಡು ಸಂಸ್ಥೆಗಳು ಮಾಡುತ್ತಿವೆ. ಅದ್ವೈತವನ್ನು ಪ್ರಚಾರ ಮಾಡಿದ ಆದಿ ಶಂಕಾರಾಚಾರ್ಯರಂತೆ ಮತ್ತು ವಿಶಿಷ್ಟಾದ್ವೈತವನ್ನು ಪ್ರಚಾರ ಮಾಡಿದ ರಾಮಾನುಜಾಚಾರ್ಯರಂತೆ ನಾವು ತ್ರೈತ ಸಿದ್ಧಾಂತದಿಂದ ಕೃಷ್ಣನ ಗೀತೆಯನ್ನು ಪ್ರಚಾರ ಮಾಡುತ್ತಿದ್ದೇವೆ. ಕೃಷ್ಣನ ಜ್ಞಾನವನ್ನು ಸಿದ್ಧಾಂತದಿಂದ ಶಾಸ್ತ್ರಬದ್ಧವಾಗಿ ಪ್ರಚಾರ ಮಾಡುತ್ತಿದ್ದ ನಮಗೆ, ಕೃಷ್ಣನೇ ಮೂಲದೈವ. ಆದ್ದರಿಂದ ನಾವು ಕೃಷ್ಣಮಂದಿರವನ್ನು ಸ್ಥಾಪಿಸಿದ್ದೇವೆ, ನನಗೆ ನಾನು ಹಳಬನೇ ಆದರೂ ಪ್ರಜೆಗಳಿಗೆ ಮಾತ್ರ ನಾನು ಹೊಸಬ, ನನ್ನ ಸಿದ್ಧಾಂತ ಹೊಸದು, ಆದ್ದರಿಂದ ನಾನು ತ್ರೈತ ಸಿದ್ಧಾಂತವನ್ನು ಪ್ರಚಾರ ಮಾಡುವುದರಲ್ಲಿ ಇತ್ತ ಹಿಂದೂಸಂಸ್ಥೆಗಳಿಂದ, ಅತ್ತ ಕ್ರೈಸ್ತ ಸಂಸ್ಥೆಗಳಿಂದ ಕೆಲವು ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂದಿದೆ. ಅವುಗಳನ್ನು ಲೆಕ್ಕಮಾಡದೆ ನಾವು ಸುಮಾರು 82 ಗ್ರಂಥಗಳನ್ನು ಬರೆದು, ನಮ್ಮ ಸಂಸ್ಥೆಗಳ ಮೂಲಕ ಪ್ರಚಾರ ಮಾಡಿರುವುದರಿಂದ ಪ್ರಜೆಗಳು ನಮ್ಮ ಜ್ಞಾನವೊಂದರ ಔನ್ನತ್ಯವನ್ನು ಕುರಿತು ತಿಳಿದುಕೊಂಡು ನಮ್ಮ ಗ್ರಂಥಗಳನ್ನು ಮೀರಿದ ಗ್ರಂಥಗಳು ಇಲ್ಲಿಯವರೆಗೂ ಭೂಮಿಮೇಲೆ ಇಲ್ಲವೆಂದು ಹೇಳಿಕೊಳ್ಳುವು ದರಿಂದ, ಮತ್ತು ಕಾಲಜ್ಞಾನವನ್ನು ಹೇಳಿದ ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ **"ಪ್ರಬೋಧಾಶ್ರಮ ಉನ್ನತವಾದ ಜ್ಞಾನವನ್ನು ಹೊಂದಿರುವುದು"** ಎಂದು ಹೇಳಿರುವುದರಿಂದ, ನಾವು ಉತ್ಸಾಹದಿಂದ ಜ್ಞಾನಪ್ರಚಾರ ಮಾಡುತ್ತಿದ್ದೇವೆ. ಬ್ರಹ್ಮಯ್ಯನವರ ಕಾಲಜ್ಞಾನದಲ್ಲಿ **"ಪ್ರಬೋಧಾಶ್ರಮ ದವರ ಆದಿ ಗುಣವೆಲ್ಲ ಶಯನಾಧಿಪತಿಗೆ ಇದೆ"** ಎಂದು ಬರೆದಿರುವುದರಿಂದ

ಅವುಗಳನ್ನು ನೋಡಿದ ಕೆಲವರು ನಮ್ಮನ್ನು ಗೌರವಿಸುವುದು ಮೊದಲು ಮಾಡಿದ್ದಾರೆ. ಇವೆಲ್ಲ ತಿಳಿಯದೆ ಮೊದಲು ತ್ರೈತ ಸಿದ್ಧಾಂತ ಎನ್ನುವ ಹೆಸರು ಕೇಳುತ್ತಲೇ, ನಾವು ಕ್ರೈಸ್ತರ ಬೋಧನೆಯನ್ನು ಹೇಳುವವರೆಂದು ಹಿಂದೂಗಳು, ಕ್ರೈಸ್ತವ ಮತದಲ್ಲಿನ ತ್ರಿತ್ವ ಎನ್ನುವ ಹೆಸರಿಗೆ ಹತ್ತಿರವಾಗಿ ಕಾಣಿಸುವ ತ್ರೈತ ಎನ್ನುವ ಪದವನ್ನು ನೋಡಿ, ಈ ಹೆಸರಿನಿಂದ ನಮ್ಮ ಹತ್ತಿರ ಮಾಡಿಕೊಂಡು ಕೊನೆಗೆ, ಹಿಂದೂಮತ ದೊಳಗೆ ಬದಲಾಯಿಸುವವರೆಂದು ಕ್ರೈಸ್ತರು ತಿಳಿದುಕೊಂಡಿರುವುದು ನಡೆದಿದೆ. ಮೊದಲು ಹಾಗೆ ತಿಳಿದುಕೊಂಡರೂ ಈಗ ನಮ್ಮ ಬೋಧನೆಗಳನ್ನು ಓದಿದ ನಂತರ, ಹಿಂದೂಗಳಲ್ಲಿ ದೊಡ್ಡ ಜ್ಞಾನಿಗಳಾ ದವರೂ ಸಹ ನಮ್ಮನ್ನು ಹೊಗಳಿ ನಮ್ಮ ಹತ್ತಿರಕ್ಕೆ ಬಂದಿರುವುದು, ಹಾಗಯೇ ಕ್ರೈಸ್ತರಲ್ಲಿ ಎಷ್ಟೋ ಜನ ಫಾದರ್‌ಗಳು, ಪಾಸ್ಟರ್‌ಗಳು ಬಂದು ನಮ್ಮನ್ನು ಪ್ರಶಂಸಿಸುತ್ತಿರುವುದು ನಡೆಯುತ್ತಿದೆ. ಇಸ್ಲಾಮ್ ಮತದವರಿಗೆ ನಮ್ಮ ಬೋಧನೆಗಳು ಚೆನ್ನಾಗಿ ಇಷ್ಟವಾಗಿರುವುದರಿಂದ ಮೂರು ಮತದವರಲ್ಲಿಯು ಕೆಲವರು ಜ್ಞಾನದಲ್ಲಿ ನಮ್ಮನ್ನು ಅನುಸರಿಸುವುದು ನಡೆಯುತ್ತಿದೆ.

ಬ್ರಹ್ಮಯ್ಯನವರು ಕಾಲಜ್ಞಾನದಲ್ಲಿ ಕಲಿಯುಗದಲ್ಲಿ 5000 ವರ್ಷಗಳಿಗೆ ಅಂದರೆ ಕ್ರಿಸ್ತ ಶಕ 1900ನೇ ವರ್ಷದಿಂದ ಭೂಮಿಮೇಲೆ ಅಧರ್ಮಗಳು ವೃದ್ಧಿಯಾಗಿಹೊಂದಿ ಧರ್ಮಗಳು ತಳಹತ್ತಿಹೋಗುತ್ತವೆ ಎಂದು ಬರೆದಿದ್ದಾರೆ. ನಂತರ ಕಲಿಯುಗದಲ್ಲಿ 5108 ವರ್ಷಗಳಿಗೆ (ಕ್ರಿಸ್ತಶಕ 2008ರಿಂದ) ತನ್ನ ಕಾಲಜ್ಞಾನವನ್ನು ನೆರವೇರುವುದಕ್ಕೆ ಪ್ರಾರಂಭವಾಗುತ್ತದೆಂದು ಹೇಳಿದ್ದಾನೆ. 5110 ವರ್ಷಗಳಿಗೆ (ಕ್ರಿ॥ 2010) ಆಧ್ಯಾತ್ಮಿಕ ಯೋಗ ಪುರುಷನು ಪ್ರಕಾಶವಾಗುತ್ತಾನೆ ಎಂದು ಬರೆದಿದ್ದಾರೆ. ಆತನು ಹೇಳಿದಂತೆ ನಮ್ಮ ಬೋಧನೆಗಳು ಎರಡು ವರ್ಷಗಳಿಂದ ಪ್ರಚಾರದೊಳಗೆ ಬರುವುದರಿಂದ **"ತ್ರೈತ ಸಿದ್ಧಾಂತ ಆದಿಕರ್ತ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು"** ಎಂಬ ಹೆಸರು ಚೆನ್ನಾಗಿ ಪ್ರಚಾರವಾಗಿದೆ. ಈಗ ಅಸಲು ವಿಷಯಕ್ಕೆ ಬರೋಣ. ನಾವು ಸುಮಾರು ಐದು ವರ್ಷಗಳ ಕೆಳಗೆ ಒಂದು ಬೋರ್ಡನ್ನು ಕೃಷ್ಣಮಂದಿರದಲ್ಲಿ ಇಟ್ಟಿದ್ದೇವೆ.

ಅದರಲ್ಲಿ ಇಲ್ಲಿಗೆ ಕಾಣಿಸದ ದೇವತೆಗಳು, ಮಹರ್ಷಿಗಳು, ಖಗೋಳದಲ್ಲಿನ ಅನೇಕ ಗ್ರಹಗಳ ಜೀವಿಗಳು ಬರುತ್ತಿರುತ್ತಾರೆ. ಆದ್ದರಿಂದ ಇಲ್ಲಿಗೆ ಬರುವ ಮನುಷ್ಯರು ಯಾರಾದರೂ ಕೆಟ್ಟ ಭಾವನೆಯಿಂದ, ಕೆಟ್ಟ ಉದ್ದೇಶದಿಂದ ಬಂದರೆ ಅವರಿಗೆ ಕಾಣಿಸದ ದೇವತೆಗಳಿಂದ, ಗ್ರಹಗಳಿಂದ ತೀರದ ನಷ್ಟ ಏರ್ಪಡಬಹುದು ಎಂದು ಬರೆದಿದ್ದೇವೆ. ಈ ಮಧ್ಯದಲ್ಲಿ ಆರು ತಿಂಗಳ ಕೆಳಗೆ ನಮಗೆ ದೊರೆತ ಬ್ರಹ್ಮಯ್ಯನವರ ಕಾಲಜ್ಞಾನದಲ್ಲಿ **"ಮಹಾದೇವತೆಗಳೆಲ್ಲರೂ ಆನಂದಾಶ್ರಮದ ಹತ್ತಿರವೇ ಇದ್ದಾರೆ"** ಎಂದು ಬರೆದಿಟ್ಟಿರುವುದನ್ನು ಗಮನಿಸಿದ್ದೇವೆ. ಗತದಲ್ಲಿ ನಾವು ಎಷ್ಟೋ ಸಲ ಕೃಷ್ಣಮಂದಿರದಲ್ಲಿ ಇರುವುದು **ಕೃಷ್ಣ ವಿಗ್ರಹ ಅಲ್ಲ, ಕೃಷ್ಣನ ಪ್ರತಿಮೆ ಇದೆ**. ಇಲ್ಲಿನ ಕೃಷ್ಣ ಪತ್ರಿಮ ಬಹಳಶಕ್ತಿವಂತವಾದುದು. ಆದ್ದರಿಂದ ಭೂಮಿಮೇಲೆ ಕಾಣಿಸದಂತಿರುವ ದೇವತೆಗಳು, ಮಹರ್ಷಿಗಳು, ಖಗೋಳ ದಲ್ಲಿರುವ ಗ್ರಹಗಳು ಇಲ್ಲಿಗೆ ಬಂದು ಹೋಗುತ್ತಿದ್ದಾರೆಂದು ಹೇಳಿದ್ದೇವೆ. ಕೃಷ್ಣನ ದರ್ಶನಾರ್ಥ ವೆಂಕಟೇಶ್ವರ ಸ್ವಾಮಿ ಸಹ ಬಂದು ಹೋದಂತೆ ನಮಗೆ ತಿಳಿದಿದೆ. ನಮ್ಮ ಮೇಲಿನ ದುರುದ್ದೇಶದಿಂದ ಇಲ್ಲಿಗೆ ಬಂದಿರುವ ಪ್ರಜೆಗಳು ದೇವತೆಗಳು ಬಂದಿರುವ ಸಮಯದಲ್ಲಿ ಇಲ್ಲಿಯೇ ಇದ್ದರೆ ಅವರ ದೃಷ್ಟಿಯಲ್ಲಿ ಬಿದ್ದರೆ ಕೆಟ್ಟಭಾವ ಇರುವವರು ದೇವತೆಗಳ ಕೋಪಕ್ಕೆ ಗುರಿ ಆಗುತ್ತಾರೆ. ಆದ್ದರಿಂದ ತೀರದ ನಷ್ಟ ಏರ್ಪಡುತ್ತ ದೆಂದು ವಿವರವಾಗಿ ಹೇಳಿದ್ದೇವೆ.

ನಾವು ಸ್ವತಃವಾಗಿ ಪ್ರತಿಷ್ಠಿಸಿದ ಪ್ರತಿಮೆಯಲ್ಲಿ ಭಗವತ್‌ಶಕ್ತಿ ಇರುವುದರಿಂದ, ದೇವತೆಗಳೆಲ್ಲರು ಆತನನ್ನು ದರ್ಶಿಸಿಕೊಳ್ಳುವುದಕ್ಕೆ ಬರುತ್ತಿದ್ದಾರೆ. ಅವರಿಗೆ ಭಗವಂತನ ದರ್ಶನ ಭಾಗ್ಯವನ್ನು ಕಲ್ಪಿಸಿದ ನಮ್ಮನ್ನು ಆಶೀರ್ವದಿಸಿ ಹೋಗುತ್ತಿದ್ದಾರೆ. ಇದೆಲ್ಲಾ ಕಟ್ಟುಕಥೆ ಎಂದು ಅಂದುಕೊಳ್ಳಬೇಡಿ. ನಿಮಗೆ ನಂಬದಂತಹ ವಿಷಯವಾದರೂ ನಾವು ಹೇಳುವುದು ಶೇ.ನೂರರಷ್ಟು ಸತ್ಯವೆ. ಏಕೆಂದರೆ! ಬ್ರಹ್ಮಯ್ಯನವರು ಸಹ ತನ್ನ ಕಾಲಜ್ಞಾನದಲ್ಲಿ **ಶಯನಾಧಿಪತಿಗೆ ಸರ್ವದಾ ಆನಂದ, ಬ್ರಹ್ಮಾದಿ ದೇವತೆಗಳೆಲ್ಲ ದೀವಿಸುವರು. ಜಾರು ವಾಕ್ಯಗಳು ಆಡಿದವರೆಲ್ಲ ನಾಶವಾಗಿ ಹೋಗುತ್ತಾರೆ. ಕೀಡು ಬಯಸಿದವರೆಲ್ಲಾ ಧೂಳಿಯಾಗಿ ಹೋಗುತ್ತಾರೆ."**

ಎಂದು ಬರೆದಿದ್ದಾರೆ. ಇದರಿಂದ ದೇವತೆಗಳು ಬಹಳಜನ ಇಲ್ಲಿಗೆ ಬರುತ್ತಿದ್ದಾರೆಂದು ತಿಳಿಯುತ್ತಿದೆ. ಬ್ರಹ್ಮಯ್ಯನವರ ವಾಕ್ಯಗಳು ಈಗ ಆರು ತಿಂಗಳ ಕೆಳಗೆ ನಮಗೆ ತಿಳಿದಿವೆ. ಆದರೆ ನಾವು ಐದು ವರ್ಷಗಳ ಪೂರ್ವದಲ್ಲೆ ಈ ಮಾತುಗಳನ್ನು ಹೇಳಿದ್ದೇವೆ. ಕೆಲವರು ಇಲ್ಲಿಗೆ ಬಂದು ಹೋದ ಒಂದು ವಾರದೊಳಗೆ ಆರೋಗ್ಯವೆಲ್ಲಾ ಚೆನ್ನಾಗಿದ್ದರೂ ಮರಣಿಸುವುದು ನಡೆದಿದೆ. ನಮ್ಮನ್ನು ದೂಷಿಸಿದ ಕೆಲವರು ತೀವ್ರವಾದ ಕಷ್ಟಗಳಲ್ಲಿ ಕೂರಿಕೊಂಡುಹೋಗಿ, ಕೆಲವರಿಗೆ ಭಯಂಕರವಾದ ರೋಗಗಳು ಬಂದು ಎಷ್ಟೋಕಾಲ ಅನುಭವಿಸುವುದು ನಡೆದಿದೆ. ಇವುಗಳೆಲ್ಲವನ್ನು ಗಮನಿಸಿದ ನಾವು ಅದಕ್ಕೆ ಕಾರಣವನ್ನು ತಿಳಿದುಕೊಂಡು ಐದು ವರ್ಷಗಳ ಕೆಳಗೆ ಬೋರ್ಡಿನ ಮೇಲೆ ದೇವತೆಗಳು ಬರುವ ವಿಷಯವನ್ನು ಬರೆದಿಟ್ಟಿದ್ದೇವೆ. ಕೆಲವರು ಇಲ್ಲಿಗೆ ಬರುವಮುನ್ನವೆ ಕೆಲವು ಗುಣವಾಗದ ರೋಗಗಳಿಂದ ಬಾಧೆಪಡುವವರು ನನ್ನ ಹತ್ತಿರಕ್ಕೆ ಬಂದು ತಮ್ಮ ಬಾಧೆಯನ್ನು ಹೇಳಿಕೊಂಡಾಗ, ನಾನು ಯಾರಿಗೂ ಗುಣಪಡಿಸಲಾರೆನು, ನನ್ನಿಂದ ಯಾರಿಗೂ ಸ್ವಸ್ಥತೆ ಆಗುವುದಿಲ್ಲ. ಆದರೆ ನಿನಗೆ ಕೃಷ್ಣನ ಮೇಲೆ ಭಗವಂತನೆಂಬ ಭಕ್ತಿಹೊಂದಿ, ಕರ್ಮಗಳನ್ನು ತೆಗೆಯುವ ಯೋಗ್ಯತೆ ಆತನಿಗಿದೆಯೆನ್ನುವ ಭಾವನೆಯಿಂದ, ಕೃಷ್ಣಮಂದಿರದ ಹತ್ತಿರಕ್ಕೆ ಬಂದು ಮೂರು ಅಥವಾ ಐದು ದಿನಗಳು ಮಂದಿರದ ಮುಂದೆ ನಿದ್ರೆಮಾಡಿದರೆ ರಾತ್ರಿಸಮಯದಲ್ಲಿ ಬರುವ ದೇವತೆಗಳು ಅವರನ್ನು ನೋಡಿ, ಅವರು ಇವರ ರೋಗಗಳನ್ನು ಇಲ್ಲದಂತೆ ಮಾಡಬಹುದು ಎಂದು ಹೇಳಿದ್ದೇನೆ. ಮಂದಿರದ ಮುಂದೆ ನಿದ್ರಿಸುವವರನ್ನು ನೋಡಿ ಇವರು ಕೃಷ್ಣನ ಭಕ್ತರೆಂದು ಪ್ರೇಮದಿಂದ ಅಥವಾ ದಯೆಯಿಂದ ಬಂದಿರುವ ದೇವತೆಗಳು ಅವರ ರೋಗಗಳನ್ನು ಎಷ್ಟೋ ಜನರಿಗೆ ಇಲ್ಲದಂತೆ ಮಾಡುವುದು ನಡೆದಿದೆ. ಕೆಲವರು ಗುಣವಾದ ನಂತರ ಕೃಷ್ಣನನ್ನು, ನಮ್ಮನ್ನು ಮರೆತುಹೋದವರು ಸಹ ಇದ್ದಾರೆ. ಅಂತವರಿಗೆ ಪುನಃ ಏನಾದರೂ ರೋಗ ಬಂದು ಅಲ್ಲಿಗೆ ಹೋದರೆ ಗುಣವಾಗುತ್ತದೆಂದು ಬಂದರೂ, ಅವರು ಎಷ್ಟು ದಿನಗಳು ಇದ್ದರೂ ಅವರಿಗೆ ಸ್ವಲ್ಪವೂ ಗುಣವಾಗುವುದಿಲ್ಲ. ಇದರಿಂದ ಕೃಷ್ಣಮಂದಿರ ಅಕ್ಕರೆ ತೀರಿಸುವ ಆಸ್ಪತ್ರೆಯಂತಹದಲ್ಲವೆಂದು ತಿಳಿಯುತ್ತಿದೆ.

ಮಂದಿರದಲ್ಲಿರುವ ನಾನಾಗಲಿ, ಗರ್ಭಗುಡಿಯಲ್ಲಿರುವ ಕೃಷ್ಣನಾಗಲಿ ತಟಸ್ಥವಾಗಿರುತ್ತಾರೆ. ಯಾರಿಗೂ ರೋಗಗಳು ಹೋಗಬೇಕೆಂದು ಅಂದು ಕೊಳ್ಳುವುದಿಲ್ಲ. ಕೃಷ್ಣನು ಯಾರ ಗೋಳು ಕೇಳುವುದಿಲ್ಲ, ಕೇಳಿದರೂ ಹಿಡಿಸಿಕೊಳ್ಳುವುದಿಲ್ಲ. ಅದರಿಂದ ಅಲ್ಲಿಗೆ ಹೋಗಿ ಆತನಿಗೇಕೆ ಮುಗಿಯಬೇಕು ಎಂದು ಅಂದುಕೊಳ್ಳಬೇಡಿ. ಕೃಷ್ಣನು ಹಿಡಿಸಿಕೊಳ್ಳದಿದ್ದರೂ ಅಲ್ಲಿಗೆ ಬರುವ ಆತನ ಸೇವಕರಾದ ದೇವತೆಗಳು ಪ್ರಜೆಗಳನ್ನು ಹಿಡಿಸಿಕೊಂಡು ಅವರ ಸಮಸ್ಯೆಗಳನ್ನು ತೀರಿಸುತ್ತಾರೆ. ಒಂದು ಸಮಸ್ಯೆಯನ್ನು ಪರಿಷ್ಕರಿಸುವುದಕ್ಕೆ ತಮ್ಮ ಕೈಲಾಗದಿದ್ದರೆ ತಮಗಿಂತ ದೊಡ್ಡ ದೇವತೆಗಳಿಗೆ ಹೇಳಿ ಅವರಿಂದ ಪರಿಷ್ಕರಿಸುತ್ತಾರೆ. ಅದು ಅಲ್ಲಿಗೆ ಬಂದಿರುವ ಪ್ರಜೆಗಳ ಮನೋಭಾವಗಳನ್ನು ಅನುಸರಿಸಿ ಇರುತ್ತದೆ. ಕೆಟ್ಟ ಭಾವನೆ ಇದ್ದರೆ ಕೆಟ್ಟದು, ಒಳ್ಳೆಯ ಭಾವವಿದ್ದರೆ ಒಳ್ಳೆಯದು ನಮ್ಮ ಕೃಷ್ಣನ ಹತ್ತಿರ ನಡೆದು ತೀರುತ್ತದೆ.

ಇದೆಲ್ಲ ಹೇಳಿದರೂ ಇದೆಲ್ಲಾ ತಮ್ಮ ಹಿರಿಮೆಯನ್ನು ಹೇಳಿಕೊಳ್ಳುವುದಕ್ಕೆಂದು ತಿಳಿದುಕೊಳ್ಳುವವರು ಸಹ ಇದ್ದಾರೆ. ಅಂಥವರಿಗೆ ಕೃಷ್ಣಮಂದಿರ ಎಷ್ಟು ಶಕ್ತಿವಂತವಾದುದೊ ಹೇಳುವುದಕ್ಕೆ, ಒಂದು ನಡೆದ ಸಂಘಟನೆಯನ್ನು ವಿವರಿಸುತ್ತೇನೆ ನೋಡಿರಿ. ಕೃಷ್ಣ ಮಂದಿರಕ್ಕೆ ಮುಂದಿನ ಭಾಗದಲ್ಲಿ ಒಂದು ಚಿಕ್ಕ ಕೊಟಡಿಯನ್ನು ಕಟ್ಟಿಸಿ ಅದರಲ್ಲಿ ಕ್ಷೌರಿಕ ಅಂಗಡಿಗೆ ಬೇಕಾದ ಸಾಮಗ್ರಿಯನ್ನು ಸಮಕೂಡಿಸಿ, ನಮ್ಮ ಭಕ್ತನಾದ ಮಂಗಳ ವೆಂಕಟೇಷ್ ಎನ್ನುವ ವ್ಯಕ್ತಿಯನ್ನು ಅದರಲ್ಲಿ ಇಟ್ಟಿರುವುದು ನಡೆದಿದೆ. ಕೃಷ್ಣಮಂದಿರದಲ್ಲಿ ಕೃಷ್ಣನ ಹತ್ತಿರ ತಲೆ ಕೂದಲು ಕೊಡುವವರಿಗೆ ಹತ್ತಿರದಲ್ಲಿರುತ್ತಾನೆನ್ನುವ ಉದ್ದೇಶದಿಂದ ಆತನನ್ನು ಇಟ್ಟಿರುವುದು ನಡೆದಿದೆ. ಸುಮಾರು ಆರು ವರ್ಷಗಳ ಕೆಳಗೆ ಸಾಯಂಕಾಲ ಆರುಗಂಟೆಗಳ ಸಮಯದಲ್ಲಿ ಕತ್ತಲಾಗುವ ಸಮಯದಲ್ಲಿ, ಮಂದಿರದ ಮುಂದೆ ವೆಂಕಟೇಷ್ ಷಾಪ್ ಪಕ್ಕದಲ್ಲಿ ರಸ್ತೆಯಲ್ಲಿ ಮೂವರು ಹೆಂಗಸರು ಹೊಲದ ಕೆಲಸಗಳಿಂದ ಮನೆಗೆ ಹೋಗುತ್ತಾ, ಸರಿಯಾಗಿ ಮಂದಿರದ ಮುಂದೆ ಕ್ಷೌರಿಕ ಅಂಗಡಿ ಹತ್ತಿರಕ್ಕೆ ಬಂದಾಗ ಷಾಪ್‌ನ್ನು ಮುಚ್ಚಿರುವುದು ನೋಡಿ, ಸುಮ್ಮನೆ ಹೋಗದಂತೆ ಅವರಲ್ಲಿ ಒಬ್ಬಾಕೆ ಚಿಕ್ಕ ಮಂಗಳಿಗ (ಕ್ಷೌರಿಕ) ನು ಇಲ್ಲಿರುತ್ತಾನೆ,

ದೊಡ್ಡ ಮಂಗಳಿಗ (ಕ್ಷೌರಿಕ) ನು ಮೇಲಿನ ಮಹಡಿಯಲ್ಲಿ ಇರುತ್ತಾನೆಂದು ನನ್ನನ್ನು, ವೆಂಕಟೇಷ್‌ನನ್ನು ಹೇಳನವಾಗಿ ಮಾತನಾಡಿರುವುದು ನಡೆದಿದೆ. ಆ ಮಾತನ್ನು ಅಲ್ಲಿಯೇ ಮರೆಯಲ್ಲಿದ್ದ ವೆಂಕಟೇಷ್ ಕೇಳಿದ್ದಾನೆ. ಮಾತನಾಡಿದವರು ವೆಂಕಟೇಷ್‌ನನ್ನು ಗಮನಿಸಲಿಲ್ಲ. ವೆಂಕಟೇಷ್ ಸಹ ವಿಷಯ ಕೇಳಿಸಿದರು ಹಿಡಿಸಿಕೊಳ್ಳಲಿಲ್ಲ. ನಂತರ ಏಳು ದಿನಗಳಿಗೆ ನಮ್ಮನ್ನು ಹೇಳನವಾಗಿ ಮಾತನಾಡಿದ ಹೆಂಗಸಿಗೆ ಹಾವು ಕಚ್ಚುವುದು ನಡೆದಿದೆ. ಆ ಪ್ರಾಂತ್ಯದಲ್ಲಿ ಯಾರಿಗೆ ಹಾವು ಕಚ್ಚಿದರು ಪಕ್ಕದಲ್ಲಿ ಹತ್ತು ಕಿಲೋಮಿಟರ್ ದೂರದಲ್ಲಿರುವ ಕಾವೇಟಿ ಸಮುದ್ರ ಎನ್ನುವ ಊರಿನಲ್ಲಿ ಔಷಧ ಕೊಡುತ್ತಾರೆ. ಹಾವು ಕಚ್ಚಿದ ಆಕೆಯನ್ನು ಅವರ ಸಂಬಂಧಿಕರು ಕಾವೇಟಿ ಸಮುದ್ರಕ್ಕೆ ತೆಗೆದುಕೊಂಡು ಹೋಗಿ ಔಷಧವನ್ನು ತಿಂದು ಚೆನ್ನಾಗಾಗಿದೆ ಎನ್ನುವ ನಂಬಿಕೆಬಂದ ನಂತರ ಮನೆಗೆ ಬರಬೇಕೆಂದು ಬಂದಿದ್ದಾರೆ. ಊರಿನಲ್ಲಿರುವವರು ಮಂದಿರದ ಮುಂದೆ ರಸ್ತೆಯ ಮೂಲಕವೇ ಹೋಗಬೇಕು. ಬರಬೇಕು. ಸರಿಯಾಗಿ ವೆಂಕಟೇಷ್ ಷಾಪ್ ಮುಂದೆ ವಾರದ ಕೆಳಗೆ ಹೇಳನವಾಗಿ ಮಾತನಾಡಿದ ಸ್ಥಳದೊಳಗೆ ಹೆಜ್ಜೆ ಇಡುತ್ತಲೇ ಮಾತನಾಡಿದ ಆಕೆಗೆ ಪ್ರಾಣ ಹೋಗುವುದು ನಡೆದಿದೆ. ಅಲ್ಲಿಗೆ ಬರುತ್ತಲೇ ಆಕೆಗೆ ಪ್ರಾಣ ಹೋಗುವುದು ವೆಂಕಟೇಷ್ ಪ್ರತ್ಯಕ್ಷವಾಗಿ ನೋಡಿದ್ದಾನೆ. ನಂತರ ಆ ವಿಷಯವನ್ನು ನಮಗೆ ತಿಳಿಸಿದ್ದಾನೆ. ಯಾವ ಸ್ಥಳದಲ್ಲಿ ಮಾತನಾಡಿದ್ದಾಳೋ ಅದೇ ಸ್ಥಳದೊಳಗೆ ಬರುತ್ತಲೇ ಪ್ರಾಣ ಹೋಗಿದೆಯೆಂದು,ಅದಕ್ಕೂ ಮೊದಲು ವಾರದ ಕೆಳಗೆ ಮಾತನಾಡಿದಾಗ ನೋಡಿದ್ದೇನೆಂದು, ನಂತರ ಈಗ ಮರಣಿಸಿದ್ದು ಸಹ ನೋಡಿದ್ದೇನೆಂದು ಹೇಳಿದ್ದಾನೆ. ಅಂದಿನ ಆ ವಿಷಯ ತಿಳಿಯದ ನಾವು ಯೋಚಿಸಿದಾಗ ಆಕೆ ನಮ್ಮನ್ನು ದೂಷಿಸಿದಾಗ ಯಾರಾದರೂ ದೇವತೆಗಳು ಆ ಸಮಯಕ್ಕೆ ಅಲ್ಲಿದ್ದು, ಆಕೆ ಮಾತನಾಡುವುದನ್ನು ನೋಡಿರುತ್ತಾರೆಂದು ಅವರಿಗೆ ಕೋಪಬಂದಿರುತ್ತದೆಂದು, ಅವರೇ ಆ ವಿಧವಾಗಿ ಸಾಯಿಸಿರುತ್ತಾರೆಂದು ನಮಗೆ ಅರ್ಥವಾಗಿದೆ. ನಾವು ಸಾಯಿಸಿದ್ದೇವೆ ಎಂದು ಹೊರಗೆ ತಿಳಿಯುವುದಕ್ಕೆ ಯಾವ ಸ್ಥಳದಲ್ಲಿ ದೂಷಿಸಿದ್ದಾಳೋ ಅದೇ ಸ್ಥಳದಲ್ಲಿ ಆ ದೇವತೆಗಳು ಪ್ರಾಣ ಹೋಗುವಂತೆ ಮಾಡಿದ್ದಾರೆಂದು ತಿಳಿದುಕೊಂಡಿದ್ದೇವೆ.

ಅನವಶ್ಯಕವಾಗಿ ನಮ್ಮನ್ನು ದೂಷಿಸುವುದರಿಂದ ಎಂತಹ ಅನರ್ಥ ನಡೆದಿದೆಯೊ ಅರ್ಥವಾಗಿದೆ. ಇದರಿಂದ ಭೂಮಿಮೇಲೆ ಎಲ್ಲಿಯೂ ಇಲ್ಲದ ಭಗವತ್ ಶಕ್ತಿ ಕೃಷ್ಣಪ್ರತಿಮೆಯಲ್ಲಿ ಇದೆಯೆಂದು, ಆ ಶಕ್ತಿಯನ್ನು ದರ್ಶಿಸಿಕೊಳ್ಳಲು ಸಕಲ ದೇವತೆಗಳು ಬರುತ್ತಿದ್ದಾರೆಂದು ತಿಳಿಯುತ್ತಿದೆ.ಇಲ್ಲಿಗೆ ಬರುವ ದೇವತೆಗಳಿಗೆ ಕೋಪ ಬಂದರೆ ಕೆಟ್ಟದನ್ನು, ದಯೆಬಂದರೆ ಒಳ್ಳೆಯದನ್ನು ಕೂಡ ಉಂಟು ಮಾಡುತ್ತಾರೆಂಬುವುದಕ್ಕೆ ಮತ್ತೊಂದು ನಿದರ್ಶನವನ್ನು ನೋಡೋಣ. ಹೈದರಾಬಾದ್‌ನಲ್ಲಿ ನನಗೆ ಪರಿಚಯವಿರುವ ವ್ಯಕ್ತಿ ಅಣ್ಣನಿಗೆ ಆರೋಗ್ಯ ಚೆನ್ನಾಗಿಲ್ಲವೆಂದು ಆಸ್ಪತ್ರೆಯಲ್ಲಿ ಒಂದು ಎರಡು ದಿನಗಳಿಗಿಂತ ಹೆಚ್ಚಾಗಿ ಬದುಕುವುದಿಲ್ಲವೆಂದು ಹೇಳಿದ್ದಾರೆ. ಅಂತಹ ಸಮಯದಲ್ಲಿ ನನ್ನ ಹತ್ತಿರಕ್ಕೆ ಬಂದು ಅವರ ಪರಿಸ್ಥಿತಿಯನ್ನು ಹೇಳಿಕೊಂಡು ಬಾಧೆಪಟ್ಟಿದ್ದಾರೆ. ಅದಕ್ಕೆ "ನಾನು ಏನು ಮಾಡಲಾರೆನು, ನಿಮಗೆ ಕೃಷ್ಣನ ಮೇಲೆ ವಿಶ್ವಾಸವಿದ್ದರೆ ಕೃಷ್ಣಮಂದಿರದ ಹತ್ತಿರಕ್ಕೆ ಹೋಗಿ ಭಕ್ತಿಯಿಂದ ಇರಿ" ಎಂದು ಹೇಳಿದ್ದೇವೆ. ಅವರು ತಕ್ಷಣ ಕೃಷ್ಣಮಂದಿರದ ಹತ್ತಿರಕ್ಕೆ ಬಂದು ಇರುವುದಾಗಿದೆ. 15 ದಿನಗಳಲ್ಲಿ ಆತನು ಪೂರ್ತಿ ಆರೋಗ್ಯವನ್ನು ಹೊಂದಿದ್ದಾನೆ. ರೋಗ ಗುಣವಾದ ನಂತರ ಆತನು ಪುನಃ ದೇವರೆನ್ನುವ ಭಾವನೆಯಿಂದ ಮಂದಿರಕ್ಕೆ ಬರಲಿಲ್ಲ, ಕೃಷ್ಣನ ಜ್ಞಾನವನ್ನು ಕುರಿತು ಸ್ವಲ್ಪವೂ ತಿಳಿದುಕೊಳ್ಳಲಿಲ್ಲ. ನಂತರ ಎರಡು ವರ್ಷಗಳಿಗೆ ಆತನಿಗೆ ಅನಾರೋಗ್ಯವಾಗಿದೆ. ಆಗ ಅವರು ನನ್ನನ್ನು ಕೇಳಿದರೆ "ಭಕ್ತಿ ಮತ್ತು ಜ್ಞಾನ ಇರುವಾಗಲೇ ಇಲ್ಲಿಗೆ ಬರಬೇಕು. ಹಾಗಲ್ಲದೆ ಇದೇನೊ ರೋಗಗಳನ್ನು ಗುಣಪಡಿಸುವುದಕ್ಕಿರುವ ಆಸ್ಪತ್ರೆಯಂತೆ ಯಾವಾಗ ಅವಶ್ಯಕತೆಯಾದರೆ ಆಗ ಬಂದರೆ ರೋಗಗಳು ಹೋಗುವುದಿಲ್ಲ" ಎಂದು ಹೇಳಿ ಬರಬೇಡವೆಂದು ಹೇಳಿದ್ದೇವೆ. ನಾವು ಆ ಮಾತು ಹೇಳಿದ ನಂತರ ವಾರದ ದಿನಗಳಿಗೆ ಆತನು ಮರಣಿಸುವುದು ನಡೆದಿದೆ. ಮೊದಲು ರೋಗಬಂದಾಗ ಒಂದು ಹನಿ ನೀರಾಗಲಿ, ಒಂದು ಅಗಳು ಅನ್ನವಾಗಲಿ ಗಂಟಲಲ್ಲಿ ಹೋಗುತ್ತಿರಲಿಲ್ಲ. ಶ್ವಾಸ ಆಡುವುದಕ್ಕೆ ಗಂಟಲಲ್ಲಿ ಜಿಗಟು (ಮ್ಯೂಕಸ್) ನಂತಹದು ಅಡ್ಡಬಿಳುತ್ತಿತ್ತು. ಅಂತಹ ಪ್ರಮಾದ ಸ್ಥಿತಿಯಲ್ಲಿರುವ ವ್ಯಕ್ತಿ ಬದುಕಿ ಹೊರಬಿದ್ದಿರುವುದು ಇಲ್ಲಿಗೆ ಬಂದಿರುವ ದೇವತೆಗಳ

ಕೆಲಸವೇ ಎಂದು ಅರ್ಥವಾಗುತ್ತಿದೆ. ಮಂದಿರದಲ್ಲಿನ ಕೃಷ್ಣನಿಗೆ ಎಂತಹ ಶ್ರಮವಿಲ್ಲದೆ ಇಲ್ಲಿಗೆ ಬಂದಿರುವ ದೇವತೆಗಳೆ ಭಕ್ತರ ಸಮಸ್ಯೆಗಳನ್ನು ಸಹ ತೀರಿಸುತ್ತಾರೆ.

ಇಲ್ಲಿನ ಕೃಷ್ಣಮಂದಿರ ಖರೀದಾದ ಆಲಯವಾಗಿ ಕಾಣಿಸುವುದಿಲ್ಲ. ಸ್ಥೂಲವಾಗಿ ಕಾಣಿಸುವುದಕ್ಕೆ ಚಿಕ್ಕದೇ ಆದರೂ, ಸೂಕ್ಷ್ಮವಾಗಿರುವ ಕೃಷ್ಣ ಭಗವಾನನು ದೇವತೆಗಳೆಲ್ಲರಿಗಿಂತ ದೊಡ್ಡವನು. ಭೂಮಿಮೇಲೆ ಪ್ರಜೆಗಳು ಮುಗಿಯುತ್ತಿರುವ ದೊಡ್ಡ ದೇವತೆಗಳು ಸಹ ಆಗಾಗ ಬಂದು ಹೋಗುವುದು ನಡೆಯುತ್ತಿದೆ. ನಮಗೆ ತಿಳಿದ ನಂತರ, ನಾವು ದೇವತೆಗಳು ಇಲ್ಲಿಗೆ ಬರುತ್ತಿದ್ದಾರೆಂದು ಒಂದು ಬೋರ್ಡಿನ ಮೇಲೆ ಬರೆದಿರುವುದು ನಡೆದಿದೆ. ದೇವತೆಗಳು ಬಂದು ಹೋಗುತ್ತಿದ್ದಾರೆನ್ನುವುದಕ್ಕೆ ಎಷ್ಟೋ ಆಧಾರಗಳು ಇದ್ದನಂತರವೇ ನಾವು ಹೊರಗೆ ತಿಳಿಸಿದ್ದೇವೆ. ನಿತ್ಯ ರಾತ್ರಿ ಸಮಯ 1 ರಿಂದ 3 ಗಂಟೆಗಳವರೆಗು ಕನಿಷ್ಟ ಹತ್ತುಜನರು ಚಿಕ್ಕ ದೊಡ್ಡ ದೇವತೆಗಳು ಬಂದು ಹೋಗುತ್ತಿರುವುದು ನಡೆಯುತ್ತಿದೆ. ಇಷ್ಟು ಪ್ರಭಾವಿತವಾದ ಕೃಷ್ಣಮಂದಿರ ಇಲ್ಲಿದೆಯೆಂದು ಈ ಊರಿನ ಪ್ರಜೆಗಳಿಗಾಗಲಿ, ಪಕ್ಕದಲ್ಲಿಯೇ ಇರುವ ತಾಡಿಪತ್ರಿ ಪ್ರಜೆಗಳಿಗಾಗಲಿ ತಿಳಿದಿಲ್ಲ. ಈ ಮಂದಿರದ ಹಿರಿಮೆಯನ್ನು ತಿಳಿದ ಕೆಲವರು ದೂರಪ್ರಾಂತ್ಯವಾದ ವಿಜಯನಗರ, ವಿಶಾಖಪಟ್ಟಣದಿಂದ ಸಹ ಬಂದು ರಾತ್ರಿ ಸಮಯ ನಿದ್ರೆಮಾಡಿ ಹೋಗುತ್ತಿದ್ದಾರೆ. ಆ ವಿಧವಾಗಿ ಭಕ್ತಿಯಿಂದ ಬಂದು ಸೇವೆ ಮಾಡಿಕೊಂಡವರಿಗೆ ಭಯಂಕರ ರೋಗಗಳು ಸಹ ಹೋದ ಸಂಘಟನೆಗಳು ಎಷ್ಟೋ ಇವೆ. ನಾವು ಇನ್ನು ಹೆಚ್ಚಾಗಿ ಬರೆಯಬೇಕೆಂದುಕೊಳ್ಳಲಿಲ್ಲ. ಕೊನೆಯದಾಗಿ ಹೇಳುವುದೇನೆಂದರೆ! ಕೃಷ್ಣನು ಭಗವಂತನಾಗಿ ಬಂದಿರುವ ದೈವಶಕ್ತಿ. ಆದುದರಿಂದ ಭಗವಂತನು ದೇವತೆಗಳೆಲ್ಲರಿಗೂ ಪೂಜ್ಯನೇ. ದೇಶದಲ್ಲಿ ಎಷ್ಟೋ ಕೃಷ್ಣ ದೇವಾಲಯಗಳಿದ್ದರೂ ಅಲ್ಲಿ ಎಲ್ಲಿ ಇಲ್ಲದಂತೆ ಇಲ್ಲಿನ ಕೃಷ್ಣಮಂದಿರದಲ್ಲಿಯೇ ಆ ಶಕ್ತಿ ಬಂದು ಸೇರಿರುವುದು ಆಶ್ಚರ್ಯವೇ ಆದರೂ ಇದು ವಾಸ್ತವ. **ಕೃಷ್ಣನು ಹೇಳಿದ ಜ್ಞಾನ ಎಲ್ಲಿರುತ್ತದೋ ಆತನು ಅಲ್ಲಿಯೇ ಇರುತ್ತಾನೆ** ಎನ್ನುವ

ಮಾತಿನ ಪ್ರಕಾರ ಆತನು ಹೇಳಿದ ಜ್ಞಾನ ನೂರಕ್ಕೆ ನೂರರಷ್ಟು ಇಲ್ಲಿಯೇ ಇದೆ. ಆದ್ದರಿಂದ ಕೃಷ್ಣನು ಇಲ್ಲಿಯೇ ಇದ್ದಾನೆ. ಕೃಷ್ಣನನ್ನು ಎಲ್ಲಾ ದೇವಾಲಯಗಳಲ್ಲಿ ಪೂಜಿಸಿದಂತೆ ಕೂಡ ನಾವು ಪೂಜಿಸುವುದಿಲ್ಲ. ನಮ್ಮ ಗುಡಿಯಲ್ಲಿ ಪ್ರಸ್ತುತಕ್ಕೆ ಪೂಜಾರಿಯೇ ಇಲ್ಲ. **ಕೃಷ್ಣನನ್ನು ಪೂಜಿಸುವುದಕ್ಕಿಂತ ಆತನಿಗೆ ಸೇವೆ ಮಾಡುವುದು ಮುಖ್ಯವಾದ ಕೆಲಸ** ಎಂದು ನಾವು ಹೇಳಿದಂತೆ ಇಲ್ಲಿ ಸಾಧಾರಣ ಪೂಜೆ ಹೊರತು ಪ್ರತ್ಯೇಕ ಪೂಜೆಗಳಿರುವುದಿಲ್ಲ. ಆತನ ಸೇವೆಗಿಂತ ಮೀರಿದ ಆರಾಧನೆ ಇಲ್ಲ. ಆದ್ದರಿಂದ ಈ ಗ್ರಂಥ ಓದಿದವರು ಕೂಡ ಬಂದು ಕೃಷ್ಣನನ್ನು ದರ್ಶಿಸಿಕೊಂಡು ಆತನ ಜ್ಞಾನವನ್ನು ತಿಳಿದುಕೊಂಡು ಸೇವೆ ಮಾಡಿರೆಂದು ತಿಳಿಸುತ್ತಾ ಇಲ್ಲಿಗೆ ಮುಗಿಸುತ್ತಿದ್ದೇವೆ.

# ಕೊನೆಯ ಮಾತು-ಈಗಿನ ಸಮಾಜ

ಸಮಾಜ ಎಂದರೆ ಸಮಾನವಾಗಿ ಹುಟ್ಟಿದೆಯೆಂದು ಅರ್ಥ. ನಮಗೆ ಎರಡು ಸಮಾಜಗಳು ಇವೆ. ಒಂದು ಒಳಗಿನ ಸಮಾಜ, ಎರಡು ಹೊರಗಿನ ಸಮಾಜ. ಹೊರಗಿನ ಸಮಾಜವನ್ನು ಕುರಿತು ಎಲ್ಲರಿಗೂ ತಿಳಿದಿದೆ. ಆದರೆ ಒಳಗಿನ ಸಮಾಜವನ್ನು ಕುರಿತು ಯಾರಿಗೂ ತಿಳಿದಿಲ್ಲವೆಂದೇ ಹೇಳಬಹುದು. ಸಮಾಜ ಎಂದರೆ ಏನು? ನಮಗೆ ತಿಳಿಯದಂತೆ ನಿನಗೆ ತಿಳಿದ ಸಮಾಜವೇನು? ಎಂದು ಕೆಲವರು ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ನನ್ನ ಸಮಾಧಾನ ಏನೆಂದರೆ! ಸಮಾಜ ಎನ್ನುವ ಶಬ್ದದಲ್ಲಿ ಎರಡು ಪದಗಳು ಒಳಗೊಂಡಿವೆ. ಒಂದು ಸಮ, ಎರಡು ಜಮ. "ಸಮ" ಎಂದರೆ ನಿನಗೆ ಏನಾದರೆ ಇದೆಯೋ ಎಲ್ಲರಿಗೂ ಅದೇ ಇದೆ, ಅಥವಾ ಎಲ್ಲರಿಗೂ ಏನಾದರೆ ಇದೆಯೊ ನಿನಗೂ ಅದೇ ಇದೆಯೆಂದು ಅರ್ಥ. ಇದನ್ನನುಸರಿಸಿ ಸಮಾನವಾಗಿ ಹುಟ್ಟಿರುವುದು ಸಮಾಜವೆಂದು ತಿಳಿಯುತ್ತಿದೆ. ಇಲ್ಲಿ ಎಲ್ಲರಿಗೂ ಯಾವುದು ಸಮಾನವಾಗಿ ಇದೆಯೆಂದು ಪ್ರಶ್ನೆ ಬಂದರೆ "ಜಮ" ಅಥವಾ "ಜಮ್" ಎಂದು ಇದೆ. ಜಮ್ ಎಂದರೆ ಹುಟ್ಟುವುದೆಂದು ಅಥವಾ ಜನ್ಮಿಸುವುದೆಂದು ಅರ್ಥ. ಒಂದೇ

ವಿಧವಾಗಿ ಹೊರಗಿನ ಪ್ರಪಂಚದಲ್ಲಿನ ಮನುಷ್ಯರೆಲ್ಲರೂ ಜನ್ಮಿಸುತ್ತಿದ್ದಾರೆ. ಆದ್ದರಿಂದ ಮನುಷ್ಯರೆಲ್ಲರನ್ನು ಸಮಾಜ ಎನ್ನುತ್ತಿದ್ದೇವೆ. ಇನ್ನೂ ಒಳಗಿನ ಸಮಾಜ ಎಂದರೆ ಶರೀರದೊಳಗೆ ಜೀವಿಯೊಂದಿಗೆ ಸಮಾನವಾಗಿ ಹುಟ್ಟುತ್ತಿರುವ ಹದಿನಾಲ್ಕು (14) ಚೈತನ್ಯ ಭಾಗಸ್ಥರನ್ನು ಮತ್ತು ಜೀವಿಯೊಂದಿಗೆ ಸಹ ಸೇರಿಸಿ ಒಳಗಿನ ಸಮಾಜ ಎನ್ನುತ್ತೇವೆ. ಹೊರಗಿನ ಸಮಾಜದಲ್ಲಿ ಎಷ್ಟು ಜನರಾದರೂ ಇರಬಹುದು. ಆದರೆ ಒಳಗಿನ ಸಮಾಜದಲ್ಲಿ ಒಟ್ಟಾರೆ ಹದಿನೈದುಜನ ಮಾತ್ರ ಇದ್ದಾರೆಂದು ತಿಳಿಯುತ್ತಿದೆ. ಹೊರಗಿನ ಸಮಾಜ ಕಾಣಿಸುತ್ತಿದೆ ಆದ್ದರಿಂದ ಅದನ್ನು ಕಾಣಿಸುವ ಸ್ಥೂಲಸಮಾಜ ಎನ್ನುತ್ತೇವೆ. ಒಳಗಿನ ಸಮಾಜದೊಳಗೆ ಹದಿನೈದು ಜನರಿಗೆ ಹೆಸರುಗಳು ಇದ್ದರೂ, ಹದಿನೈದು ಜನ ಒಬ್ಬೊಬ್ಬರು ಒಂದೊಂದು ಪ್ರತ್ಯೇಕವಾದ ಕೆಲಸವನ್ನು ಮಾಡುತ್ತಿದ್ದರೂ, ಅವರು ಮಾತ್ರ ಯಾರಿಗೂ ಕಾಣಿಸುವುದಿಲ್ಲ. ಆದ್ದರಿಂದ ಒಳಗಿನ ಸಮಾಜವನ್ನು ಕಾಣಿಸದ ಸಮಾಜ ಎನ್ನುತ್ತೇವೆ.

ಕಾಣಿಸುವ ಸಮಾಜವನ್ನು ಕುರಿತು ಎಲ್ಲರಿಗೂ ತಿಳಿದಿದೆ, ಕಾಣಿಸದ ಸಮಾಜವನ್ನು ಕುರಿತು ಯಾರಿಗೂ ತಿಳಿದಿಲ್ಲ. ಕಾಣಿಸದ ಸಮಾಜದಲ್ಲಿರುವವರಿಗೆ ಹೆಸರುಗಳಿದ್ದರೂ ಮತ್ತು ಕೆಲಸಗಳಿದ್ದರೂ ಅವರು ಕಾಣಿಸದಿರುವುದರಿಂದ ಅವರ ಬಗ್ಗೆ ಯಾರಿಗೂ ತಿಳಿದಿಲ್ಲ. ಹೆಸರುಗಳು, ಕಾರ್ಯಗಳು ಎಲ್ಲಾ ತಿಳಿದರೂ ಕೇವಲ ಕಾಣಿಸದಿರುವುದರಿಂದ, ಒಳಗಿನ ಸಮಾಜವನ್ನು ಮಾತ್ರ ಯಾರು ಗ್ರಹಿಸುತ್ತಿಲ್ಲ. ಹೊರಗಿನ ಸಮಾಜದಲ್ಲಿರುವ ಎಲ್ಲರ ಹೆಸರುಗಳು ತಿಳಿಯದಿದ್ದರೂ, ಎಲ್ಲರ ಕೆಲಸಗಳು ತಿಳಿಯದಿದ್ದರೂ, ಕೇವಲ ಕಾಣಿಸುವುದರಿಂದ ಅದನ್ನು ಕುರಿತು ಎಲ್ಲರೂ ತಿಳಿದಿದೆಯೆನ್ನುವಂತೆ ಮಾತನಾಡುತ್ತಾರೆ. ಈ ಎರಡು ಸಮಾಜಗಳಲ್ಲಿ ಮನುಷ್ಯನಿಗೆ ಯಾವುದು ಮುಖ್ಯ ಎನ್ನುವ ಪ್ರಶ್ನೆಬಂದರೆ, ಹೊರಗೆ ಎಲ್ಲರ ಮಧ್ಯದಲ್ಲಿ ತಿರುಗುತ್ತಿದ್ದೇವೆ ಆದ್ದರಿಂದ ಹೊರಗಿನ ಸಮಾಜದಲ್ಲಿ ಹೇಗೆ ನಡೆದುಕೊಳ್ಳಬೇಕೋ ತಿಳಿದಿರಬೇಕು. ಹಾಗೆಯೇ ಒಳಗಿನ ಸಮಾಜದಲ್ಲಿ ನಿನ್ನ ಪಾತ್ರ ಏನೋ ತಿಳಿದಿರಬೇಕು. ಒಂದು ವಿಧವಾಗಿ ಎರಡು ಸಮಾಜಗಳು

ಮನುಷ್ಯನಿಗೆ ಮುಖ್ಯವಾದವೆ. ಒಬ್ಬ ಮನುಷ್ಯ ಸಂಪೂರ್ಣವಾಗಿ ಜೀವಿಸಬೇಕೆಂದರೆ ಆತನು ಎರಡು ಸಮಾಜಗಳನ್ನು ಕುರಿತು ತಿಳಿದಿರಬೇಕು. ಈಗಿನಕಾಲದಲ್ಲಿ ಒಳಗಿನ ಸಮಾಜವನ್ನು ಕುರಿತು ಯಾರಿಗೂ ತಿಳಿದಿಲ್ಲ. ಆದ್ದರಿಂದ ಅಂತಹ ಮನುಷ್ಯ ಅಸಂಪೂರ್ಣವಾಗಿ ಜೀವಿಸಿದಂತೆ, ಅಂದರೆ ಆತನದು ಸಂಪೂರ್ಣ ಜೀವನ ಅಲ್ಲ. ಸಮ್ ಎಂದರೆ ಚೆನ್ನಾಗಿ ಎಂದು, ಪೂರ್ಣ ಎಂದರೆ ಪೂರ್ತಿಯಾಗಿ ಎಂದು ಅರ್ಥ. ಸಂಪೂರ್ಣವಾಗಿ ಎಂದರೆ ಚೆನ್ನಾಗಿ ತಿಳಿದಿದೆ ಎಂದು ಅರ್ಥ. ಭೂಮಿಮೇಲೆ ಮಾನವರು ಸಂಪೂರ್ಣವಾಗಿ ತಿಳಿಯದೆ ಅಸಂಪೂರ್ಣ ಜೀವನವನ್ನು ಕಳೆಯುತ್ತಿದ್ದಾರೆಂದು ತಿಳಿಯುತ್ತಿದೆ.

ಒಬ್ಬ ಮನುಷ್ಯ ಭೌತಿಕ ಸಮಾಜದಲ್ಲಿ ಜೀವಿಸುವಾಗ ತನ್ನ ಶರೀರದಲ್ಲಿನ ಆಧ್ಯಾತ್ಮಿಕ ಸಮಾಜವನ್ನು ಕುರಿತು ಕೂಡ ತಿಳಿದಿರಬೇಕು. ಹಾಗೆ ಆಧ್ಯಾತ್ಮಿಕ ತಿಳಿಯದಂತೆ ಕೇವಲ ಭೌತಿಕವಾಗಿ ಜೀವಿಸುವವನನ್ನು ಅಜ್ಞಾನಿ ಎಂದು, ಅಸಂಪೂರ್ಣಜೀವಿ ಎಂದು ಹೇಳಬಹುದು. ಮನುಷ್ಯ ಹಾಗೆ ಅಜ್ಞಾನಿಯಾಗದೆ, ಅಸಂಪೂರ್ಣ ಜೀವನವನ್ನು ಕಳೆಯದಂತೆ, ಇತ್ತ ಹೊರಗೆ ಅತ್ತ ಒಳಗೆ ಸಮಾಜಗಳನ್ನು ಕುರಿತು ತಿಳಿದು ಬದುಕುವಂತೆ, ದೇವರ ಧರ್ಮಗಳನ್ನು ಭಗವಂತನು ಜ್ಞಾನ ರೂಪದಲ್ಲಿ ತಿಳಿಸಿದ್ದಾನೆ. ಹೊರಗಿನ ಸಮಾಜದಲ್ಲಿ ಒಬ್ಬ ಮನುಷ್ಯ ಕಾರ್ಯಗಳನ್ನು ಮಾಡುತ್ತಿರುವಾಗ, ಮಾತನಾಡುವಾಗ, ಕುಟುಂಬದಜೊತೆ ಇದ್ದಾಗ, ಹೆಂಡತಿ ಬಗ್ಗೆ, ಮಕ್ಕಳ ಬಗ್ಗೆ, ಸಂಬಂಧಿಕರ ಬಗ್ಗೆ ಸಕ್ರಮವಾಗಿ ಹೇಗೆ ಪ್ರವರ್ತಿಸಬೇಕೊ ನಿಯಮಿಸಿ ತಿಳಿಸುವುದು ಒಳಗಿನ ಸಮಾಜ. ಹೊರಗಿನ ಸಮಾಜದಲ್ಲಿನ ಮನುಷ್ಯನಿಗೆ ಘೋರವಾದ ಪಾಪಗಳು ಅಂಟಿಕೊಳ್ಳುತ್ತಿವೆ. ಹೊರಗಿನ ಸಮಾಜದಲ್ಲಿಯೇ ಮನುಷ್ಯನಿಗೆ ಘೋರವಾದ ಬಾಧೆಗಳು ಅನುಭವಿಸಬೇಕಾಗಿದೆ. ಹೊರಗಿನ ಸಮಾಜದಲ್ಲಿ ಪಾಪಗಳನ್ನು ಅಂಟಿಸಿಕೊಳ್ಳದಂತೆ ಸಕ್ರಮವಾಗಿ ಬದುಕಬೇಕೆಂದರೆ ಭೌತಿಕದೊಂದಿಗೆ, ಆಧ್ಯಾತ್ಮಿಕವನ್ನು ಸಹ ತಿಳಿದಿರಬೇಕು. ಕಾಣಿಸದ ಆಧ್ಯಾತ್ಮಿಕವನ್ನು ಧರ್ಮಬದ್ಧವಾಗಿ ಜ್ಞಾನರೂಪದಲ್ಲಿ

ಭಗವಂತನು ತಿಳಿಸುವುದಕ್ಕೇ ಬರುತ್ತಾನೆ. ಆಧ್ಯಾತ್ಮಿಕವನ್ನು ತಿಳಿಸಬೇಕೆಂದರೆ ದೇವರ ಧರ್ಮಗಳು ಮನುಷ್ಯರಿಗೆ ತಿಳಿಯಬೇಕು. ದೇವರ ಧರ್ಮಗಳೊಂದಿಗೆ ಕೂಡಿಕೊಂಡಿರುವುದೆ ಆಧ್ಯಾತ್ಮಿಕ. ದೇವರ ಧರ್ಮಗಳು ಇಲ್ಲಿಗೆ ಎರಡು ಸಲ ಭೂಮಿಮೇಲೆ ಕೇವಲ ಮೂರು ಸಾವಿರ ವರ್ಷಗಳ ಅವಧಿಯಲ್ಲಿಯೇ ತಿಳಿಯಲ್ಪಟ್ಟಿವೆ. ಇಷ್ಟು ಕಡಿಮೆ ಕಾಲದಲ್ಲಿಯೇ ದೇವರ ಧರ್ಮಗಳು ಸಂಪೂರ್ಣ ಜ್ಞಾನರೂಪದಿಂದ ತಿಳಿಯಲ್ಪಟ್ಟರೂ, ಒಂದು ಧರ್ಮವನ್ನು ಸಹ ಮನುಷ್ಯ ಗ್ರಹಿಸಲಿಲ್ಲ. ದೇವರ ಅಂಶ ಭೂಮಿಮೇಲಕ್ಕೆ ಭಗವಂತನಾಗಿ ಬಂದು ಧರ್ಮಗಳನ್ನು ತಿಳಿಸಿದರೂ ಏಕೆ ಮನುಷ್ಯ ಗ್ರಹಿಸಲಿಲ್ಲ. ಗ್ರಹಿಸದಂತೆ ಹೋಗುವುದಕ್ಕೆ ಕಾರಣವೇನು ಎಂದು ನೋಡಿದಂತಾದರೆ ಈ ವಿಧವಾಗಿ ತಿಳಿಯುತ್ತಿದೆ.

ಮನುಷ್ಯನ ಶರೀರದಲ್ಲಿ ಮುಖ್ಯವಾದುದು ತಲೆ. ಮೇಲ್ನೋಟಕ್ಕೆ ಕಾಣಿಸುವ ತಲೆಯಲ್ಲಿ ಕಾಣಿಸದ ರಹಸ್ಯ ಎಷ್ಟೋ ಇದೆ. ಆದ್ದರಿಂದ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗ ಎನ್ನುವ ಅಧ್ಯಾಯದಲ್ಲಿ ಮೊದಲ ಶ್ಲೋಕದಲ್ಲಿಯೇ.

**ಶ್ಲೋ॥ ಊರ್ಧ್ವಮೂಲ ಮಧಶ್ಶಾಖ ಮಶ್ವತ್ಥಂ ಪ್ರಾಹು ರವ್ಯಯಮ್।**
**ಛನ್ದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸವೇದವಿತ್॥**

**ಭಾವಾರ್ಥ :–** ಶರೀರಕ್ಕೆ ಮೇಲೆ ಮೂಲವಿದೆಯೆಂದು ಹೇಳಿದ್ದಾನೆ. ಅದಕ್ಕೆ ಕೊಂಬೆಗಳು ಕೆಳಗಿವೆಯೆಂದು ಸಹ ಹೇಳಿದ್ದಾನೆ. ಇದನ್ನು ತಿಳಿದವನು ಮಾಯೆಯನ್ನು ತಿಳಿದಂತೆಯೆಂದು ಹೇಳಿದ್ದಾನೆ. ಮೇಲೆ ತಲೆಯಲ್ಲಿನ ಮೂಲವನ್ನು ತಿಳಿದರೆ ಮಾಯೆಯನ್ನೆ ಅಲ್ಲದೆ ದೇವರ ಜ್ಞಾನವನ್ನು ಕೂಡ ತಿಳಿದಂತಾಗುತ್ತದೆ. ಆದ್ದರಿಂದ ತಲೆಯಲ್ಲಿನ ಸ್ವಲ್ಪ ರಹಸ್ಯವನ್ನು ನಾವು ವಿವರಿಸಿಕೊಳ್ಳೋಣ. ತಲೆಯಲ್ಲಿನ ಸ್ವಲ್ಪ ರಹಸ್ಯವನ್ನು ತಿಳಿದುಕೊಳ್ಳುವುದರಿಂದ ಪ್ರಸ್ತುತ ಕಾಲದಲ್ಲಿ ದೇವರ ಧರ್ಮಗಳನ್ನು ಮನುಷ್ಯ ಏಕೆ ತಿಳಿದುಕೊಳ್ಳದೆ ಹೋಗಿದ್ದಾನೊ ಸ್ವಲ್ಪಮಟ್ಟಿಗೆ ಅರ್ಥವಾಗುತ್ತದೆ. ತಲೆಯಲ್ಲಿ ನಾಲ್ಕು ಚಕ್ರಗಳ ಜೋಡಣೆ ಒಂದಿದೆಯೆಂದು ಮೊದಲೇ ಹೇಳಿಕೊಂಡಿದ್ದೇವೆ. ಅದರಲ್ಲಿ ಕೆಳಗಿನ

ಚಕ್ರ ಒಂದಿದೆ ಅಲ್ಲವೆ! ಅದನ್ನೇ ಮಾಯಾಚಕ್ರ ಎಂದೂ, ಗುಣಚಕ್ರ ಎಂದೂ ಹೇಳಿಕೊಂಡಿದ್ದೇವೆ. ಈ ಚಕ್ರ ಮೂರರ ಸುತ್ತಾ ಅಳತೆಗಳಲ್ಲಿ, ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದೆ. ಒಂದೊಂದು ಭಾಗಕ್ಕೆ ಒಂದೊಂದು ಹೆಸರು ಇದೆಯೆಂದು ಮೊದಲೆ ಹೇಳಿಕೊಂಡಿದ್ದೇವೆ. ಗುಣಚಕ್ರ ಆಕಾರವನ್ನು ಸಹ ಚಿತ್ರರೂಪದಲ್ಲಿ ತಿಳಿದುಕೊಂಡಿದ್ದೇವೆ. ಚಕ್ರದಲ್ಲಿನ ಒಂದೊಂದು ಭಾಗದಲ್ಲಿ 6+6 ಗುಣಗಳು ಒಟ್ಟಾರೆ 12 ಇವೆಯೆಂದು ಸಹ ಹೇಳಿಕೊಂಡಿದ್ದೇವೆ. ಇವುಗಳಲ್ಲಿ ಆರು ಒಳ್ಳೆಯ ಗುಣಗಳಾಗಿದ್ದು, ಆರು ಕೆಟ್ಟ ಗುಣಗಳಾಗಿ ಇವೆ. ಒಳ್ಳೆಯ ಕೆಟ್ಟ 12 ಗುಣಗಳು ಹೆಸರುಗಳು ಹೊಂದಿವೆ. ಇವುಗಳಿಗೆ ಅನುಸಂಧಾನವಾಗಿ ಎರಡು ಗುಂಪುಗಳಿಗೂ ಒಂದು ಶ್ರದ್ಧೆ ಇದೆ. ಒಂದು ಗುಣಭಾಗದಲ್ಲಿನ ಗುಂಪಿಗೆ ಒಂದು ಶ್ರದ್ಧೆ ಎನ್ನುವುದು ಇರುವಾಗ, ಉಳಿದ ಎರಡು ಗುಣಭಾಗಗಳ ಗುಂಪಿಗೆ ಎರಡು ಶ್ರದ್ಧೆಗಳು ಇರುತ್ತವೆ. ಶ್ರದ್ಧೆ ಎನ್ನುವುದು ಗುಣವಲ್ಲ. ಶ್ರದ್ಧೆ ಎನ್ನುವುದು ಪ್ರತ್ಯೇಕವಾದುದು. ಶ್ರದ್ಧೆ ಎನ್ನುವುದು ಒಂದು ಛಾಯೆಯಂತಹದು. ಅದರ ಛಾಯೆ (ನೆರಳು) ಆರು ಗುಣಗಳ ಮೇಲೆ ಬೀಳುತ್ತಿರುತ್ತದೆ. ಗುಣಗಳ ಮೇಲೆ ಶ್ರದ್ಧೆವೊಂದರ ಛಾಯೆ ಬೀಳುವುದಲ್ಲದೆ ಆ ಗುಣ ಭಾಗದಲ್ಲಿರುವ ಜೀವಿಯನ್ನು ಅಲ್ಲಿರುವ ಗುಣಗಳಲ್ಲಿನ ಒಂದು ಗುಣದೊಂದಿಗೆ ಶ್ರದ್ಧೆ ಅನುಸಂಧಾನ ಮಾಡುತ್ತಿರುತ್ತದೆ. ಚೆನ್ನಾಗಿ ಅರ್ಥವಾಗುವುದಕ್ಕೆ ಒಂದು ಉದಾಹರಣೆಯನ್ನು ಹೇಳಿಕೊಳ್ಳೋಣ. ಸೂರ್ಯನು ಪ್ರಕಾಶಿಸುವಾಗ ಸೂರ್ಯರಶ್ಮಿಬೀಳದ ಸ್ಥಳಗಳು ಸಹ ಎಷ್ಟೋ ಇರುತ್ತವೆ. ಮನೆಯಲ್ಲಿನ ಎಲ್ಲಾ ಸ್ಥಳಗಳಿಗೆ ಸೂರ್ಯರಶ್ಮಿ ಬೀಳುವುದಿಲ್ಲ ಅಲ್ಲವೆ! ಹಾಗೆಯೇ ಶರೀರದಲ್ಲಿ ಜೀವಿಯು ಸೂರ್ಯನಂತಹವನು ಜೀವಿಗೆ ಸ್ವಲ್ಪ ಬೆಳಕಿರುತ್ತದೆ. ಜೀವಿಯ ಬೆಳಕು ನೇರವಾಗಿ ಯಾವ ಗುಣದಮೇಲೆ ಬೀಳುವುದಿಲ್ಲ. ಗುಣ ಒಂದು ಮನೆಯಂತಹದ್ದು. ಜೀವಿಯ ಬೆಳಕು ಗುಣವೆಂಬ ಗೃಹದೊಳಗೆ ಬೀಳಬೇಕು. ಸೂರ್ಯಕಿರಣ ಸೂರ್ಯನ ಸುತ್ತಾ ನೇರವಾಗಿಯೇ ಪಯನಿಸುತ್ತದೆ, ಆದರೆ ಎಲ್ಲಿಯೂ ಕಿರಣ ಬಗ್ಗುವುದಿಲ್ಲ. ಸೂರ್ಯಕಿರಣ ಬಗ್ಗದಿರುವುದರಿಂದ ಗೃಹದೊಳಗೆ ಸೂರ್ಯಕಿರಣ ಎಲ್ಲಾ ಸ್ಥಳಗಳೊಳಗೆ ಹೋಗಲಾರದು. ಮನೆಯ ಮುಖದ್ವಾರದ ಮೂಲಕ ಸೂರ್ಯಕಿರಣ ನೇರವಾಗಿ

ಎದುರುಗಡೆ ಇರುವ ರೂಮಿನಲ್ಲಿನ ಗೋಡೆಗೆ ಬೀಳಬೇಕೆಂದರೆ, ಸೂರ್ಯ ಕಿರಣವನ್ನು ಬಗ್ಗಿಸಿ ದ್ವಾರದ ಮೂಲಕ ನೇರವಾಗಿರುವ ಗೋಡೆಗೆ ಬೀಳುವಂತೆ ಮಾಡಬಹುದು. ಹಾಗೆ ಮಾಡುವುದಕ್ಕೆ ಒಂದು ಪರಿಕರ ಅಗತ್ಯ. ಸೂರ್ಯ ಕಿರಣಗಳು ಬಗ್ಗಿಸಿ ಕಳಿಸುವುದು ನಾವು ಮುಖ ನೋಡಿಕೊಳ್ಳುವ ಕನ್ನಡಿ ಮಾತ್ರವೆ. ಕನ್ನಡಿ ಸೂರ್ಯಕಿರಣವನ್ನು ಎಲ್ಲಿಗಾದರೂ ಕಳಿಸಬಲ್ಲದು. ಹಾಗೆಯೇ ಶರೀರದಲ್ಲಿನ ಜೀವಿಯು ತನ್ನ ಕಾಂತಿಯನ್ನು ನೇರವಾಗಿ ಯಾವಗುಣದ ಮೇಲೆಗೆ ಕಳಿಸಲಾರನು. ಜೀವಿಯ ಕಾಂತಿಯನ್ನು ಯಾವಾಗ ಯಾವ ಗುಣದ ಮೇಲೆ ಕಳಿಸಬೇಕೊ ಆಗ ಜೀವಿಯ ಕಾಂತಿಯನ್ನು ಆ ಗುಣದ ಮೇಲೆ ಕಳಿಸುವುದಕ್ಕೆ ನಮ್ಮ ಶರೀರದಲ್ಲಿನ ಶ್ರದ್ಧೆ ಎನ್ನುವ ಕನ್ನಡಿ ಇದೆ. ಕನ್ನಡಿ ಸೂರ್ಯಕಿರಣವನ್ನು ಹೇಗೆ ಎಲ್ಲಿಗಾದರೂ ಬಗ್ಗಿಸಿಕಳಿಸುತ್ತದೊ, ಅದೇ ವಿಧವಾಗಿ ಶ್ರದ್ಧೆ ಜೀವಿಯ ಕಾಂತಿಯನ್ನು ಯಾವ ಗುಣದ ಮೇಲಕ್ಕಾದರೂ ಕಳಿಸಬಲ್ಲದು. ಹೊರಗಿನ ಕನ್ನಡಿ ಹೇಗೆ ಕೆಲಸಮಾಡುತ್ತಿ ದೆಯೊ, ಹಾಗೆಯೇ ಒಳಗೆ ಶ್ರದ್ಧೆ ಎನ್ನುವುದು ಕೆಲಸ ಮಾಡುತ್ತಿರುತ್ತದೆ. ಹೊರಗಿನ ಕನ್ನಡಿ ಅದಷ್ಟಕ್ಕದು ಕೆಲಸ ಮಾಡುವುದಿಲ್ಲ. ಅದನ್ನು ಕೆಲಸ ಮಾಡಿಸುವುದಕ್ಕೆ ಒಬ್ಬ ಮನುಷ್ಯ ಅಗತ್ಯ. ಒಬ್ಬ ಮನುಷ್ಯ ಕನ್ನಡಿಯಿಂದ ಸೂರ್ಯ ಕಿರಣವನ್ನು ಎಲ್ಲಿಗೆ ಕಳಿಸಬೇಕೊ, ಯಾವ ಮನೆಯೊಳಗೆ ಕಳಿಸಬೇಕೊ, ಆ ಮನೆಯಲ್ಲಿನ ಯಾವ ಕೋಣೆಯೊಳಗೆ ಕಳಿಸಬೇಕೊ ತಿಳಿದು ಕಳಿಸುತ್ತದೆ. ಹಾಗೆಯೇ ಶ್ರದ್ಧೆ ಎನ್ನುವುದು ಸ್ವತಃವಾಗಿ ಜೀವಿಯ ಕಾಂತಿಯನ್ನು ಯಾವ ಗುಣದ ಮೇಲೆ ಕಳಿಸಲಿಲ್ಲ. ಅದನ್ನು ನಿಯಮಿಸಿ ಕೆಲಸ ಮಾಡಿಸುವುದು ಪ್ರಾರಬ್ಧಕರ್ಮ ಎನ್ನುವುದು ಪ್ರತ್ಯೇಕವಾಗಿ ಒಂದು ಇದೆ. ಪ್ರಾರಬ್ಧಕರ್ಮಕ್ಕೆ ಶ್ರದ್ಧೆಯನ್ನು ಯಾವಾಗ ಯಾವ ಗುಣದ ಮೇಲಕ್ಕೆ ಕಳಿಸಬೇಕೊ ತಿಳಿದಿರುತ್ತದೆ. ಅದರಪ್ರಕಾರವೇ ಜೀವಿಯ ಬೆಳಕನ್ನು ಶ್ರದ್ಧೆಯ ಮುಖಾಂತರ ಗುಣಗಳ ಮೇಲಕ್ಕೆ ಕಳಿಸುತ್ತಿದೆ. ಪ್ರಾರಬ್ಧಕರ್ಮ ತಿಳಿಸಿದ ಪ್ರಕಾರ ಶ್ರದ್ಧೆ ಗುಣದ ಮೇಲಕ್ಕೆ ಜೀವಿಯ ಕಾಂತಿಯನ್ನು ಕಳಿಸುತ್ತಿದೆ. ಆಗ ಜೀವಿಯು ಆ ಗುಣದಿಂದ ಏಕವಾಗಿಹೋಗುತ್ತಿದ್ದಾನೆ. ಅಂದರೆ ಆ ಗುಣವನ್ನು ಅಂಟಿಕೊಂಡಿರುವವನಾ ಗುತ್ತಿದ್ದಾನೆ. ಹಾಗೆಯೇ ಯಾವ ಗುಣದ ಮೇಲೆ

ಜೀವಿಯಕಾಂತಿ ಪ್ರಸಾರವಾಗುತ್ತಿದೆಯೊ, ಆ ಗುಣಭಾವವನ್ನು ಜೀವಿಯು ಹೊಂದುತ್ತಿದ್ದಾನೆ. ಶರೀರದಲ್ಲಿ ಜೀವಿಯು ಗುಣಗಳ ಭಾವವನ್ನು ಈ ವಿಧವಾಗಿ ಹೊಂದುತ್ತಿದ್ದಾನೆಂದು ಇಲ್ಲಿಯವರೆಗು ಯಾರಿಗೂ ತಿಳಿದಿಲ್ಲ. ನಾವು ಎಷ್ಟು ಸುಲಭವಾಗಿ ಹೇಳಿದರೂ ಇದು ದೊಡ್ಡ ರಹಸ್ಯವೇಯೆಂದು ತಿಳಿಯಬೇಕು. **ಇಲ್ಲಿಯೇ ಯಾರಿಗೂ ತಿಳಿಯದ ರಹಸ್ಯಗಳಿಗೆಲ್ಲ ರಹಸ್ಯವಾದ ವಿಷಯ ಇನ್ನೊಂದು ಇದೆ.** ಅದೇನೆಂದರೆ!

ಗುಣಚಕ್ರದಲ್ಲಿನ ಮೂರು ಗುಣಭಾಗಗಳಿಗೆ ಮಧ್ಯದಲ್ಲಿ ಒಂದು ಭಾಗ ಇದೆಯೆಂದು, ಅದೇ ಕೃಷ್ಣನು ಧರಿಸಿದ ನವಿಲುಗರಿಯಲ್ಲಿ ಮಧ್ಯದಲ್ಲಿರುವ ಕಪ್ಪನೆಯ ಗುರುತೆಂದು ಹೇಳಿಕೊಂಡಿದ್ದೇವೆ. ಆ ಮಧ್ಯದಲ್ಲಿನ ಗುರುತು ಆತ್ಮಕ್ಕೆ ನಿಲಯವೆಂದು ಹೇಳಿಕೊಂಡಿದ್ದೇವೆ. ಮಧ್ಯದಲ್ಲಿನ ಭಾಗ ಸುತ್ತ ಇರುವ ಮೂರು ವಲಯಗಳಲ್ಲಿ ಮೂರು ಶ್ರದ್ಧೆಗಳೆ ಇವೆ. ಹಾಗೆಯೇ ಮಧ್ಯದಲ್ಲಿರುವ ಆತ್ಮ ಭಾಗದಲ್ಲಿ ಸಹ ಒಂದು ಶ್ರದ್ಧೆ ಇದೆ. ಈ ಶ್ರದ್ಧೆ ಪ್ರತ್ಯೇಕವಾದುದು. ಇದು ಮೂರು ಗುಣಗಳಲ್ಲಿನ ಶ್ರದ್ಧೆಯಂತೆ ಇರುವುದಿಲ್ಲ. ಇದರಮೇಲೆ ಪ್ರಾರಬ್ಧಕರ್ಮ ಪ್ರಭಾವ ಇರುವುದಿಲ್ಲ. ಈ ಶ್ರದ್ಧೆ ಸರ್ವ ಸ್ವತಂತ್ರವಾದುದು. ಗುಣಚಕ್ರದಲ್ಲಿನ ಮೂರು ಗುಣಭಾಗಗಳಲ್ಲಿ ಯಾವುದೋ ಒಂದು ಭಾಗದಲ್ಲಿರುವ ಜೀವಿಯು ಸ್ವಯಂಪ್ರಕಾಶ ಇರುವವನು. ಆತನ ಪ್ರಕಾಶ ಗುಣಭಾಗದಲ್ಲಿ ಮಾತ್ರ ಹರಡುತ್ತದೆ. ಜೀವಿಯ ಕಿರಣಗಳು ಒಂದು ಗುಣಭಾಗಕ್ಕಿಂತ ಹೆಚ್ಚಾಗಿ ದೂರ ಹೋಗಲಾರೆವು. ಗುಣಗಳ ಮಧ್ಯದಲ್ಲಿರುವ ಭಾಗದಲ್ಲಿರುವ ಆತ್ಮ ಸಹ ಸ್ವಯಂ ಪ್ರಕಾಶ ಇರುವುದೆ. ಆದರೆ ಆತ್ಮ ಪ್ರಕಾಶ ತನ್ನ ಭಾಗದಲ್ಲಿಯೇ ಅಲ್ಲದೆ, ನಂತರ ಮೂರು ಗುಣಭಾಗಗಳಲ್ಲಿಯೇ ಅಲ್ಲದೆ, ಶರೀರವೆಲ್ಲಾ ಕಾಲಿನ ಉಗುರಿನವರೆಗು, ತಲೆ ಕೂದಲಿನವರೆಗು ಹರಡಿರುತ್ತದೆ. ಜೀವಾತ್ಮ ಆತ್ಮ ಎರಡು ಪರಮಾತ್ಮನಿಂದ ಬಂದಿರುವವೆ, ಆದರೂ ಜೀವಾತ್ಮ ಅನುಭವಿಸುವವನು, ಆತ್ಮ ಅನುಭವಿಸುವಂತೆ ಮಾಡುವವನು. ಅಷ್ಟೇ ಅಲ್ಲದೆ ಆತ್ಮ ಶರೀರದಲ್ಲಿ ಅನೇಕ ಕೆಲಸಗಳನ್ನು ಯಾರಿಗೂ ತಿಳಿಯದಂತೆ ಮಾಡುತ್ತಾ ಶರೀರವನ್ನು ನಡೆಸುತ್ತಿದೆ. ಶರೀರವೆಲ್ಲವೂ ಆತ್ಮ

ಕಿರಣಗಳು ಆಕ್ರಮಿಸಿ, ಶರೀರದಲ್ಲಿ ಪ್ರತಿ ಕೆಲಸವನ್ನು ಮಾಡುತ್ತಿದೆ. ಜೀವಾತ್ಮ ಗುಣ ಭಾವವನ್ನು ಹೊಂದುವುದು ಮತ್ತು ಅಹಂಭಾವವನ್ನು ಹೊಂದುವುದು, ಆತ್ಮ ಶರೀರದ ಮೂಲಕ ಮಾಡಿಸಿದ ಕೆಲಸದಲ್ಲಿನ ಕಷ್ಟಸುಖಗಳನ್ನು ಅನುಭವಿಸುವಂತೆ ಮಾತ್ರ ಮಾಡುತ್ತಿದೆ. ಗುಣಭಾವವನ್ನು, ಅಹಂಭಾವವನ್ನು ಹೊಂದುವುದರಲ್ಲಿ ಜೀವಿಗೆ ಯಾವ ಅನುಭೂತಿ (ಅನುಭವ) ಇಲ್ಲ. ಆದರೆ ಕಷ್ಟಸುಖಗಳನ್ನು ಮಾತ್ರ ಅನುಭವಿಸುತ್ತಿದ್ದಾನೆ.

ಆತ್ಮ ಶರೀರವೆಲ್ಲಾ ವ್ಯಾಪಿಸಿ ಜೀವಾತ್ಮಗಿಂತ ಎಷ್ಟೋ ವಿಧಗಳು ಶ್ರೇಷ್ಠವಾದುದಾಗಿ ಇದೆ. ಆದರೂ ಮೂರು ಗುಣ ಭಾಗಗಳಲ್ಲಿ ಶ್ರದ್ಧೆ ಇದ್ದಂತೆ ಆತ್ಮ ಭಾಗದಲ್ಲಿ ಕೂಡ ಶ್ರದ್ಧೆ ಇದೆ. ಆತ್ಮ ಭಾಗದಲ್ಲಿರುವ ಶ್ರದ್ಧೆ ಪ್ರತ್ಯೇಕವಾದುದೆಂದು ತಿಳಿದುಕೊಂಡಿದ್ದೇವೆ. ಈ ಶ್ರದ್ಧೆ ಜೀವಿಯೊಂದರ ಕರ್ಮ ಆಧೀನದಲ್ಲಿರುವುದು ಅಲ್ಲ. ಇದು ಕೇವಲ ಜೀವಾತ್ಮ ಇಷ್ಟ ಪ್ರಕಾರ ಮಾತ್ರವೆ ಕೆಲಸ ಮಾಡುತ್ತದೆ. ಗುಣಗಳಲ್ಲಿನ ಶ್ರದ್ಧೆ ಜೀವಿಯ ಕಿರಣಗಳನ್ನು ಗುಣಗಳ ಮೇಲಕ್ಕೆ ಪ್ರಸಾರ ಮಾಡುತ್ತಿರುವಾಗ, ಆತ್ಮ ಭಾಗದಲ್ಲಿನ ಶ್ರದ್ಧೆ ಆತ್ಮ ಕಿರಣಗಳನ್ನೇ ಜೀವಿಯ ಮೇಲಕ್ಕೆ ಪ್ರಸಾರಮಾಡುತ್ತದೆ. ಗುಣಗಳಲ್ಲಿರುವ ಶ್ರದ್ಧೆಯನ್ನು ಪ್ರಾರಬ್ಧಕರ್ಮ ಕೆಲಸ ಮಾಡಿಸಿದಾಗ, ಇಲ್ಲಿ ಶ್ರದ್ಧೆಯನ್ನು ಜೀವಿಯ ಇಷ್ಟದ ಕೆಲಸ ಮಾಡಿಸುತ್ತದೆಂದು ಹೇಳಿಕೊಂಡಿದ್ದೇವೆ! ಜೀವಿಯು ಗುಣಗಳನ್ನು ಸಹಿಸಲಾರದೆ, ಗುಣಗಳ ಮೇಲೆ ಕೆಲಸ ಮಾಡುವುದು ತನ್ನ ಶ್ರದ್ಧೆ ಅಲ್ಲವೆಂದು, ಗುಣಗಳ ಮೇಲೆ ಕರ್ಮ ಶ್ರದ್ಧೆ ಕೆಲಸ ಮಾಡಿಸುತ್ತಿದೆಯೆಂದು, ಒಟ್ಟಾರೆ ಶರೀರದೊಳಗಿರುವ ಆಧ್ಯಾತ್ಮಿಕ ಸಂಘವೆಲ್ಲವನ್ನು ತಿಳಿದಾಗ, ತನಗೂ ಸಹ ಶ್ರದ್ಧೆ ಇದೆಯೆಂದು ತನ್ನ ಶ್ರದ್ಧೆ ಎಷ್ಟು ಕೆಲಸ ಮಾಡಿದರೆ ಅಷ್ಟು ಆತ್ಮಜ್ಞಾನ ಲಭಿಸುತ್ತದೆಂದು ಅರ್ಥವಾದಾಗ, ಆತ್ಮ ಭಾಗದಲ್ಲಿನ ಶ್ರದ್ಧೆ ಕದಲಿ ಕೆಲಸ ಮಾಡುವುದಕ್ಕೆ ಪ್ರಾರಂಭ ಮಾಡುತ್ತದೆ. ಆಗ ಶ್ರದ್ಧೆ ಅಲ್ಲಿರುವ ಆತ್ಮಕಿರಣಗಳನ್ನು ಜೀವಾತ್ಮ ಮೇಲಕ್ಕೆ ಪ್ರಸಾರಮಾಡುತ್ತದೆ. ಹಾಗೆ ಜೀವಿಯ ಶ್ರದ್ಧೆ ಆತ್ಮ ಭಾಗದಿಂದ ಆತ್ಮ ಕಿರಣಗಳನ್ನು ಪ್ರಸಾರಮಾಡಿದಾಗ, ಜೀವಿಗೆ ಆತ್ಮವೊಂದರ ವಿಷಯ (ಆತ್ಮಜ್ಞಾನ) ಸ್ವಲ್ಪ ಸ್ವಲ್ಪ ಅರ್ಥವಾಗುವುದಕ್ಕೆ ಪ್ರಾರಂಭವಾಗುತ್ತದೆ. ಇದೆಲ್ಲ ನಡೆಯುವುದಕ್ಕೆ ಮೊದಲು ಬಾಹ್ಯಸಂಘದಲ್ಲಿ

ಧರ್ಮಗಳು ತಿಳಿದಿರಬೇಕು. ಬಾಹ್ಯ ಪ್ರಪಂಚದಲ್ಲಿ ದೈವಧರ್ಮಗಳು ತಿಳಿದಾಗ ಮನುಷ್ಯನಿಗೆ ದೈವಜ್ಞಾನ ಅರ್ಥವಾಗುತ್ತದೆ. ಆಗ ಒಳಗಿರುವ ಜೀವಾತ್ಮ ಸ್ಪಂದಿಸಿ ಒಳಗಿರುವ ಸಂಘವನ್ನು ತಿಳಿದುಕೊಳ್ಳುವುದಕ್ಕೆ ಪ್ರಾರಂಭ ಮಾಡುತ್ತದೆ. ಒಳಗಿರುವ ಸಂಘವನ್ನು ತಿಳಿದುಕೊಂಡ ನಂತರ ಜೀವಿಗೆ ಆತ್ಮಜ್ಞಾನದ ಮೇಲೆ ಇಷ್ಟ ಉಂಟಾಗುತ್ತದೆ. ಆಗ ಜೀವಿಯ ಇಷ್ಟದ ಪ್ರಕಾರ ಆತ್ಮ ಭಾಗದಲ್ಲಿನ ಶ್ರದ್ಧೆ ಕೆಲಸ ಮಾಡುತ್ತದೆ. ಒಬ್ಬ ಮನುಷ್ಯ ಧರ್ಮವರನಾಗಿ ಬದಲಾಗಬೇಕೆಂದರೆ ಈ ವಿಧವಾಗಿ ಬಾಹ್ಯದಲ್ಲಿ ಜ್ಞಾನ, ಅಂತರದಲ್ಲಿ ಜ್ಞಾನ ತಿಳಿದಾಗಲೇ ಸಾಧ್ಯವಾಗುತ್ತದೆ. ಅಂದರೆ ಬಾಹ್ಯ ಸಂಘವನ್ನು, ಅಂತರ್‌ಸಂಘವನ್ನು ಚೆನ್ನಾಗಿ ತಿಳಿಯಬೇಕಾಗಿದೆ.

ಪ್ರಸ್ತುತ ಕಾಲದಲ್ಲಿ ಇಲ್ಲಿಗೆ ಭಗವಂತನು ಎರಡುಸಲ ಧರ್ಮಗಳನ್ನು ತಿಳಿಸಿಹೋಗಿದ್ದಾನೆ. ಆತನು ಪ್ರಚಾರದಲ್ಲಿನ ಭಾಗವಾಗಿ ಮೂರನೇಸಲ ಬಂದು ಹೇಳಬೇಕಾಗಿದೆ. ಈಗಾಗಲೇ ಎರಡುಸಲ ಹೇಳಿದರೂ, ಬಾಹ್ಯಸಂಘದಲ್ಲಿ ದೈವಧರ್ಮಗಳನ್ನೆ ಹೆಚ್ಚಾಗಿ ಹೇಳುವುದು ನಡೆದಿದೆ. ಇನ್ನು ಮೂರನೇಸಲ ಬಂದರೆ ಹೆಚ್ಚಾಗಿ ಅಂತರ್ ಸಂಘವನ್ನು ಕುರಿತು ಹೇಳಬೇಕಾಗಿದೆ. ಅಲ್ಲಿಗೆ ಭಗವಂತನ ಧರ್ಮಪ್ರಚಾರ ಪೂರ್ತಿ ಆಗುತ್ತದೆ. ಇಲ್ಲಿಯವರೆಗೂ ಮನುಷ್ಯರು ಏಕೆ ಬದಲಾಗಲಿಲ್ಲ, ಇಲ್ಲಿಯವರೆಗೂ ಧರ್ಮಗಳು ಏಕೆ ಪ್ರಚಾರವಾಗಲಿಲ್ಲ. ಧರ್ಮಗಳು ಪ್ರಚಾರವಾದರೂ ಅವು ಏಕೆ ಪೂರ್ತಿಯಾಗಿ ಅರ್ಥವಾಗಲಿಲ್ಲ ಎಂದು ಪ್ರಶ್ನಿಸಿಕೊಂಡು ನೋಡಿದರೆ, ಹಾಗೆ ನಡೆಯುವುದಕ್ಕೆ ಧರ್ಮಗಳು ಮೂರನೇಸಲ ಪ್ರಚಾರ ನಡೆಯಬೇಕಾಗಿದೆ. ಮೂರನೆ ಸಲ ಪ್ರಚಾರವಾದಾಗಲೇ ಧರ್ಮಪ್ರಚಾರ ಪೂರ್ತಿ ಆಗುತ್ತದೆ. ಅಷ್ಟೇ ಅಲ್ಲದೆ ಇಲ್ಲಿಯವರೆಗೂ ಹೇಳಿರುವ ಬೋಧನೆಗಳಲ್ಲಿ ಎರಡು ಸಮಾಜಗಳನ್ನು ಹೇಳಿದರೂ, ಮೂರನೇಸಲ ಹೇಳುವ ಬೋಧನೆಗಳಲ್ಲಿ ಅಂತರ್ ಸಮಾಜವನ್ನು ಕುರಿತು ಹೆಚ್ಚಾಗಿ ಹೇಳಲಾಗುತ್ತದೆ. ಪ್ರಸ್ತುತ ಕಾಲದಲ್ಲಿ ಶರೀರಾಂತರ್ಗತ ಸಮಾಚಾರವನ್ನು ಕುರಿತು ಯಾರಿಗೂ ಸ್ವಲ್ಪವೂ ಅರ್ಥವಾಗಲಿಲ್ಲ. ಆದ್ದರಿಂದ ಎಲ್ಲಿಯಾದರೂ ಸ್ವಾಮಿಗಳು, ಗುರುಗಳು, ಬೋಧಕರು ಹೇಳುವ ಬೋಧನೆಗಳಲ್ಲಿ ಶರೀರಾಂತರ್ಗತ ಸಮಾಚಾರವನ್ನು

ಕುರಿತು ಹೇಳುವುದು ಇರುವುದಿಲ್ಲ. ಭಗವಂತನು ಎರಡುಸಲ ಧರ್ಮಗಳನ್ನು ಹೇಳಿದರೂ, ಅವುಗಳ ಮೇಲೆ ಯಾರಿಗೂ ಆಸಕ್ತಿ ಇಲ್ಲದಿರುವುದರಿಂದ, ಎಲ್ಲಿಯಾದರೂ ಆಸಕ್ತಿ ಇರುವವರು ಇದ್ದರೂ, ಅವರಿಗ್ಯಾರಿಗು ಸರಿಯಾಗಿ ಅರ್ಥ ಆಗದಿರುವುದರಿಂದ, ಅಂತರ್ಗತ ಸಮಾಜವನ್ನು ಕುರಿತು ತಿಳಿಯದಂತೆ ಹೋಗಿದೆ. ಮನುಷ್ಯ ದೈವತ್ವವನ್ನು ಸೇರುವುದಕ್ಕೆ ಅಂತರ್ಗತ ಎಷ್ಟು ಅಗತ್ಯವೊ ಯಾರಿಗೂ ಸ್ವಲ್ಪವೂ ಅರ್ಥವಾಗದೆಹೋಗಿದೆ. ಆದ್ದರಿಂದ ಮೂರನೇಸಲ ಬರುವ ಭಗವಂತನು ಮೊದಲು ಎರಡುಸಲ ಹೇಳಿದ ಧರ್ಮಗಳನ್ನು ವಿವರಿಸಿ ಅರ್ಥವಾಗುವಂತೆ ಹೇಳುವುದಲ್ಲದೆ, ಅಂತರ್ಗತ ಸಮಾಜವನ್ನು ಕುರಿತು, ಅದರಲ್ಲಿ ಜೀವಿಯು ಹೇಗೆ ಇರಬೇಕೊ ಅದನ್ನು ಕುರಿತು ವಿವರವಾಗಿ ಹೇಳಿಹೋಗುತ್ತಾನೆ.

ಗತದಲ್ಲಿ ಎರಡುಸಲ ದೇವರ ಅಂಶ ಭಗವಂತನ ರೂಪದಲ್ಲಿ ದೇವರ ಧರ್ಮಗಳನ್ನು ತಿಳಿಸಿದರೆ, ಗುಣರೂಪದಲ್ಲಿರುವ ಮಾಯೆ ಅವುಗಳನ್ನು ಅರ್ಥ ವಾಗುವಂತೆ ಮಾನವನನ್ನು ಗೊಂದಲಕ್ಕೀಡುಮಾಡಿ, ದೇವರ ಮಾರ್ಗದೊಳಗೆ ಮನುಷ್ಯ ಹೋಗುವಂತೆ ನಂಬಿಸಿ, ತನ್ನ ಮಾರ್ಗದಲ್ಲಿಯೇ ಇರಿಸಿಕೊಂಡಿದೆ. ಆದ್ದರಿಂದ ಮೂರನೇಸಲ ಬರುವ ಭಗವಂತನು ಮಾಯೆಯ ಇರುವಿಕೆಯನ್ನು, ಮಾಯಾ ವಿಧಾನವನ್ನು, ಮಾಯಾ ಕಾರ್ಯಗಳನ್ನು ಕೂಡ ವಿವರಿಸಿ ಹೇಳಿ, ಮಾಯೆ ಬಲೆಯಲ್ಲಿ ಬಿದ್ದಿರುವ ಮನುಷ್ಯನನ್ನು ಹೊರಬೀಳುವಂತೆ ಮಾಡುತ್ತದೆ. ದೇವರದು ಜ್ಞಾನಮಾರ್ಗವಾದರೆ, ಮಾಯೆಯದು ದೇವರ ಮಾರ್ಗಕ್ಕೆ ವಿರುದ್ಧವಾದ ಮಾರ್ಗ. ಮನುಷ್ಯರನ್ನು ಮಾಯೆ ತನ್ನ ಮಾರ್ಗದಲ್ಲಿ ನಡೆಸಿಕೊಳ್ಳುವುದಕ್ಕೇ ಪ್ರಯತ್ನಿಸುತ್ತಿರುತ್ತದೆ. ಆ ಲೆಕ್ಕ ಪ್ರಕಾರ ಮಾಯೆಯದು ಒಂದು ಮಾರ್ಗ, ದೇವರದು ಒಂದು ಮಾರ್ಗ ಒಟ್ಟು ಎರಡು ಮಾರ್ಗ ಗಳಿವೆಯೆಂದು ತಿಳಿಯುತ್ತಿದೆ. ಮಾಯೆ, ದೇವರ ಎರಡು ಮಾರ್ಗಗಳನ್ನು ಗುರುತಿಸುವಂತೆ ಎರಡು ಮಾರ್ಗಗಳಿಗು ಎರಡು ಬೇರೆಬೇರೆ ಹೆಸರುಗಳು ಇವೆ. ದೇವರ ಮಾರ್ಗವನ್ನು ಪಥ ಎನ್ನುತ್ತೇವೆ. ಮಾಯ ಮಾರ್ಗವನ್ನು ಮತ ಎನ್ನುತ್ತೇವೆ. ಭಗವಂತನು ತನ್ನ ಬೋಧನೆಯಲ್ಲಿ ಎಲ್ಲಿಯೂ ಮತ

ಎನ್ನುವ ಪದವನ್ನು ಉಪಯೋಗಿಸಲಿಲ್ಲ. ಭಗವಂತನು ಎಲ್ಲಿ ಹೇಳಿದರೂ ಜ್ಞಾನಮಾರ್ಗವೆಂದೊ ಅಥವಾ ಜ್ಞಾನ ಪಥವೆಂದೊ ಹೇಳಿದ್ದಾನೆ. ಮತ ಎನ್ನುವುದು ಮಾಯೆಗೆ ಸಂಬಂಧಿಸಿದ ದಾರಿ, ಆದ್ದರಿಂದ ದೇವರು ಆ ಮಾತನ್ನು ಎಲ್ಲಿಯೂ ಉಪಯೋಗಿಸಿ ಧರ್ಮಗಳನ್ನು ತಿಳಿಸಲಿಲ್ಲ. ಭಗವಂತನು ಎರಡು ಸಲ ಜ್ಞಾನವನ್ನು ಬೋಧಿಸಿದರೆ, ಅದನ್ನು ಮಾನವರಿಗೆ ಅರ್ಥವಾದಂತೆ ನಂಬಿಸಿದ ಮಾಯೆ, ಭಗವಂತನ ಒಂದೊಂದು ಬರುವಿಕೆಯು ಒಂದೊಂದು ಮತವಾಗಿ ರೂಪಿಸಿ, ಕೃಷ್ಣನು ಹೇಳಿರುವುದು ಹಿಂದೂಮತವೆಂದು, ಯೇಸು ಹೇಳಿರುವುದು ಕ್ರೈಸ್ತಮತವೆಂದು ಮನುಷ್ಯರನ್ನು ನಂಬುವಂತೆ ಮಾಡಿದೆ. ದೇವರ ಅಂಶವಾದ ಭಗವಂತನು ಹೇಳಿದ ಜ್ಞಾನವೊಂದರ ಸಾರಾಂಶವನ್ನು ತಿಳಿಯದ ಮನುಷ್ಯರು, ಎರಡುಸಲ ಎರಡು ರೂಪಗಳಲ್ಲಿ, ಎರಡು ದೇಶಗಳಲ್ಲಿ ಹೇಳಿದ ಭಗವಂತನು ಒಬ್ಬನೇಯೆಂದು ತಿಳಿಯದೆ, ತಮ್ಮ ತಲೆಯಲ್ಲಿನ ಮಾಯೆಬಲೆಯಲ್ಲಿ ಸಿಲುಕಿಕೊಂಡು ಕೃಷ್ಣನು, ಯೇಸು ಬೇರೆಬೇರೆ ಮತಗಳ, ಬೇರೆಬೇರೆ ವ್ಯಕ್ತಿಗಳೆಂದು, ಅವರು ಬೋಧಿಸಿರುವುದು ಬೇರೆಬೇರೆ ಬೋಧನೆಗಳೆಂಬ ಭ್ರಮೆಯಲ್ಲಿ ಬಿದ್ದಿದ್ದಾರೆ. ಹಾಗೆ ದೇವರ ಪಥವನ್ನು ಬಿಟ್ಟು ಮಾಯೆ ಮತದಲ್ಲಿ ಸಿಲುಕಿಕೊಂಡು ನಾವು ಇಂತಹ ಮತದವರೆಂದು ಹೇಳಿಕೊಳ್ಳುತ್ತಾ, ನಮ್ಮ ಮತ ಅಭಿವೃದ್ಧಿಯಾಗಬೇಕೆಂದು ತಮ್ಮ ಮತವನ್ನು ಅಭಿವೃದ್ಧಿ ಮಾಡಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಾರೆ. ತಮ್ಮ ಮತವನ್ನು ಬೆಳೆಸಿಕೊಳ್ಳಬೇಕೆಂದರೆ ಇತರ ಮತವನ್ನು ಕಡಿಮೆಮಾಡಬೇಕು. ಇತರ ಮತದವರು ಅವರ ಮತವನ್ನು ಬಿಟ್ಟು ತಮ್ಮ ಮತದೊಳಗೆ ಬಂದಾಗಲೇ ತಮ್ಮ ಮತ ಬೆಳೆಯುತ್ತದೆ. ಒಂದು ಮತ ತಗ್ಗದೆ ಮತ್ತೊಂದು ಮತ ಬೆಳೆಯುವುದಿಲ್ಲ. ಹಾಗೆ ಒಂದು ಮತ ಕಡಿಮೆಯಾಗಬೇಕೆಂದರೆ, ಅನೇಕ ವಿಧಗಳ ಆಚರಣೆಗಳಿಂದ ಒಂದು ಮತವನ್ನು ಇತರ ಮತದವರು ಕಡಿಮೆ ಮಾಡಬೇಕಾಗಿದೆ. ತಮ್ಮ ಮತದಲ್ಲಿನ ಬೋಧನೆಯನ್ನು ಹೇಳಿ ಬೋಧನೆಯಿಂದ ಒಪ್ಪಿಸಿ, ಇತರ ಮತದವರನ್ನು ತಮ್ಮ ಮತದೊಳಗೆ ಸೇರಿಸಿಕೊಳ್ಳಬಹುದು. ಇಲ್ಲದಿದ್ದರೆ ದೌರ್ಜನ್ಯದಿಂದಾಗಲಿ ಹಿಂಸೆಯಿಂದಾಗಲಿ, ಹೊರಗಿಟ್ಟಾಗಲಿ ಇತರ ಮತದವರನ್ನು ತಮ್ಮ ಮತದೊಳಗೆ ಬರುವಂತೆ ಮಾಡಿಕೊಳ್ಳಬಹುದು.

ಈ ಕಾಲದಲ್ಲಿ ಕೆಲವರು ತಮ್ಮ ಮತದಲ್ಲಿನ ಜ್ಞಾನದಿಂದ ಕೆಲವರನ್ನು ಆಕರ್ಷಿಸುವುದಕ್ಕೆ ಪ್ರಯತ್ನಿಸುತ್ತಿರುವಾಗ, ಬಹಳಜನ ಹಿಂಸಾಮಾರ್ಗವನ್ನು ಉಪಯೋಗಿಸಿ ಪರಮತವನ್ನು ನಾಶ ಮಾಡಿದರೆ ತಮ್ಮ ಮತ ದೊಡ್ಡದಾಗುತ್ತದೆಂದು, ಆ ಮತದವರು ಭಯಪಟ್ಟು ತಮ್ಮ ಮತದೊಳಗೆ ಬರುತ್ತಾರೆಂದು ಪ್ರಯತ್ನಿಸುತ್ತಿದ್ದಾರೆ. ಈ ವಿಧವಾಗಿ ಕೊನೆಗೆ ಮಾಯೆಯಿಂದ ಕೂಡಿಕೊಂಡ ಮತಗಳೆಲ್ಲ ಹಿಂಸಾಮಾರ್ಗದಲ್ಲಿ ಪ್ರಯಾಣಿಸುತ್ತಿವೆ. ನಾವು ಇಂದೂ ಮತದಲ್ಲಿ ಹುಟ್ಟಿರುವುದರಿಂದ ನಮ್ಮದು ಇಂದೂ ಮತವಲ್ಲ, ನಮ್ಮದು ನಿಜಕ್ಕೆ ಇಂದೂ ಪಥ ಎಂದು ತಿಳಿಸುವುದಕ್ಕೆ ಇಂದೂಮತ X, ಇಂದೂಪಥ √ ಎನ್ನುವ ಒಂದು ಗ್ರಂಥವನ್ನು ಪ್ರಚುರಿಸಿದರೆ, ನಮ್ಮನ್ನೇ ಕ್ರೈಸ್ತರೆಂದು ಪ್ರಚಾರ ಮಾಡಿ, ನಮ್ಮ ಮೇಲೆ ನಂದ್ಯಾಲ ಕೋರ್ಟಿನಲ್ಲಿ ಕೇಸುಗಳು ಇಟ್ಟಿರುವ ಮಹಾನಂದಿ ಹಿಂದೂಗಳು ಪ್ರಸ್ತುತ ಕಾಲದಲ್ಲಿ ಇದ್ದಾರೆಂದರೆ ಮತ ಎನ್ನುವ ಮಾಯೆ ಮನುಷ್ಯನಲ್ಲಿ ಎಷ್ಟು ಆಳವಾಗಿ ತೂರಿಹೋಗಿದೆಯೊ ಅರ್ಥವಾಗುತ್ತಿದೆ. ದೇವರಿಗೆ ಸಂಬಂಧಿಸಿದ ಜ್ಞಾನ ಪಥವು ಯಾವಮಾತ್ರವು ನೋಡುವುದಕ್ಕಾದರೂ ಕಾಣಿಸದಂತಾಗಿಹೋಗಿದೆ. ಈ ಮತ ಆ ಮತ ಅನ್ನದಂತೆ ಎಲ್ಲಾ ಮತಗಳು ಹಿಂಸಾ ವಿಧಾನವನ್ನೇ ಆಯ್ಕೆ ಮಾಡಿಕೊಂಡು ತಮ್ಮ ಮತವನ್ನು ಅಭಿವೃದ್ಧಿ ಮಾಡಿಕೊಳ್ಳುವು ದಕ್ಕೆ ಪ್ರಯತ್ನಿಸುತ್ತಿದ್ದಾರೆ. ತಲೆಯಲ್ಲಿನ ಮಾಯೆ ನಿನ್ನ ಮತದಲ್ಲಿನ ದೇವರೇ ನಿಜವಾದ ದೇವರು, ಇತರ ಮತದಲ್ಲಿನ ದೇವರು ದೇವರೇ ಅಲ್ಲವೆಂದು ತಿಳಿಸುವುದರಿಂದ, ಮನುಷ್ಯ ಪ್ರತ್ಯಕ್ಷವಾಗಿ ಎರಡನೆ ಮತದಲ್ಲಿನ ದೇವರನ್ನು ದೂಷಿಸುವುದಕ್ಕೆ ಪ್ರಾರಂಭಿಸುತ್ತಿದ್ದಾನೆ. ಮನುಷ್ಯನಲ್ಲಿನ ದೇವರಮೇಲೆ ವಿಶ್ವಾಸವೇ ಅದೇ ದೇವರನ್ನು ದೂಷಿಸುವಂತೆ ಮಾಡುವುದಲ್ಲದೆ, ಅದೇ ದೇವರನ್ನು ವಿಶ್ವಾಸಿಸಿದವನನ್ನು ಸಾಯಿಸುವಂತೆ ಸಹ ಮಾಡುತ್ತಿದೆ. ಎಲ್ಲಾ ಮತದವರು ಎಲ್ಲರನ್ನು ಸೃಷ್ಟಿಸಿರುವುದು ದೇವರೇ ಎನ್ನುತ್ತಾರೆ. ಅಷ್ಟರಲ್ಲಿಯೇ ನಿನ್ನ ಮತ, ನಿನ್ನ ದೇವರು ಎಂದು ದೇವರನ್ನು ಎರಡಾಗಿ ಮಾಡಿ ಮಾತನಾಡುತ್ತಾರೆ. ಇದನ್ನೆಲ್ಲ ಗಮನಿಸಿದರೆ ದೈವಪಥ ತಿಳಿಯದೆ ಇರುವುದರಿಂದ ಮನುಷ್ಯ ಮಾಯೆ ಮತದಲ್ಲಿ ಮುಳುಗಿ ಕೊನೆಗೆ ದೇವರನ್ನು ಸೇರಲಾರನೆಂದು ಅರ್ಥವಾಗುತ್ತಿದೆ.

ಇಲ್ಲಿಯವರೆಗೂ ನಾವು ಹೇಳಿಕೊಂಡ ವಿಧಾನದಲ್ಲಿಯೇ ಹಿಂದೂಮತ, ಕ್ರೈಸ್ತಮತ ಎನ್ನುವವು ತಯಾರಾಗಿವೆ. ಈ ದಿನ ಹಿಂದೂಮತದಲ್ಲಿ ದೇವರ ಗುಡಿ ಇದ್ದರೂ, ದೇವತೆಗಳ ಗುಡಿಗಳು ಅನೇಕ ತಯಾರಾಗಿ, ಯಾರು ದೇವರು ಎನ್ನುವ ಗುರುತು ಇಲ್ಲದಂತೆ ಹೋಗಿದೆ. ಹಾಗೆ ಕ್ರೈಸ್ತಮತದಲ್ಲಿ ಪ್ರಾರ್ಥನಾ ಮಂದಿರವನ್ನು ಕಟ್ಟಿಕೊಂಡು ಯೇಸುವನ್ನು ಸಾಯಿಸಿದ ಶಿಲುಬೆಯನ್ನು (ದೊಡ್ಡ ಶಿಲುಬೆ) ಚರ್ಚಿಗಳ ಮೇಲೆ ಇಟ್ಟುಕೊಳ್ಳುವುದು ನಡೆಯುತ್ತದೆ. ಹಿಂದೂಗಳಿಗೆ ದೇವತೆಗಳೆಂದರೆ ಏನೋ, ದೇವರೆಂದರೆ ಏನೋ ಅರ್ಥವಾಗದಂತೆ ಹೋಗಿದೆ. ಹಾಗೆ ಕ್ರೈಸ್ತರಿಗೆ ಶಿಲುಬೆ ಎಂದರೆ ಏನೋ, ದೇವರೆಂದರೆ ಏನೋ ಅರ್ಥ ವಾಗದಂತೆ ಹೋಗಿದೆ. ಹಾಗೆಯೇ ಕ್ರೈಸ್ತರಿಗೆ ಶಿಲುಬೆ ಅಂದರೇ ಏನೋ, ದೇವರೆಂದರೇ ಏನೋ ಅರ್ಥವಾದಂತೆ ಹೋಗಿದೆ.ಈ ವಿಧವಾಗಿ ಪ್ರಜೆಗಳಲ್ಲಿ ಕೆಲವರಲ್ಲಿ ದೈವಭಕ್ತಿ ಇದ್ದರೂ, ಕೊನೆಗದು ದೆವ್ವದ ಭಕ್ತಿಯಂತೆ ಬದಲಾಗಿಹೋಗಿದೆ. ಇದು ದೇವರಭಕ್ತಿ ಎಂದು ಹೇಳುವುದಕ್ಕೆ ಅವಕಾಶ ಇಲ್ಲದಂತೆಹೋಗಿದೆ. ನಮ್ಮ ಮಾತುಗಳು ಸ್ವಲ್ಪ ವಿಡ್ಡೂರವಾಗಿದ್ದರೂ ಕ್ರೈಸ್ತರಲ್ಲಿ ಶಿಲುಬೆಗೆ ಹತ್ತಿರವಾಗಿದ್ದು, ದೇವರಿಗೆ ದೂರವಾಗಿರುವ ಮಾತು ನಿಜವೇ. ಹಾಗೆಯೇ ಹಿಂದೂಗಳು ದೇವತೆಗಳಿಗೆ ಹತ್ತಿರವಾಗಿದ್ದು ದೇವರಿಗೆ ದೂರವಾಗಿರುವ ಮಾತು ನಿಜವೇ. ಪ್ರಜೆಗಳೆಲ್ಲರೂ ದೇವರ ಜ್ಞಾನವನ್ನು ತಿಳಿದುಕೊಂಡು ದೇವರಿಗೆ ಹತ್ತಿರವಾಗಬೇಕೆಂದು ಹೇಳುತ್ತಿದ್ದೇವೆ ಹೊರತು ಬೇರೆ ಭಾವನೆ ಏನು ಇಲ್ಲವೆಂದು ಎಲ್ಲರೂ ಗ್ರಹಿಸಬೇಕು. ಅಷ್ಟೇ ಅಲ್ಲದೆ ಮನುಷ್ಯರೆಲ್ಲರಿಗೂ ತಂದೆ ಒಬ್ಬನೇಯೆಂದು, ಎಲ್ಲರೂ ಆತನ ಸೃಷ್ಟಿಯಲ್ಲಿನವರೇ ಯೆಂದು, ಆತನು ಹೊರತು ಈ ವಿಶ್ವದಲ್ಲಿ ಬೇರೆ ದೇವರೇ ಇಲ್ಲವೆಂದು ತಿಳಿಯಬೇಕು. ಮಧ್ಯದಲ್ಲಿ ಮನುಷ್ಯರು ಕಲ್ಪಿಸಿಕೊಂಡಿರುವವೇ ಮತಗಳೆಂದು, ಮತಗಳನ್ನನುಸರಿಸಿ ದೇವರು ಇಲ್ಲವೆಂದು, ಜ್ಞಾನಪಥವನ್ನನುಸರಿಸಿ ದೇವರಿದ್ದಾನೆಂದು ಪ್ರತಿಯೊಬ್ಬರು ತಿಳಿಯಬೇಕು. ಹಾಗಾದರೇನೆ ಮನುಷ್ಯ ಮಾಯೆಯಿಂದ ಹೊರಬೀಳುತ್ತಾನೆ. ಇಂದಿನಕಾಲದಲ್ಲಿ ಮತದ ಹೆಸರು

ಹೇಳಿಕೊಳ್ಳುವ ಪ್ರತಿ ಮನುಷ್ಯ ಮಾಯೆಯಲ್ಲಿರು ವಂತೆ ಎಂದು ಅರ್ಥವಾಗುತ್ತಿದೆ. ಹಾಗೆ ತನಗೆ ತಿಳಿಯದಂತೆಯೇ ಮಾಯೆಯಲ್ಲಿ ಸಿಲುಕಿಕೊಂಡ ಮನುಷ್ಯ, ನಾನು ಜ್ಞಾನದಲ್ಲಿ ಇದ್ದೇನೆಂದು ಕೊಂಡರೂ, ನನಗೆ ದೇವರ ಮೇಲೆ ವಿಶ್ವಾಸ ಇದೆಯೆಂದು ಅಂದುಕೊಂಡರೂ, ಪ್ರತ್ಯಕ್ಷವಾಗಿ ದೈವಭಕ್ತಿಯನ್ನು ವ್ಯಕ್ತ ಮಾಡುತ್ತಿದ್ದರೂ, ಆತನು ಮಾತ್ರ ದೈವದೂಷಕನೇ, ದೇವರಿಗೆ ನಿತ್ಯ ವಿರೋಧಿಯೇ. ಈ ಮಾತು ಕೂಡ ವಿಚಿತ್ರವಾಗಿ ಕಾಣಿಸಿದರೂ ನನ್ನ ಮಾತು ವಾಸ್ತವವೇ ಎನ್ನುವುದಕ್ಕೆ ಈ ವಿಧವಾಗಿ ಹೇಳುತ್ತಿದ್ದೇನೆ ನೋಡಿರಿ.

ಯಾವಾಗಾದರೆ ಮತದ್ವೇಷ ಮದಿಯಲ್ಲಿ ಇದೆಯೋ, ಆಗ ಆತನು ಆ ಮತ ದೇವರನ್ನು ನಿಂದಿಸುತ್ತಿದ್ದಂತೆ ಆಗುತ್ತದೆ. ಇತರ ಮತ ದೇವರನ್ನು ಅಸೂಯೆಯಿಂದ, ದ್ವೇಷದಿಂದ ಆತನು ದೇವರೇ ಅಲ್ಲ ಎಂದಾಗ ಆ ಮಾತು ನೇರವಾಗಿ ತನ್ನ ದೇವರಿಗೇ ತಗಲುತ್ತದೆ. ತನ್ನ ದೇವರ ಮೇಲೆ ವಿಶ್ವಾಸದಿಂದ ಇರುತ್ತಾ, ನಮ್ಮ ದೇವರೇ ನಿಜವಾದ ದೇವರು ಎಂದು ಹೊಗಳಿದರೂ, ಇತರ ಮತ ದೇವರನ್ನು ದೂಷಿಸುವುದರಿಂದ ಅದು ತನ್ನ ದೇವರನ್ನು ದೂಷಿಸಿದಂತೆ ಆಗುತ್ತದೆ. ಉದಾಹರಣೆಗೆ ಒಬ್ಬ ಕ್ರೈಸ್ತನು ತನ್ನ ಯೇಸು ಮೇಲಿನ ಭಕ್ತಿಯಿಂದ ಹಿಂದೂ ಮತದಲ್ಲಿನ ಕೃಷ್ಣನನ್ನು ದೇವರೇ ಅಲ್ಲವೆಂದರೂ, ತನ್ನ ಯೇಸುವೇ ದೇವರೆಂದು ಕೃಷ್ಣನನ್ನು ದೂಷಿಸಿದರೂ, ಆ ದೂಷಣ ಯೇಸುವನ್ನು ದೂಷಿಸಿದಂತೆ ಆಗುತ್ತದೆ. ಕ್ರೈಸ್ತನು ಕೃಷ್ಣನನ್ನು ದೂಷಿಸಿದರೆ ಆತನು ವಾಸ್ತವವಾಗಿ ಯೇಸುವನ್ನು ದೂಷಿಸಿದಂತಾಗುತ್ತದೆ. ಹಾಗೆಯೇ ಒಬ್ಬ ಹಿಂದೂ ಯೇಸುನನ್ನು ಕೀಳುಭಾವದಿಂದ ನೋಡಿದರೂ, ಆತನನ್ನು ದೂಷಿಸಿದರೂ ಅದು ಕೃಷ್ಣನನ್ನು ದೂಷಿಸಿದಂತಾಗುತ್ತದೆ. ಹಾಗಾಗುವುದಕ್ಕೆ ಕಾರಣ ಮತ್ತೊಂದುಸಲ ಜ್ಞಾಪಕ ಮಾಡಿದರೆ ಕೃಷ್ಣನು, ಯೇಸು ಇಬ್ಬರೂ ಒಬ್ಬರೇ ಆದ್ದರಿಂದ ಒಬ್ಬರನ್ನು ದೂಷಿಸಿದರೆ ಮತ್ತೊಬ್ಬರನ್ನು ದೂಷಿಸಿ ದಂತಾಗುತ್ತದೆ. ಈಗ ಕೆಲವರು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ಇಬ್ಬರೂ ಒಬ್ಬರೇಯೆನ್ನುವ ವಿಷಯ ನಮಗೆ ತಿಳಿದಿಲ್ಲ. ನಮ್ಮ ಮತವೊಂದರ ಯೇಸುನನ್ನು ನೂರುಸಲ ನಮಸ್ಕರಿಸಿದ ನಾವು ಕೃಷ್ಣನನ್ನು ದೇವರಲ್ಲ ಎಂದು ಒಂದು ಸಲ ಅಂದರೂ, ಆತನನ್ನೇ

ನೂರುಸಲ ಮುಗಿದಂತೆ, ಒಂದುಸಲ ದೂಷಿಸಿದಂತೆ ಆಗುತ್ತದೆ ಅಲ್ಲವೆ! ತಿಳಿಯದೆ ಒಂದುಬಾರಿ ದೂಷಿಸಿದರೂ, ನೂರುಸಲ ನಮಸ್ಕರಿಸಿದ್ದೇವೆ ಅಲ್ಲವೆ! ಆಗ ದೂಷಣೆಗಿಂತ ಮುಗಿದಿರುವುದೆ ಹೆಚ್ಚಾಗುತ್ತದೆ ಅಲ್ಲವೆ ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ನೀನು ಬೀದಿಯಲ್ಲಿ ಹೋಗುತ್ತಿರುವಾಗ ಪ್ರತಿ ದಿನ ನಿನ್ನನ್ನು ನೋಡಿ ಒಬ್ಬ ಮನುಷ್ಯ ನಮಸ್ಕಾರ ಇಡುತ್ತಿದ್ದಾನೆಂದುಕೊಳ್ಳಿ. ಹಾಗೆ ಒಂದು ವರ್ಷಕಾಲ ನಡೆದಿದೆ. ಅಂದರೆ 365 ದಿನಗಳು ನಿನ್ನನ್ನು ನೋಡಿ ನಮಸ್ಕರಿಸಿದ ಮನುಷ್ಯ ಒಂದು ದಿನ ನಿನ್ನನ್ನು ನೋಡಿ ತಪ್ಪಾಗಿ ಅರ್ಥೈಸಿಕೊಂಡು ಬೇರೆ ವ್ಯಕ್ತಿ ಅಂದುಕೊಂಡು, ತನಗೆ ಸರಿಹೋಗದ ಹಳೆ ಶತ್ರುವಂತೆ ಕಾಣಿಸಿರುವುದರಿಂದ ಆತನಿಗೆ ಕೋಪ ಬಂದಿದೆ. ಆ ಕೋಪದಲ್ಲಿ ಇದಕ್ಕಿಂದಂತೆ ಕಾಲಿನಲ್ಲಿನ ಚಪ್ಪಲಿಯನ್ನು ತೆಗೆದುಕೊಂಡು ನಿನ್ನಕಡೆ ತೋರಿಸಿ ಹತ್ತಿರಕ್ಕೆ ಬಾ ಚೆಪ್ಪಲಿಯಿಂದ ಹೊಡೆಯುತ್ತೇನೆನ್ನುವಂತೆ ಸನ್ನೆ ಮಾಡಿದ್ದಾನೆ. ಆಗ ನೀವು ಈತನು 365 ದಿನಗಳು ನನಗೆ ನಮಸ್ಕರಿಸಿದ್ದಾನೆ ಒಂದುದಿನ ಚೆಪ್ಪಲಿಯಿಂದ ಹೊಡೆದರೆ ಹೊಡೆಯಲಿ ಬಿಡು ಎಂದು ಕೊಳ್ಳುತ್ತೀಯಾ? ಅಥವಾ ಆತನ ಮೇಲೆ ಕೋಪ ತಂದುಕೊಳ್ಳುತ್ತೀಯಾ? ಯಾರಿಗಾದರೂ ಕೋಪವೇ ಬರುತ್ತದೆ. ಇಷ್ಟು ದಿನ ಮುಗಿದಿದ್ದಾನೆ ಒಂದುದಿನ ಹೊಡೆದರೆ ಏನಾಗುತ್ತದೆಂದು ಯಾರೂ ಅಂದುಕೊಳ್ಳುವುದಿಲ್ಲ. ಎಷ್ಟು ತಿಳುವಳಿಕೆಯುಳ್ಳವ ನಾದರೂ ಎದುರು ದಾಳಿಗಾದರೂ ಇಳಿಯುತ್ತಾನೆ. ಇಲ್ಲದಿದ್ದರೆ ನಂತರ ನಿನ್ನಕಥೆ ನೋಡುತ್ತೇನೆಂದು ಅಂದು ಕೊಳ್ಳುತ್ತಾನೆ.

ಆ ವಿಧವಾಗಿ ಯಾವ ದೇವರನ್ನಾದರೂ ಒಂದು ಕಡೆ ಮುಗಿಯುತ್ತಾ, ಒಂದು ಕಡೆ ದೂಷಿಸಿದರೆ ಮುಗಿದಿರುವುದಕ್ಕಿಂತ ಹೆಚ್ಚಾಗಿ ದೂಷಿಸಿರುವುದನ್ನೆ ತೆಗೆದುಕೊಳ್ಳುತ್ತಾರೆ. ನೀನು ಯಾವ ಮತದಲ್ಲಿ ಇದ್ದರೂ, ನೀನು ಮುಗಿಯುತ್ತಿರುವ ದೇವರು ಯಾರಾದರೂ, ಇತರ ಮತದಲ್ಲಿ ಇರುವ ದೇವರು ಸಹ ನಿನ್ನ ದೇವರೇ ಆಗಿರುವುದರಿಂದ, ನೀನು ಯಾರನ್ನು ದೂಷಿಸಿದರೂ ಅದು ನಿನ್ನ ದೇವರನ್ನು ದೂಷಿಸಿದಂತೆ ಆಗುತ್ತದೆ. ಆದ್ದರಿಂದ ಕೃಷ್ಣನನ್ನು ದೂಷಿಸಿದರೂ ಯೇಸುನನ್ನು ದೂಷಿಸಿದರೂ ಅಸಲಾದ ಸೃಷ್ಟಿಕರ್ತನನ್ನು ದೂಷಿಸಿದಂತೆ ಆಗುತ್ತದೆ.

